ಡಾ. ಬ್ರಹ್ಮರ್ಷಿ ಪಿತಾಮಹ ಸುಭಾಷ್ ಪತ್ರೀಜಿ ಆಶೀರ್ವಾದಗಳೊಂದಿಗೆ

# ಮರಣಿಸುವ ಮುಂಚೆಯೇ ಮರಣಿಸಬೇಕು!

ತಟವರ್ತಿ ವೀರರಾಘವರಾವು

ಕನ್ನಡ ಅನುವಾದ :
ಸುಮಲತರಾಜು / ವನಜ



ಬ್ರಹ್ಮರ್ಷಿ ಪತ್ರೀಜೀ ಆಶೀರ್ವಾದಗಳೊಂದಿಗೆ...

# ಮರಣಿಸುವ ಮುಂಚೆಯೇ ಮರಣಿಸಬೇಕು!

**ಮೂಲ : ತಟವರ್ತಿ ವೀರರಾಘವರಾವು**

**ಕನ್ನಡ ಅನುವಾದ : ಸುಮಲತರಾಜು, ವನಜ**

**ಶ್ರೀರಾಮ ಪಬ್ಲಿಕೇಶನ್ಸ್**

ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,

ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು – 560 066

---

**ಪಿರಮಿಡ್ ವ್ಯಾಲಿ ಇಂಟರ್‌ನ್ಯಾಷನಲ್**

ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ರಸ್ತೆ, ಬೆಂಗಳೂರು

**Maranisuva Muncheye Maranisabeku**
Edited & Published by **Srirama Publications,** Sri Ramadhama Pyaramid Dyanakendra, Narayanappa Garden, Whitefiled, Bangalore - 560 066.
**M.: 9449695503, 8050082689, 9886532204**

| | | |
|---|---|---|
| ಮೊದಲನೇ ಮುದ್ರಣ | : | 2023 |
| ಹಕ್ಕುಗಳು | : | ಪ್ರಕಾಶಕರು |
| ಪ್ರಕಾಶಕರು | : | **ಶ್ರೀರಾಮ ಪಬ್ಲಿಕೇಶನ್ಸ್**<br>ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,<br>ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್,<br>ಬೆಂಗಳೂರು – 560 066<br>ಮೊ.: 9449695503, 9886532204 |
| ಬಳಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪಲಿಥೊ ಡೆಮಿ 1/8 |
| ಪ್ರತಿಗಳು | : | 1000 |
| ಬೆಲೆ | : | |
| ಪುಟಗಳು | : | |
| ಮುಖಪುಟ | : | ಚಂದ್ರಕಾಂತ ಪಟ್ಟಣ |
| ಅಕ್ಷರ ಜೋಡಣೆ | : | **ನಿರಂತರ ಸಾಯಿ ಕಮ್ಯೂನಿಕೇಷನ್ ಪ್ರೈ .ಲಿ**<br>ಮೊ: 96328 12541 |

ಮುದ್ರಣ :
**ಪೂರ್ಣಾ ಗ್ರಾಫಿಕ್ಸ್,**
ಬೆಂಗಳೂರು 9844167475

# ಸ್ವ-ಪರಿಚಯ

ನನ್ನ ಹೆಸರು ಎಚ್.ಎನ್.ಶ್ರೀನಿವಾಸ. ವೃತ್ತಿಯಲ್ಲಿ ಸಿವಿಲ್ ಇಂಜಿನಿಯರ್. ಪದವಿ ಪಡೆದ ಆರಂಭದಲ್ಲಿ, ಮೂರು ವರ್ಷಗಳ ಕಾಲ ಸರ್ಕಾರಿ ಉದ್ಯೋಗದಲ್ಲಿ ಕೆಲಸ ಮಾಡಿದ ನಂತರ, ಆ ಉದ್ಯೋಗದಲ್ಲಿ ನಿರಾಸಕ್ತಿ ಹೊಂದಿದ ನಾನು, 1990ರಲ್ಲಿ ನನ್ನ ಸ್ವಂತ ವ್ಯವಹಾರವನ್ನು ಪ್ರಾರಂಭಿಸಿದೆ. ನನ್ನ ಆಧ್ಯಾತ್ಮಿಕ ಪ್ರಯಾಣವು 1999ರಲ್ಲಿ ಎಸ್.ಎಸ್.ವೈ. ಅಂದರೆ, ಸಿದ್ಧಸಮಾಧಿ ಯೋಗ ಗುರೂಜಿಯವರಿಂದ ಪ್ರಾರಂಭವಾಯಿತು. 2004ರಲ್ಲಿ ವೀರಾಂಜನೇಯ ದೇವಾಲಯವನ್ನು ಬೆಂಗಳೂರಿನ ವೈಟ್‌ಫೀಲ್ಡ್‌ನಲ್ಲಿ ನಿರ್ಮಿಸಲಾಯಿತು. ಎಲ್ಲಾ ಆಚರಣೆಗಳು ದೇವಾಲಯದಲ್ಲಿ ನಿಯಮಿತವಾಗಿ ನಡೆಯುತ್ತಿದ್ದವು. ಆಧ್ಯಾತ್ಮದ ಬಗ್ಗೆ ನನಗೆ ಒಲವು ಹೆಚ್ಚಾದಂತೆ ನಾನು ಮತ್ತು ನನ್ನ ಪತ್ನಿ ಎಸ್.ಎನ್.ವಿಜಯಲಕ್ಷ್ಮಿ ಸೇರಿ 2008ರಲ್ಲಿ ನಾವು ದೇವಾಲಯದ ಪಕ್ಕದಲ್ಲಿ 'ಶ್ರೀ ರಾಮಧಾಮ ಧ್ಯಾನ ಮಂದಿರ' ಎಂಬ ಹೆಸರಿನ ಒಂದು ಧ್ಯಾನ ಮಂದಿರವನ್ನು ನಿರ್ಮಿಸಿದೆವು. ಇದನ್ನು ಸಿದ್ಧಸಮಾಧಿ ಯೋಗ ಸಂಸ್ಥಾಪಕರಾದ ಡಾ.ಋಷಿ ಪ್ರಭಾಕರ್ ಗುರೂಜಿಯವರು ಉದ್ಘಾಟಿಸಿದರು. ಅಲ್ಲಿ ಎಸ್.ಎಸ್.ವೈ. ಶಿಕ್ಷಕರಿಂದ ಸಾಮೂಹಿಕ ಧ್ಯಾನ ತರಬೇತಿಗಳನ್ನು ಆಯೋಜಿಸುತ್ತಿದ್ದೆವು. 2009ರಲ್ಲಿ ಬ್ರಹ್ಮರ್ಷಿ ಪಿತಾಮಹ ಡಾ.ಸುಭಾಷ್ ಪತ್ರೀಜಿಯವರು ಧ್ಯಾನ ಅಧಿವೇಶನಕ್ಕಾಗಿ ಶ್ರೀರಾಮಧಾಮ ಕೇಂದ್ರಕ್ಕೆ ಭೇಟಿ ನೀಡಿದಾಗ 'ಆನಾಪಾನಸತಿ ಧ್ಯಾನ ವಿಧಾನ'ವನ್ನು ಪರಿಚಯ ಮಾಡಿಸಿದರು. ಪತ್ರೀಜಿಯವರನ್ನು ಭೇಟಿಯಾದ ನಂತರ, ದಿನನಿತ್ಯದ ನನ್ನ ಆಧ್ಯಾತ್ಮಿಕ ಅಭ್ಯಾಸದ ಕಾಲಾವಧಿಯನ್ನು ಹೆಚ್ಚಿಸಿದೆ. ಪಿ.ಎಸ್.ಎಸ್.ಎಂ.ನ ತತ್ವಸಿದ್ಧಾಂತದಲ್ಲಿ ಗುರು–ಶಿಷ್ಯರ ಕುರಿತಾದ ಒಂದು ಪ್ರಮುಖವಾದ ಅಂಶವು ನನ್ನ ಗಮನ ಸೆಳೆಯಿತು. 'ಯಾರೂ ಶಾಶ್ವತವಾಗಿ ಗುರುಗಳಲ್ಲ, ಯಾರೂ ಶಾಶ್ವತವಾಗಿ ಶಿಷ್ಯರೂ ಅಲ್ಲ, ಅವರಿಗೆ ಅವರೇ ಗುರುಗಳು. ಮಾಸ್ಟರ್ ಆಗಿ ಬದುಕಲು ಕಲಿಯಿರಿ, ಎಂದಿಗೂ ಶಿಷ್ಯರಾಗಿಯೇ ಇರಬೇಡಿ' ಎಂಬ ಪತ್ರೀಜಿಯವರ ಮಾತುಗಳು ಆಧ್ಯಾತ್ಮದಲ್ಲಿ ನನ್ನ ಆಸಕ್ತಿಯನ್ನು ಹೆಚ್ಚಿಸಿತು. 2013ರಲ್ಲಿ ಪತ್ರೀಜಿಯವರು ನನಗೆ ಪಿರಮಿಡ್ ವ್ಯಾಲಿ

ಇಂಟರ್‌ನ್ಯಾಷನಲ್ ಟ್ರಸ್ಟ್‌ನಲ್ಲಿ ಒಬ್ಬ ಟ್ರಸ್ಟಿಯಾಗಿ ಸೇವೆ ಮಾಡುವ ಸದವಕಾಶವನ್ನು ಒದಗಿಸಿದರು.

ಇದರಲ್ಲಿ ನನಗೆ 'ನಿತ್ಯಅನ್ನದಾನ ಸೇವೆ'ಯ ಜವಾಬ್ದಾರಿಯನ್ನು ವಹಿಸಲಾಯಿತು. ಪ್ರತಿಯೊಬ್ಬ ಮಾನವನು ಮಾಧವನಾಗಬೇಕಾದರೆ ಪ್ರತಿನಿತ್ಯವೂ ಶ್ರದ್ಧೆ, ಆಸಕ್ತಿಯಿಂದ ಧ್ಯಾನಾಭ್ಯಾಸ ಮಾಡಬೇಕು. ಅದರ ಜೊತೆಯಲ್ಲಿ 'ಸಸ್ಯಾಹಾರ', 'ಸ್ವಾಧ್ಯಾಯ', 'ಸಜ್ಜನ–ಸಾಂಗತ್ಯ, ಅಂದರೆ, ಸತ್ಸಂಗ' ಹಾಗೂ 'ಪಿರಮಿಡ್ ಶಕ್ತಿ ಬಳಕೆ' ಅವಶ್ಯಕ ಎಂದು ಆಧ್ಯಾತ್ಮಶಾಸ್ತ್ರ ತಿಳಿಸುತ್ತದೆ. ನಿರಂತರ, ಸಾಧನೆಯಿಂದ ಶಾರೀರಿಕ ಆರೋಗ್ಯ, ಮಾನಸಿಕ ಪ್ರಶಾಂತತೆ, ಬುದ್ಧಿ–ವಿಕಾಸ, ಆನಂದದ ಜೀವನ, ಆತ್ಮಜ್ಞಾನ ಮುಂತಾದವುಗಳು ಲಭಿಸುವುದು. ಹೊಸ ಯುಗದ ಆಧ್ಯಾತ್ಮ ಸಾಹಿತ್ಯವನ್ನು ಸ್ವಾಧ್ಯಾಯಕ್ಕಾಗಿ ಪ್ರಕಟಿಸುವ ಹಿನ್ನೆಲೆಯಲ್ಲಿ 'ಶ್ರೀರಾಮ ಪಬ್ಲಿಕೇಶನ್ಸ್' ಹೆಸರಿನ ಪುಟ್ಟ ಪ್ರಕಾಶನ ಸಂಸ್ಥೆಯನ್ನು ಆರಂಭಿಸಲಾಯಿತು. ಪತ್ರೀಜಿಯವರ ಮತ್ತು ತಟವರ್ತಿ ವೀರರಾಘವರಾವ್ ರವರ ಆದೇಶದ ಮೇರೆಗೆ ನಮ್ಮ ಪ್ರಕಾಶನದ ವತಿಯಿಂದ ಕೆಲವು ಆಧ್ಯಾತ್ಮಿಕ ಪುಸ್ತಕಗಳನ್ನು ಪ್ರಕಟಿಸಲಾರಂಭಿಸಿದೆವು. ಕೆಲವು ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿ ಮುದ್ರಿಸಲಾಯಿತು. ಕೆಲವು ತೆಲುಗು ಪುಸ್ತಕಗಳನ್ನು ಮರುಮುದ್ರಣ ಮಾಡಲಾಯಿತು. ತೆಲುಗಿನ ಉತ್ತಮ ಪುಸ್ತಕಗಳು ಕನ್ನಡದ ಆಧ್ಯಾತ್ಮ ಸಾಧಕರಿಗೂ ದೊರಕಲೆಂದು ನಾವು ಇಂತಹ ಪ್ರಯತ್ನ ಮಾಡಿದ್ದೇವೆ.

ತಮ್ಮ ವಿಶ್ವಾಸಿಗಳು,

**ಎಚ್.ಎನ್.ಶ್ರೀನಿವಾಸ**

ಮತ್ತು

**ಎಸ್.ಎನ್.ವಿಜಯಲಕ್ಷ್ಮಿ**

**ಸಂಸ್ಥಾಪಕರು,**

ಶ್ರೀರಾಮಧಾಮ ಧ್ಯಾನಕೇಂದ್ರ

## ಪರಿವಿಡಿ

# ಮರಣಿಸುವ ಮುಂಚೆಯೇ ಮರಣಿಸಬೇಕು!

ಸಹಜವಾಗಿ ಮರಣದ ನಂತರ ಏನು ನಡೆಯುವುದು? ಯಾರಿಗೂ ಗೊತ್ತಿಲ್ಲ. ದೊಡ್ಡ ದೊಡ್ಡ ಪಂಡಿತರು ಕೂಡ ಮರಣದವರೆಗೆ ಮಾತ್ರವೇ ಹೆಚ್ಚು ಹೇಳುತ್ತಾರೆ. ಮರಣದ ಆಚೆಗೆ ಸಿಂಪಲ್ಲಾಗಿ ಏನೇನೋ ಹೇಳುತ್ತಾರೆ. ಆದ್ದರಿಂದ ಯಾರಿಗೂ ಮರಣದ ನಂತರದ ಜೀವನದ ಬಗ್ಗೆ ಸರಿಯಾದ ಅವಗಾಹನೆ ಇಲ್ಲ.

ಆದರೆ ನಾವು ತಿಳಿದುಕೊಳ್ಳುತ್ತಾ ಹೋದರೆ ಚೆನ್ನಾಗಿ ಅರ್ಥ ಆಗಿ ಬದುಕಿದ್ದಾಗ ನಾವು ಹೇಗೆ ವರ್ತಿಸಬೇಕು? ನಮ್ಮಲ್ಲಿ ಎಂತಹ ಬದಲಾವಣೆಗಳು ತಂದುಕೊಳ್ಳಬೇಕು, ನಾವು ಹೇಗೆ ಜೀವಿಸಬೇಕು? ಎಂಬುದು ಚೆನ್ನಾಗಿ ಅರ್ಥವಾಗುತ್ತದೆ.

ಅದಕ್ಕಾಗಿಯೇ ಪತ್ರಿಯವರು ಯಾವುದು ಇಂಪಾರ್ಟೆಂಟ್, ಯಾವುದು ಎಲ್ಲರಿಗೂ ಅವಶ್ಯಕತೆಯೋ, ಯಾವುದು ಎಲ್ಲರೂ ಕಲಿತುಕೊಳ್ಳಬೇಕೋ, ಯಾವುದು ಎಲ್ಲರೂ ಜೀವನದಲ್ಲಿ ಆಚರಿಸಬೇಕೋ, ಯಾವುದು ಪ್ರತಿಯೊಬ್ಬರೂ ಆಚರಣೆಯಲ್ಲಿಟ್ಟು, ಜೀವನದಲ್ಲಿ ಶ್ರೇಷ್ಠವಾದ ಬದಲಾವಣೆಗಳನ್ನು ತಂದುಕೊಳ್ಳುತ್ತಾರೋ, ಅಂತಹ ವಿಷಯಗಳನ್ನೇ ಬೋಧಿಸುತ್ತಾರೆ, ಹೇಳುತ್ತಾರೆ.

ಈಗ ನಾವು ಅವರು ಹೇಳಿದಂತಹ ಜ್ಞಾನ ಸಂದೇಶಗಳಲ್ಲಿ ಒಂದು ವಿಷಯದ ಬಗ್ಗೆ ತಿಳಿದುಕೊಳ್ಳೋಣ. ಅದು ಯಾವುದೆಂದರೆ, “ಮರಣಿಸುವ ಮೊದಲೇ ಮರಣಿಸಬೇಕು” (ಸಾಯುವ ಮೊದಲೇ ಸಾಯಬೇಕು) ಅಂದರೆ ಮರಣಿಸಿದ ನಂತರ ಏನು ನಡೆಯುವುದು? ಅದನ್ನು ಮರಣಕ್ಕಿಂತ ಮೊದಲೇ ತಿಳಿದುಕೊಳ್ಳಬೇಕು.

ಈ ವಿಷಯದ ಬಗ್ಗೆ ಆತ್ಮಜ್ಞಾನಿಗಳಿಗೆ ಅವಗಾಹನೆ ಇರುತ್ತದೆ. ಆದ್ದರಿಂದ ನಾವು ಕೂಡ ತಿಳಿದುಕೊಳ್ಳೋಣ. ಎಷ್ಟು ತಿಳಿದುಕೊಂಡರೆ ಜೀವನದಲ್ಲಿ ನಾವು ಅಷ್ಟು ಲಾಭವನ್ನು ಪಡೆಯುತ್ತೇವೆ. ಆದ್ದರಿಂದ ಮರಣದ ನಂತರ ನಡೆಯುವುದರ ಬಗ್ಗೆ ಕೆಲವು ವಿಷಯಗಳನ್ನು ತಿಳಿದುಕೊಳ್ಳೋಣ.

ಸಹಜವಾಗಿ ಬಹಳಷ್ಟು ಜನ ಈ ವಿಷಯದ ಬಗ್ಗೆ ಪ್ರಸ್ತಾಪಿಸಿದ್ದಾರೆ, ಆದರೆ ಪತ್ರೀಜಿಯವರಷ್ಟು ಸ್ಥಾಯಿವುಳ್ಳವರು “ಮರಣಿಸುವ ಮೊದಲೇ ಮರಣ ಹೊಂದಬೇಕು”

ಎಂಬ ವಿಷಯವನ್ನು ಹೇಳಿದ್ದಾರೆ. ಆದ್ದರಿಂದ ಕೆಲವಷ್ಟು ಜನ ಯೋಗಿಗಳು ಹೇಳಿದ ವಿಷಯಗಳನ್ನು ನಾವು ಈಗ ತಿಳಿದುಕೊಳ್ಳೋಣ.

ಮುಖ್ಯವಾಗಿ ಕಬೀರ್ ರವರು ಹೀಗೆ ಹೇಳಿದ್ದಾರೆ,

"ಯಾವ ಸಾವಿಗೆ ಪ್ರಪಂಚವು ಭಯಪಡುತ್ತಿರುತ್ತದೋ! ಅದನ್ನು ಪಡೆಯುವುದರಲ್ಲಿ ನನಗೆ ಆನಂದವು ಇದೆ" ಎಂದಿದ್ದಾರೆ.

ನೋಡಿ ಪ್ರಪಂಚದಲ್ಲಿ ಎಲ್ಲರೂ ಸಾವಿಗೆ ತುಂಬಾ ಭಯಪಡುತ್ತಾರೆ. ಕಾರಣ ಸತ್ತು ಹೋಗುತ್ತೇವೆ ಎಂದು. ಆದರೆ ಕಬೀರ್ ಏನು ಹೇಳುತ್ತಿದ್ದಾರೆಂದರೆ ಆ ಸಾವು ಪಡೆಯುವುದರಲ್ಲಿಯೇ ತನಗೆ ಆನಂದವು ಇದೆ ಎಂದು ಅನ್ನುತ್ತಾರೆ. ಅಂದರೆ ಸಾವು ನನಗೆ ಆನಂದವನ್ನು ಕೊಡುತ್ತದೆ ಎಂದು ಹೇಳಿದ್ದಾರೆ.

ಪತ್ರಿಯವರು ಕೂಡ ಏನು ಹೇಳಿದ್ದಾರೆಂದರೆ? "ಹುಟ್ಟು ಸಂಭ್ರಮವೇ, ಸಾವು ಸಂಭ್ರಮವೇ"! ಅನ್ನುತ್ತಾರೆ. ಇದು ಕೇವಲ ಆತ್ಮಜ್ಞಾನಿ ವಿಷಯದಲ್ಲಿ ಎಂದು ಕೂಡ ಹೇಳಿದ್ದಾರೆ.

ಯಾರಾದರೂ ಸಾವಿಗೆ ಭಯಪಡುತ್ತಿದ್ದಾರೆ? ಎಂದರೆ ಅವರು ತುಂಬಾ ಅಜ್ಞಾನದಲ್ಲಿ ಇದ್ದಾರೆಂದು ಅರ್ಥ. ಆದರೆ ಕಬೀರ್ ಆ ಸಾವು ಪಡೆಯುವುದರಲ್ಲಿ ತನಗೆ ಆನಂದವು ಇದೆ ಅನ್ನುತ್ತಾರೆ. ಯಾಕೆಂದರೆ, ಸತ್ತ ಮೇಲೆ ಏನು ನಡೆಯುವುದೋ ಅವರಿಗೆ ಚೆನ್ನಾಗಿ ತಿಳಿದಿದೆ. ಸಾವು ಎಂಬುದು ಲಾಭ ಅಷ್ಟೆ. ಆದ್ದರಿಂದ ಆತ್ಮಜ್ಞಾನಿ ಸಾವಿಗೆ ದುಃಖ ಪಡುವುದಿಲ್ಲ, ಅಳುವುದಿಲ್ಲ.

ಆದ್ದರಿಂದ ಯಾರು ಧ್ಯಾನ ಮಾಡುತ್ತಾರೋ! ಈ ಜ್ಞಾನಮಾರ್ಗದಲ್ಲಿ ಇದ್ದಾರೋ! ಪತ್ರಿಯವರು ಹೇಳಿದ್ದನ್ನು ಮಾಡುತ್ತಾ ಇರುತ್ತಾರೋ! ಅವರಿಗೆ ಸಾವು ಲಾಭವನ್ನೇ ತಂದುಕೊಡುತ್ತದೆಂದು ಗೊತ್ತಿದೆಯಾದ್ದರಿಂದ, ಅವರು ಯಾರೂ ಕೂಡ ಸಾವಿಗೆ ಭಯಪಡವುದಿಲ್ಲ.

ಅದು ಯಾಕೆಂದರೆ? ಸತ್ತ ಮೇಲೆ ಲಾಭವನ್ನು ಕೊಡುವ ಕೆಲಸಗಳನ್ನು ಪತ್ರಿಯವರು ಎಲ್ಲರ ಕೈಯಲ್ಲೂ ಮಾಡಿಸಿದ್ದಾರೆ. ಆದ್ದರಿಂದ ಪತ್ರಿಯವರು ಹೇಳಿದಂತ ಎಲ್ಲಾ ಕೆಲಸಗಳನ್ನು ಯಾರು ಪ್ರತಿದಿನ ಮಾಡುತ್ತಿರುತ್ತಾರೋ ಅಸಲಿಗೆ ಅವರು ಸಾಯುವುದಕ್ಕೆ

ನೋವು ಪಡುವುದಿಲ್ಲ. ಭಯಪಡುವುದಿಲ್ಲ. ಆದರೆ ಸತ್ತರೆ ನಷ್ಟವಾಗುತ್ತೇವೆ ಎಂದುಕೊಂಡವರು ಭಯಪಡುತ್ತಾರೆ.

ನೋಡಿ ಹೆಂಡತಿ ಮೇಲಿನ ಮಮಕಾರ ಹೆಚ್ಚು ಬೆಳೆಸಿಕೊಂಡವನು, ಧನದ ಮೇಲೆ ವ್ಯಾಮೋಹ ಇಟ್ಟುಕೊಂಡು ಧನವನ್ನು ಸಂಪಾದಿಸಿ ಇಟ್ಟವನು, ಮಕ್ಕಳ ಮೇಲೆ ತುಂಬಾ ಮಮಕಾರ ಬೆಳೆಸಿಕೊಂಡವನು, ಆ ಧನವನ್ನು ಸಂಪತ್ತನ್ನು ಕೂಡಿಟ್ಟಿಕೊಂಡವನು, ಜೀವನವೆಲ್ಲ ಅದಕ್ಕಾಗಿಯೇ ಕಷ್ಟಪಟ್ಟವನು ಇನ್ನೂ ಅವೇ ಎಲ್ಲಾ ಸರ್ವಸ್ವವೂ ಅಂದುಕೊಂಡವನು, ಅದೇ ಜೀವನ ಎಂದುಕೊಳ್ಳುತ್ತಾ ಇರುವವನು, ಸತ್ತ ಮೇಲೆ ಇವನ್ನೆಲ್ಲ ಬಿಟ್ಟು ಹೋಗಬೇಕು, ಅಲ್ಲವೇ? ಎಂದು ಮತ್ತೂ ಎಷ್ಟು ಭಯಪಡುತ್ತಾನೆ? ಎಷ್ಟು ನೋವು ಪಡುತ್ತಾನೆ? ಒಂದು ಸಲ ಯೋಚಿಸಿ. ಯಾಕೆಂದರೆ, ಅವನ ಜೀವನವೆಲ್ಲ ಇದಕ್ಕಾಗಿಯೇ ವ್ಯರ್ಥ ಮಾಡಿಕೊಂಡಿದ್ದಾನೆ. ಅದೇ ತನ್ನ ಜೀವನ ಅಂದುಕೊಂಡಿದ್ದಾನೆ. ಜೀವನದಲ್ಲಿ ಅವನ್ನೇ ಸಂಪಾದಿಸಿಕೊಂಡಿದ್ದಾನೆ, ಅವನ್ನೇ ಕೂಡಿಟ್ಟಿದ್ದಾನೆ, ಅದನ್ನೇ ಮಾಡಿದ್ದಾನೆ. ಇಷ್ಟು ಮಾಡಿದ ಮೇಲೆ? ಸತ್ತು ಹೋದರೆ ಅವನ್ನೆಲ್ಲ ಬಿಟ್ಟುಬಿಡಬೇಕಾಗಿ ಬರುತ್ತದೆ. ಅವನು ಬಿಟ್ಟುಬಿಡಬೇಕೆಂದರೆ ಎಷ್ಟು ಭಯಪಡುತ್ತಾನೆ? ನೋಡಿ.

ಆದರೆ ಯಾರು ತನ್ನನ್ನು ತಾನು ಆತ್ಮ ಜ್ಞಾನಿ ಎಂದು ತಿಳಿದುಕೊಂಡು, ನಾನು ಕೆಲವು ದಿನಗಳಷ್ಟೇ ಈ ಭೂಮಿ ಮೇಲೆ ಇರುತ್ತೇನೆ, ಎಂದು ಅರ್ಥ ಮಾಡಿಕೊಂಡು ಕೆಲವು ದಿನಗಳ ನಂತರ ಈ ಶರೀರವನ್ನು ನಾನು ಬಿಟ್ಟುಬಿಡಬೇಕೆಂದು ತಿಳಿದುಕೊಂಡು, ಇವೆಲ್ಲವೂ ತಾತ್ಕಾಲಿಕವೆಂದು ತಿಳಿದು, ಅದಕ್ಕೆ ಅಷ್ಟು ಪ್ರಾಮುಖ್ಯತೆ ಕೊಡದೆ ತನ್ನವರ ಜೊತೆ ಇರುತ್ತಾನೋ, ಅವುಗಳ ಜೊತೆಯಲ್ಲಿದ್ದು ಈ ಶರೀರದಿಂದ ಆತ್ಮ ಲಾಭಕ್ಕೋಸ್ಕರ ಮಾಡಬೇಕಾದ ಸಾಧನೆಗಳನ್ನು ಮಾಡುತ್ತಾನೋ, ಅಂದರೆ ಶ್ವಾಸದ ಮೇಲೆ ಗಮನ ಇಟ್ಟು ಧ್ಯಾನವನ್ನು ಮಾಡುತ್ತಾನೋ, ಸಾತ್ವಿಕವಾದ ಶಾಖಾಹಾರವನ್ನು ತೆಗೆದುಕೊಳ್ಳುತ್ತಾ, ಜ್ಞಾನಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಓದುತ್ತಾ, ಅಂತಹ ಜ್ಞಾನವನ್ನು ಬೋಧಿಸುವ ಜನರ ಸಾಂಗತ್ಯವನ್ನು ಮಾಡುತ್ತಾ, ಈ ಆತ್ಮ ಮಾರ್ಗದಲ್ಲಿ ಸೇವಗಳನ್ನು ಮಾಡುತ್ತಾ, ಜ್ಞಾನವನ್ನು ಸಂಪಾದಿಸಿ ಕೊಳ್ಳುವುದರ ಮೂಲಕ ಆತ್ಮ ಆಗಿರುವ ತನಗೆ ಅನೇಕ ಲಾಭಗಳು ಲಭಿಸುತ್ತವೆ.

ಯಾಕೆಂದರೆ ಇಂತಹ ಕೆಲಸಗಳಿಂದ ಅವರು ಸತ್ತ ಮೇಲೆ ಈಗಿರುವ ಸ್ಥಿತಿಗಿಂತ ಇನ್ನೂ ಉನ್ನತ ಸ್ಥಿತಿಯನ್ನು ಅಂದರೆ ಇನ್ನೂ ಶ್ರೇಷ್ಠ ಸ್ಥಿತಿಯನ್ನು ಪಡೆಯುತ್ತಾರೆ. ಅವರಿಗೆ

ಗೊತ್ತು ಶರೀರದಿಂದ ತಾನು ಮಾಡಬೇಕಾದ ಎಲ್ಲವನ್ನು ಮಾಡಿದ್ದೇನೆ, ಇನ್ನೂ ಈ ಶರೀರವು ಬಿಟ್ಟು ಹೋದ ಮೇಲೆ ತನಗೆ ಯಾವ ನಷ್ಟವು ಇಲ್ಲ. ನಂತರ ಮಾಡಬೇಕಾಗಿರುವುದು ನಾನು ಮಾಡಿಕೊಳ್ಳುತ್ತೇನೆ. ಎಂದು ನಿರ್ಣಯಿಸಿಕೊಂಡು ಸತ್ತ ಮೇಲೆ ಅವರನ್ನು ತೆಗೆದುಕೊಂಡು ಹೋಗುವುದಕ್ಕೆ ಬಂದ ಸಹಾಯಕರ ಜೊತೆ ಮೇಲಿನ ಲೋಕಗಳಿಗೆ ಹೊರಟು ಹೋಗುತ್ತಾರೆ. ಅಲ್ಲಿ ಮಾಡಬೇಕಾದ ಕೆಲಸಗಳನ್ನು ಮಾಡಿಕೊಳ್ಳುತ್ತಾರೆ.

ಅದಕ್ಕಾಗಿಯೇ ಕೆಲವರು ಆತ್ಮಜ್ಞಾನಿಗಳು ಸಾಯುವುದಕ್ಕಿಂತ ಮೊದಲು ಹೇಳಿ ಸಾಯುತ್ತಾರೆ. ನನ್ನ ಕೆಲಸ ಮುಗಿದುಹೋಗಿದೆ, ಇನ್ನೂ ನಾನು ಬೇರೆ ಕೆಲಸ ಕಾರ್ಯಗಳಿಗೆ ಹೊರಟು ಹೋಗುತ್ತಿದ್ದೇನೆ, ಎಂದು ಮೊದಲೇ ಹೇಳುತ್ತಾರೆ. ಸಾಯುವುದಕ್ಕೆ ಅವರು ಏನು ನೋವು ಪಡುವುದಿಲ್ಲ. ಕಾರಣ ಸಾವು ಅವರಿಗೆ ಲಾಭವನ್ನು ತಂದುಕೊಡುತ್ತದೆ. ಆದ್ದರಿಂದ ಹುಟ್ಟು ಎಷ್ಟು ಸಂಭ್ರಮವೋ ಅವರಿಗೆ ಸಾವು ಕೂಡ ಅಷ್ಟೇ ಸಂಭ್ರಮ.

ಆದ್ದರಿಂದಲೇ ಪತ್ರಿಯವರು "ಆತ್ಮಜ್ಞಾನಿಗಳಿಗೆ ಹುಟ್ಟು ಸಂಭ್ರಮವೇ! ಸಾವು ಸಂಭ್ರಮವೇ!" ಎಂದು ಹೇಳುತ್ತಾರೆ. ಅವರು ಈ ವಿಷಯವನ್ನು ತುಂಬಾ ಸಂದರ್ಭಗಳಲ್ಲಿ ಹೇಳಿದ್ದರು ಕೂಡ. ಸಾವು ನಮಗೆ ಒಳ್ಳೆಯದೇ, ಸಾವು ನಮಗೆ ಲಾಭ ಎಂಬ ವಿಷಯವನ್ನು ಪತ್ರಿಯವರು ಹೇಳುವುದಕ್ಕೆ ಕಾರಣ ನಮ್ಮನ್ನು ಆ ಭಯದಿಂದ ಹೊರ ಹಾಕುವುದಕ್ಕೆ!.

ಯಾರಾದರೂ ಸತ್ತು ಹೋದರೆ ತಕ್ಷಣವೇ ಸಾರ್ ಅವರಿಗೆ ಫೋನ್ ಮಾಡುತ್ತಿದ್ದರು. ಅವರು ಹೋದರು, ಎಂದು ಹೇಳುತ್ತಿದ್ದರು. ಹಾ! ಹೋಗಲಿ ಬಿಡು. ಅದಕ್ಕೇನಂತೆ? ಮಾಡಬೇಕಾಗಿರುವುದನ್ನು ಮಾಡಿದನು, ಉತ್ತಮವಾಗಿ ಮಾಡಿದನು. ಇನ್ನು ಇದಕ್ಕಿಂತ ಶ್ರೇಷ್ಠವಾದ ಕೆಲಸಗಳು ಮಾಡುವುದಕ್ಕೆ ಹೊರಟುಬಿಟ್ಟನು, ಎಂದು ಹೇಳುತ್ತಿದ್ದರು. ಹಳೆ ಅಂಗಿಯನ್ನು ತೆಗೆದು ಹೊಸ ಅಂಗಿಯನ್ನು ಹಾಕಿಕೊಳ್ಳುವುದಕ್ಕೆ ನೋವು ಪಡುವುದು ಯಾಕೆ? ಅನ್ನುತ್ತಿದ್ದರು. ಭಗವದ್ಗೀತೆಯಲ್ಲೂ ಕೂಡ ಅದನ್ನೇ ಹೇಳಲ್ಪಟ್ಟಿದೆಯಲ್ಲವೇ ಎಂದು ಹೇಳುತ್ತಿದ್ದರು.

ಆದ್ದರಿಂದ ಜ್ಞಾನವನ್ನು ಸಂಪಾದಿಸಿಕೊಂಡವರು, ಧ್ಯಾನ ಮಾರ್ಗದಲ್ಲಿ ಬಂದವರು, ಈ ಮಾರ್ಗದಲ್ಲಿ ಕೃಷಿ ಮಾಡುವವರು, ಸಾವಿಗೆ ಭಯಪಡುವ ಅವಶ್ಯಕತೆ ಇಲ್ಲ.

ಆದ್ದರಿಂದ ಪತ್ರೀಜಿಯವರ ಆತ್ಮ, ನಾವು ಲಾಭ ಪಡೆಯುವುದಕ್ಕೋಸ್ಕರ, ನಮ್ಮ ಕೈಯಲ್ಲಿ ಅನೇಕ ಸೇವೆಗಳನ್ನು ಮಾಡಿಸಿದ್ದಾರೆ. ಎಷ್ಟೋ ಪ್ರಾಜೆಕ್ಟ್ ಗಳನ್ನು ಪ್ರಾರಂಭಿಸಿದ್ದಾರೆ. ಆ ಪ್ರಾಜೆಕ್ಟ್ ಗಳಲ್ಲಿ ನಮ್ಮೆಲ್ಲರನ್ನು ಪಾಲ್ಗೊಳ್ಳುವಂತೆ ಹೇಳುದ್ದಾರೆ. ಇವೆಲ್ಲ ಆತ್ಮಕ್ಕೆ ಲಾಭವನ್ನು ತಂದು ಕೊಡುವ ಸೇವೆಗಳ ಕೆಳಗೆ ಬರುತ್ತವೆ. ಅದರಲ್ಲೂ ನಾವು ಪಾಲ್ಗೊಂಡು ಎಷ್ಟು ಸೇವೆ ಮಾಡುತ್ತೇವೆಯೋ, ಆತ್ಮಕ್ಕೆ ಅಷ್ಟು ಲಾಭ ಲಭಿಸುತ್ತದೆ.

ಆದರೆ ಕೆಲವರು ಏನಿದು? ಪತ್ರಿಯವರು ನಮ್ಮ ಕೈಯಲ್ಲಿ ಇವನ್ನು ಮಾಡಿಸುತ್ತಿದ್ದಾರೆ? ಎಂದು ಅಂದುಕೊಳ್ಳುತ್ತಾರೆ. ಆದರೆ ಇವೆಲ್ಲ ಮಾಡುವುದರಿಂದ ಆತ್ಮ, ಅಂದರೆ ನಾವು ಬಹಳ ಲಾಭವನ್ನು ಪಡೆಯುತ್ತೇವೆ. ಇನ್ನೂ ಅವರು ದೊಡ್ಡ ದೊಡ್ಡ ಪಿರಮಿಡ್ ಧ್ಯಾನ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಇನ್ನೂ ಎಷ್ಟೋ ಚಿಕ್ಕ ಚಿಕ್ಕ ಪಿರಮಿಡ್ ಕೇಂದ್ರಗಳನ್ನು ಕಟ್ಟಿಸಿದ್ದಾರೆ. ಪಿ ಎಂ ಸಿ ಚಾನೆಲ್ ಅನ್ನು ಸ್ಥಾಪನೆ ಮಾಡಿದ್ದಾರೆ. ಇವೆಲ್ಲದರಲ್ಲಿ ಪಾಲ್ಗೊಳ್ಳುವ ಮೂಲಕ, ಈ ಸತ್ಯವಾದ ಜ್ಞಾನವನ್ನು ಪ್ರಪಂಚವೆಲ್ಲ ಬೋಧಿಸಿ ಎಲ್ಲರನ್ನೂ ಜ್ಞಾನವಂತರನ್ನಾಗಿ ಮಾಡಬೇಕೆಂಬುದು ಅವರ ಲಕ್ಷ್ಯವಾಗಿತ್ತು.

ಭೂಮಿ ಮೇಲೆ ಮನುಷ್ಯರಿಗೆ ತಪ್ಪು ಏನು? ಒಳ್ಳೆಯದು ಏನು? ಎಂದು ತಿಳಿಯದು. ತಪ್ಪುಗಳನ್ನು ಮಾಡುತ್ತಾ ಅದೇ ಶ್ರೇಷ್ಠವಾದ ಕೆಲಸ ಅಂದುಕೊಳ್ಳುತ್ತಿದ್ದಾರೆ. ಆದರೆ ಅದು ಅನುಭವಿಸುವ ಸಮಯ ಬಂದಾಗ ವಿಲವಿಲನೇ ಒದ್ದಾಡುತ್ತಾರೆ. ಆದ್ದರಿಂದ ಅಂತಹವರ ಕಣ್ಣುಗಳನ್ನು ತೆರೆಸುವುದಕ್ಕೋಸ್ಕರ ಪತ್ರಿಯವರು ಭೂಮಿ ಮೇಲೆ ಬಂದಿದ್ದಾರೆ.

ಅವರು ಜೀವ ಹಿಂಸೆ ಮಾಡಬಾರದೆಂದು ಸ್ಪಷ್ಟವಾಗಿ ಹೇಳಿದ್ದರು. ಯಾವುದೇ ಕೋಳಿ, ಮೇಕೆಯನ್ನು ಸಾಯಿಸಬೇಡ. ಅವು ನಿನ್ನ ಹಾಗೆಯೇ ಆತ್ಮ ಸ್ವರೂಪಗಳೇ. ಎಂದು ತಿಳಿದುಕೋ. ಜ್ಞಾನವನ್ನು ಬೆಳೆಸಿಕೋ. ಎಂದು ಹೇಳಿದ್ದರು. ಆದರೆ ಕೆಲವರು ಮಾಂಸವನ್ನು ತಿನ್ನದಿದ್ದರೆ, ಹೇಗೆ ನಮಗೆ ಶಕ್ತಿ ಬರುತ್ತದೆ? ಪೌರುಷ ಇರಬೇಕು. ಮಾಂಸವನ್ನು ತಿನ್ನದೇ ಇದ್ದರೆ, ಪೌರುಷ ಹೇಗೆ ಬರುತ್ತದೆ? ಏನೂ ತಿನ್ನದೇ ಇದ್ದರೆ ಪೆದ್ದಿಗಳ ಹಾಗೆ ಇದ್ದುಬಿಡುತ್ತಾರೆ. ದೇಶವೇ ಹಾಳಾಗಿ ಬಿಡುತ್ತದೆ. ಗಡಿ ಪ್ರದೇಶಗಳಲ್ಲಿ ಯಾರು ರಕ್ಷಿಸುತ್ತಾರೆ? ಎಂದು ಹೇಳುತ್ತಾರೆ. ಹಾಗೆ ಮಾಂಸವನ್ನು ತಿನ್ನಲು ಪ್ರೋತ್ಸಾಹಿಸುವವರು ಇದ್ದಾರೆ. ಮತ್ತೆ ಅವರು ಹಲವಾರು ಉಪನ್ಯಾಸಗಳನ್ನು ಕೊಡುತ್ತಾರೆ, ಆದರೆ ಆ ಜೀವಿಗಳು ಕೂಡ ಆತ್ಮ ಸ್ವರೂಪಗಳೇ! ದೈವ ಸ್ವರೂಪಗಳೇ!

ಭಗವಂತನಲ್ಲಿ ಭಾಗ! ಅದರಲ್ಲಿ ಇರುವುದು ಆ ಭಗವಾನ್ ಸ್ವರೂಪವೇ! ಎಂದು ಅವರಿಗೆ ಯಾಕೆ ಅರ್ಥವಾಗುವುದಿಲ್ಲವೋ? ಅದು ನಮಗೆ ಅರ್ಥ ಆಗಲ್ಲ.

ಅಸಲಿಗೆ ಪತ್ರಿಯವರು ಹೇಳಿದ ಹಾಗೆ ಎಲ್ಲರೂ ಶಾಖಾಹಾರಿಗಳಾಗಿ ಧ್ಯಾನವನ್ನು ಮಾಡಿದರೆ, ಈ ಯುದ್ಧಗಳು ಏಕೆ ಇರುತ್ತವೆ. ಈ ಗಲಾಟೆಗಳು ಎಲ್ಲಿ ಇರುತ್ತವೆ? ಅಸಲು ಈ ಸೈನ್ಯವು ಯಾಕೆ ಬೇಕು? ದೇಶದ ರಕ್ಷಣೆಗೋಸ್ಕರ ಇಷ್ಟು ಲಕ್ಷ ಕೋಟಿಗಳಷ್ಟು ಖರ್ಚು ಮಾಡುತ್ತಿದ್ದಾರೆ. ಅದನ್ನೇ ದೇಶಗಳ ಅಭಿವೃದ್ಧಿಗಾಗಿ ವ್ಯಯ ಮಾಡಿದರೆ, ಪ್ರಪಂಚವು ಎಷ್ಟು ಉದ್ಧಾರವಾಗುತ್ತದೆ. ಅಥವಾ ಅಭಿವೃದ್ಧಿಯಾಗುತ್ತದೆ? ಈ ದ್ವೇಷಗಳಿಂದ, ಅಸೂಯೆಗಳಿಂದ, ಭಯಗಳಿಂದ ಹಣವನ್ನೆಲ್ಲ ಅದಕ್ಕೆ ಸುರಿಯುತ್ತಿದ್ದಾರೆ, ಅದೇ ಪತ್ರೀಜಿಯವರು ಹೇಳಿದ್ದು.

ನಾವೆಲ್ಲರೂ ಒಂದೇ ಎಂಬ ಭಾವನೆಯಲ್ಲಿದ್ದರೆ, ದ್ವೇಷವು ಎಲ್ಲಿರುತ್ತದೆ? ಇನ್ನೂ ಯುದ್ಧಗಳು ಯಾಕೆ ನಡೆಯುತ್ತವೆ? ಆದ್ದರಿಂದ ಅಷ್ಟೊಂದು ಶ್ರೇಷ್ಠ ಮಹಾತ್ಮರಾದ ಪತ್ರಿಯವರು ಭೂಮಿಯ ಮೇಲೆ ಬಂದು ಎಷ್ಟೋ ವಿಷಯಗಳನ್ನು ತಿಳಿಸಿದ್ದಾರೆ. ಅದರಲ್ಲಿ ಮುಖ್ಯವಾದ ವಿಷಯವೆಂದರೆ, ಮರಣಿಸುವ ಮೊದಲೇ ಮರಣ ಹೊಂದಬೇಕು ಅಂದರೆ ಸತ್ತ ನಂತರ ನಡೆಯುವುದನ್ನು ಜೀವಂತವಾಗಿ ಇದ್ದಾಗಲೇ ತಿಳಿದುಕೊಳ್ಳಬೇಕು. ಅಂದುಕೊಂಡವರಿಗೆ ಸಾವು ಎಂದರೆ ಭಯ ಇರುವುದಿಲ್ಲ, ಅವರಿಗೆ ಸಾವು ಕೂಡ ಸಂಭ್ರಮವೇ ಆಗುತ್ತದೆ.

ಪರಮಯೋಗಿಗಳಾದ ಕಬೀರ್ ಅವರ ಏನು ಹೇಳಿದ್ದಾರೆಂದರೆ ಯಾವ ಸಾವಿಗೆ ಈ ಪ್ರಪಂಚವು ಭಯಪಡುತ್ತದೋ ಅದನ್ನು ಪಡೆಯುವುದರಲ್ಲಿಯೇ ನನಗೆ ಆನಂದವು ಸಿಗುತ್ತದೆ. ಅಷ್ಟೊಂದು ಮಹಾನುಭಾವರಾದ ಅವರು ತನಗೆ ಸಾವು ಆನಂದವನ್ನು ಕೊಡುತ್ತದೆ, ಎಂದು ಹೇಳಿದ್ದಾರೆ. ಮತ್ತೆ ನಮಗೆ ಯಾಕೆ ದುಃಖ ಆಗುತ್ತಿದೆ? ನಮಗೆ ಯಾಕೆ ಭಯ? ಅನ್ನಿಸುತ್ತಿದೆ. ನಾವು ಯಾಕೆ ವಿಲ್ಲವಿಲ್ಲನೇ ಒದ್ದಾಡುತ್ತಿದ್ದೇವೆ? ಏನು ವ್ಯತ್ಯಾಸ? ಅಂದರೆ, ಅವರು ಅಪಾರವಾದ ಜ್ಞಾನಸಂಪನ್ನವುಳ್ಳವರು, ನಾವು ಅಜ್ಞಾನದಲ್ಲಿದ್ದೇವೆ ಇದೇ ಕಾರಣ.

ಹಾಗೆಯೇ ಸಿಖ್ಖರ ಗುರುಗಳಾದ ಗುರುನಾನಕ್ ಸಾಹೇಬ್ ಅವರು ಕೂಡ ಏನು ಹೇಳಿದ್ದಾರೆಂದರೆ "ಜೀವನ್ ಮರಣಗಳ ಪ್ರಾಪ್ತಿಯ ಯೋಗವು ನಮಗೆ ಸಿಗಲು ನಾವೆಲ್ಲ ಶ್ರಮ ವಹಿಸಬೇಕು" ಎಂದಿದ್ದಾರೆ.

ಅಂದರೆ ಪತ್ರೀಜಿಯವರು ಹೇಳಿದ ಹಾಗೆ ಜೀವಂತವಾಗಿ ಇರುವಾಗಲೇ ಮರಣಿಸಬೇಕು, ಎಂದಿದ್ದರು. ಹಾಗೆಯೇ ಯೋಗವನ್ನು ಅಭ್ಯಾಸ ಮಾಡಬೇಕು, ಅಂದರೆ ಮರಣವನ್ನು ಅನುಭವ ಸಮೇತ ತಿಳಿದುಕೊಳ್ಳಬೇಕು, ಅಂದರೆ ಧ್ಯಾನದ ಮೂಲಕ ಅಂತೇಂದ್ರಿಯ ಶಕ್ತಿಗಳ ಸಂಪಾದನೆ ಮಾಡಿ, ಅಂದರೆ ದಿವ್ಯ ನೇತ್ರವನ್ನು ಸಂಪಾದಿಸಿಕೊಳ್ಳಬೇಕು. ಸೂಕ್ಷ್ಮ ಶರೀರಯಾನವನ್ನು ಕೈಗೊಳ್ಳಬೇಕು. ಅದರ ಮೂಲಕ ಮರಣಿಸಿದವರು ಹೋಗುವ ಲೋಕಗಳಿಗೆ ಹೋಗಿ ಬರುವವರಾಗಬೇಕು. ಆ ಲೋಕಗಳಲ್ಲಿನ ವಿಷಯಗಳನ್ನು ತಿಳಿದುಕೊಳ್ಳಬಲ್ಲವರಾಗಬೇಕು. ಇದನ್ನೇ ಜೀವನ್ಮರಣ ಯೋಗಭ್ಯಾಸ ಅನ್ನುತ್ತಾರೆ.

ಹಾಗೆಯೇ ಬೈಬಲ್ ನಲ್ಲಿ ಕೂಡ ಮತ್ತಾಯ ಪಾಲ್ ಸುವಾರ್ತೆಗಳಲ್ಲಿ ಏನು ಹೇಳಲ್ಪಟ್ಟಿದೆ ಎಂದರೆ, ನಾನು ನಿತ್ಯವೂ ಮರಣಿಸುತ್ತಲೇ ಇರುತ್ತೇನೆ. ಅಂದರೆ ಅಂತಿಂದ್ರಿಯ ಶಕ್ತಿಗಳ ಮೂಲಕ ಮರಣಿಸಿದವರು, ಹೋಗುವ ಲೋಕಗಳಿಗೆ ನಿತ್ಯವೂ ಹೋಗಿ ಅಲ್ಲಿನ ವಿಷಯಗಳನ್ನು ತಿಳಿದುಕೊಳ್ಳುತ್ತಾರೆ, ಎಂದು ಹೇಳಲ್ಪಟ್ಟಿದೆ.

ಹಾಗೆಯೇ ಒಬ್ಬ ಮಹಮದಿಯ ಮಹಾತ್ಮರು ಏನು ಹೇಳಿದ್ದಾರೆಂದರೆ, “ಮರಣಕ್ಕಿಂತ ಮೊದಲೇ ಮರಣಿಸುವುದನ್ನು ಕಲಿತುಕೋ” ಎಂದು ಹೇಳಿದ್ದಾರೆ. ಯೋಚಿಸು ನೀನು ಸತ್ತ ಮೇಲೆ ಹೀಗಿರುವುದೆಲ್ಲಾ ಏನಾಗುತ್ತದೆ? ನಿನ್ನ ಜೊತೆ ಏನು ಬರುತ್ತದೆ? ಏನು ಬರುವುದಲ್ಲ. ಆದ್ದರಿಂದ ಜೀವಿಸುವಾಗಲು ಕೂಡ ಇದು ಯಾವುದು ನನ್ನದಲ್ಲ, ಎಂದು ಅರ್ಥ ಮಾಡಿಕೊಳ್ಳಬೇಕು. ಹಾಗೆಯೆ ಜೀವಿಸಬೇಕು. ಅಷ್ಟೇ ಹೊರತು, ಇವೆಲ್ಲಾ ನನ್ನವು ಎಂಬುದಾಗಿ ಜೀವಿಸಿದರೆ, ಅದಕ್ಕೋಸ್ಕರ ತಪ್ಪುಗಳನ್ನು ಮಾಡುತ್ತೇವೆ. ಪಾಪಗಳನ್ನು ಮಾಡುತ್ತೇವೆ. ಮಾಡಬಾರದ ಕೆಲಸಗಳನ್ನು ಮಾಡುತ್ತೇವೆ, ಕಡೆಗೆ ಜೀವನವನ್ನು ಹಾಳು ಮಾಡಿಕೊಳ್ಳುತ್ತೇವೆ.

ಆದರೆ ಯಾವಾಗ ಇದನ್ನು ತಿಳಿದುಕೊಳ್ಳುತ್ತೇವೆಯೋ? ಅಂದರೆ ಸತ್ತ ನಂತರ ಇವೆಲ್ಲವನ್ನು ಬಿಟ್ಟು ಬಿಡಬೇಕಾಗಿ ಬರುತ್ತದೆ. ಇವುಗಳಿಗೂ ನನಗೂ ಯಾವುದೇ ಸಂಬಂಧವಿಲ್ಲ, ಎಂಬುದನ್ನು ತಿಳಿದುಕೊಳ್ಳುತ್ತೇವೆಯೋ? ಆಗ ಅವುಗಳ ಮೇಲೆ ಇರುವ ವ್ಯಾಮೋಹವು ಹೆಚ್ಚಾಗುವುದಿಲ್ಲ.

ಅಂದರೆ ಮರಣಿಸುವುದಕ್ಕಿಂತ ಮೊದಲೇ ಮರಣಿಸುವುದನ್ನು ಕಲಿತುಕೊಳ್ಳುತ್ತಿದ್ದೇವೆ, ಎಂದು ಅರ್ಥ. ಆದ್ದರಿಂದ ಏನೇ ಇದ್ದರು ಕೂಡ ಅದು ನನ್ನದಲ್ಲ, ಅದು ಇರುವುದಿಲ್ಲ,

ಎಂದ ಹಾಗೆ ಇರಬೇಕು. ಆಗ ಅವುಗಳನ್ನು ಸಂಪಾದಿಸಲು ಪಾಪಗಳನ್ನು ಮಾಡುವುದಿಲ್ಲ, ತಪ್ಪುಗಳನ್ನು ಮಾಡುವುದಿಲ್ಲ, ಧರ್ಮದಿಂದ ನಡೆದುಕೊಳ್ಳುತ್ತೇವೆ. ಇರುವಷ್ಟು ದಿನ ಯಾರ ಜೊತೆಗೂ ಕಲಹ ಜಗಳಗಳನ್ನು ಇಟ್ಟುಕೊಳ್ಳುವುದಿಲ್ಲ. ಯಾರನ್ನು ಹಿಂಸಿಸುವುದಿಲ್ಲ.ಯಾವುದನ್ನು ಸಾಯಿಸುವುದಿಲ್ಲ.

ಇವೆಲ್ಲಾ ಯಾವಾಗ ಮಾಡುತ್ತೇವೆ ಅಂದರೆ ಮರಣಿಸುವುದಕ್ಕಿಂತ ಮೊದಲೇ ಮರಣದ ಬಗ್ಗೆ ತಿಳಿದುಕೊಂಡಾಗ ಅಥವಾ ಕಲಿತುಕೊಂಡಾಗ ಮಾಡುತ್ತೇವೆ.

ನನ್ನ ವಿಷಯದಲ್ಲಿ ನಡೆದ ಒಂದು ಚಿಕ್ಕ ಘಟನೆಯನ್ನು ಹೇಳುತ್ತೇನೆ. ಕೆಳಗಿನಗಳ ಹಿಂದೆ ನನಗೆ ಕರೋನಾ ಬಂದಿತ್ತು. ಮಕ್ಕಳು ಇಲ್ಲಿಗಿಂತ ಹೈದ್ರಾಬಾದ್ ನಲ್ಲಿ ವೈದ್ಯಕೀಯ ವ್ಯವಸ್ಥೆ ಚೆನ್ನಾಗಿರುವುದಿಲ್ಲ ಎಂದು ನನ್ನನ್ನು ಹೈದ್ರಾಬಾದ್ ಗೆ ಕರೆದುಕೊಂಡು ಹೋದರು. ನಾವು ಹೊರಡಲು ಮನೆಯಲ್ಲಿ ಎಲ್ಲವನ್ನು ಸಿದ್ಧಪಡಿಸಿಕೊಳ್ಳುತ್ತಿರಲು, ನನಗೆ ಇವೆಲ್ಲದರಿಂದ ಋಣಾನುಬಂಧ ತೀರಿಹೋಗಿದೆ ಎಂದು ಅನಿಸಿತು. ಇದೆಲ್ಲಾ ನೋಡುವುದು ಇದೇ ಕೊನೆ ಎಂಬ ಭಾವನೆ ಮೂಡಿತ್ತು.

ಯೋಚಿಸಿ! ನಿಜವಾಗಲೂ ನಾನು ಕರೋನದಿಂದ ಸತ್ತು ಹೋದರೆ, ಎಲ್ಲವೂ ಹೋದಂಗೆ ಅಲ್ಲವೇ? ಎಂದು ಅನ್ನಿಸಿತು. ಸ್ವಲ್ಪ ಸಮಯ ಮನಸ್ಸಿನಲ್ಲಿ ಇವುಗಳಿಗೋಸ್ಕರವಾ ನಾನು ಇಷ್ಟು ದಿನ ಕಷ್ಟಪಟ್ಟಿದ್ದು? ಅನ್ನಿಸಿತು. ನನಗೆ ನಾನು ಹೊರಡುತ್ತಿರುವುದು ಹೈದ್ರಾಬಾದ್ ಗೆ ಅಲ್ಲ ಎಲ್ಲವನ್ನು ಬಿಟ್ಟು ಬಿಟ್ಟು ಮೇಲೆ ಹೊರಟು ಹೋಗುತ್ತಿರುವ ಹಾಗೆ ಭಾಸವಾಯಿತು. ಆದರೆ ಮತ್ತೊಂದು ಕಡೆ, ಇನ್ನೊಂದು ಯೋಚನೆ ನಾವು ಭೂಮಿಯ ಮೇಲೆ ಇನ್ನೂ ಮಾಡಬೇಕಾದ ಏನಾದರೂ ಕೆಲಸವಿದ್ದಲ್ಲಿ ಮತ್ತೆ ಬರುತ್ತೇನೆ. ಒಂದು ವೇಳೆ ಮಾಡಬೇಕಾದ ಕೆಲಸ ಏನೂ ಇಲ್ಲದಿದ್ದರೆ, ಅಲ್ಲಿಂದ ಹಾಗೆಯೇ ಹೊರಟು ಹೋಗುತ್ತೇನೆ, ಎಂದೆನಿಸಿತು.

ಪತ್ರಿಯವರು ಹೇಳುತ್ತಿದ್ದರು ಅಲ್ಲವೇ? ನೀನು ಮಾಡಬೇಕಾದ ಕೆಲಸ ಏನಾದರೂ ಇದ್ದರೆ ನೀನು ಹೋಗಬೇಕೆಂದರು, ಹೋಗಲಿಕ್ಕಾಗದು. ನೀನು ಮಾಡಬೇಕಾದ ಕೆಲಸ ಮುಗಿದ ತಕ್ಷಣ ನೀನು ಇರಬೇಕೆಂದರು, ಇರುವುದಕ್ಕೆ ಆಗುವುದಿಲ್ಲ. ನಿಮಗೆ ಇದರ ಬಗ್ಗೆ ಎಷ್ಟು ಅವಗಾಹನೆ ಇದ್ದರೆ ನೀವು ಅಷ್ಟು ದುಃಖವಿಲ್ಲದೆ ಇರುತ್ತೀರಿ. ಇಲ್ಲವೆಂದರೆ ಪ್ರತಿಯೊಂದು ವಿಷಯದಲ್ಲೂ ದುಃಖವನ್ನೇ ಪಡಬೇಕಾಗುತ್ತದೆ.

ಆದ್ದರಿಂದ ಕರೋನಾ ಬಂದಿದೆ ಎಂದರೆ ಸತ್ತು ಹೋಗುತ್ತೇನೆಂದು ಭಯಪಡುವುದಲ್ಲ, ನನ್ನ ಋಣ ತೀರಿತೆಂದು, ಇನ್ನೂ ನಾನು ಮಾಡಬೇಕಾಗಿರುವುದೆಲ್ಲಾ ಮುಗಿದು ಹೋಗಿದೆ, ಎಂದು ಅಂದುಕೊಳ್ಳಬೇಕು. ಆಗ ದುಃಖ ಎಲ್ಲಿರುತ್ತದೆ?

ಆದ್ದರಿಂದ ಒಬ್ಬ ಮಹಮ್ಮದಿಯ ಮಹಾತ್ಮನು ಏನು ಹೇಳಿದ್ದಾನೆಂದರೆ "ಮರಣಿಸುವ ಮೊದಲು ಮರಣಿಸುವುದನ್ನು ಕಳಿತುಕೋ" ಎಂದು ಹೇಳಿದ್ದಾನೆ. ಹಾಗೆಯೇ ದಾದು ಮಹಾತ್ಮರು ಏನು ಹೇಳಿದ್ದಾರೆಂದರೆ "ಜೀವವಿರುವ ಶವದ ಹಾಗೆ ಬದುಕಲು ಕಲಿತುಕೋ" ಅನ್ನುತ್ತಾರೆ.

ನಾವು ನಿಜವಾಗಲೂ ಶವವೇ ಆದರೆ, ಪ್ರಾಣವಿದೆ. ಶವ ಹೇಗಿರುತ್ತದೋ? ಜೀವ ಇರುವಾಗಲೂ, ಹಾಗೆಯೇ ಇರಬೇಕು. ಅಂದರೆ ಜೀವವಿರುವ ಶವದ ಹಾಗೆ ಜೀವಿಸಬೇಕು. ನಿಮ್ಮ ವರ್ತನೆ ಹಾಗೆ ಇರಬೇಕು.

ಅವರು ಏನು ಹೇಳಿದ್ದರೆಂದರೆ, ಜೀವವಿರುವ ಶವದ ಹಾಗೆ ಬದುಕಲು ಕಲಿತುಕೋ, ಆಗಲೇ ನಿನಗೆ ಪ್ರಭುವಿನ ದರ್ಶನ ಲಭ್ಯವಾಗುತ್ತದೆ ಅಂದರೆ ಆತ್ಮದರ್ಶನ ಆಗುತ್ತದೆ, ಎನ್ನುತ್ತಾರೆ. ಶವ ಏನು ಮಾಡುತ್ತದೆ? ಅಲ್ಲಿ ಯಾರೇ ಇದ್ದರೂ, ತಲೆಕೆಡಿಸಿಕೊಳ್ಳುವುದಿಲ್ಲ. ಯಾರೇ ಏನೇ ಮಾಡುತ್ತಿದ್ದರು, ಸ್ಪಂದಿಸುವುದಿಲ್ಲ. ಒಂದು ರೀತಿಯಲ್ಲಿ ಹೇಳುವುದಾದರೆ, ಚಿಕ್ಕ ಮಗುವಿನೊಂದಿಗೆ ಹೋಲಿಕೆ ಮಾಡಿಕೊಳ್ಳಬಹುದು. ಚಿಕ್ಕ ಮಗುವಿಗೆ ಕೂಡ ಪ್ರಾಣವಿರುತ್ತದೆ, ಆದರೆ ಅಲ್ಲಿ ಯಾರಿದ್ದಾರೆ? ಏನು ಮಾಡುತ್ತಿದ್ದಾರೆ? ಅಂದರೆ ಯಾರೇ ಬೈದುಕೊಳ್ಳುತ್ತಿದ್ದರು, ಜಗಳ ಮಾಡುತ್ತಿದ್ದರು, ಆ ಮಗುವಿಗೆ ಅನವಶ್ಯಕ ಎಂಬ ಹಾಗೆಯೇ ನೋಡುತ್ತಾ ಸಾಕ್ಷಿಭೂತವಾಗಿ ಇದ್ದುಬಿಡುತ್ತದೆ. ಅಂತಹವರಿಗೆ ಕೋಪ, ದ್ವೇಷ, ಪ್ರತಿಕಾರ, ಅಸೂಯೆ, ಲೋಭಗಳಂತಹ ಗುಣಗಳು ಇರುವುದಿಲ್ಲ. ಆ ರೀತಿಯಲ್ಲಿ ಜೀವಿಸಿದರೆ, ಯಾವುದೇ ವಸ್ತುವಿನ ಮೇಲೆ ಬ್ರಾಂತಿ, ಆಕಾಂಕ್ಷೆ, ಮಮಕಾರ, ವ್ಯಮೋಹ ಇರುವುದಿಲ್ಲ. ಇವುಗಳ ಜೊತೆ ನನಗೆ ಯಾವುದೇ ಸಂಬಂಧವಿಲ್ಲ ಎಂಬಂತೆ ಇರುತ್ತೇವೆ.

ನೋಡಿ! ರೈಲು ಪ್ರಯಾಣ ಮಾಡುವಾಗ ತಲುಪಬೇಕಾದ ಗಮ್ಯವು ಬಂದ ತಕ್ಷಣ ಇಳಿದು ಹೊರಟು ಹೋಗುತ್ತೇವೆ. ಹಾಗೆಯೇ ಜೀವನದ ಪ್ರಯಾಣವು ಪೂರ್ಣಗೊಂಡ ನಂತರ ಯಾರೇ ಆಗಲಿ, ಈ ಶರೀರವನ್ನು ಬಿಟ್ಟು ಹೊರಟುಹೋಗುತ್ತಾರೆ. ಅಲ್ಲಿ ರೈಲು ಬಿಟ್ಟು ಹೋದ ಹಾಗೆ, ಇಲ್ಲಿ ಶರೀರವನ್ನು ಬಿಟ್ಟು ಹೋಗುತ್ತಾರೆ. ಹಾಗೆಯೇರೈಲು ಇಳಿದ ಮೇಲೆ ಅದರ ಬಗ್ಗೆ ಯೋಚನೆ ಇರುವುದಿಲ್ಲ. ಅಂತೆಯೇ ಮೇಲೆ ಹೊರಟು

ಹೋದವರಿಗೆ ಭೂಮಿ ಮೇಲಿನ ಸಂಸಾರದ ಬಗ್ಗೆಯಾಗಲಿ, ಸಂಪತ್ತಿನ ಬಗ್ಗೆ ಆಗಲಿ, ಯಾವ ಸಂಬಂಧವೂ ಇರುವುದಿಲ್ಲ. ಆದುದರಿಂದ ಯಾರೇ ಆಗಲಿ ತನಗೆ ಇರುವುದೆಲ್ಲಾ ತನ್ನದಲ್ಲ, ಎಂಬ ಭಾವನೆಯಿಂದ ಜೀವಿಸಬೇಕು.

ಹಾಗೆಯೇ ನೋಡಿದಾಗ ಮಹಾಭಾರತದಲ್ಲಿ ಅಭಿಮನ್ಯು ಸತ್ತು ಮೇಲಿನ ಲೋಕಗಳಿಗೆ ಹೊರಟುಹೋದನು. ಅರ್ಜುನನು ನೋವು ಪಡುತ್ತಿದ್ದರೆ, ಶ್ರೀಕೃಷ್ಣನು ಬಂದು ಅರ್ಜುನನನ್ನು ಸೂಕ್ಷ್ಮ ಶರೀರದಿಂದ ಅಭಿಮನ್ಯು ಇರುವ ಲೋಕಗಳಿಗೆ ಕಳುಹಿಸಿದನು. ಅರ್ಜುನನು ಆ ಲೋಕಕ್ಕೆ ಹೋಗಿ ಅಭಿಮನ್ಯುವನ್ನು ಕೇಳಿದಾಗ, ನಿನಗೂ ನನಗೂ ಏನು ಸಂಬಂಧ? ನಿನ್ನಂತಹ ಅಪ್ಪಂದಿರು, ಇದಕ್ಕೂ ಮೊದಲು ಅನೇಕ ಜನ ಇದ್ದಾರೆ. ಅಂತ ಹೇಳಿದರೆ ಅರ್ಜುನನಿಗೆ ಹುಚ್ಚು ಹಿಡಿಯುತ್ತದೆ. ಹಿಂದೆ ತಿರುಗಿ ಬಂದುಬಿಡುತ್ತಾನೆ. ಅಂದರೆ ಅಭಿಮನ್ಯುನು ಅರ್ಜುನನಿಗೆ ಯಾವ ಸಂಬಂಧವು ಇಲ್ಲದ ಹಾಗೆ ವರ್ತಿಸುತ್ತಾನೆ.

ಆಗ ಶ್ರೀ ಕೃಷ್ಣನಿಗೆ ಅರ್ಜುನನು ನನಗೆ ಅರ್ಥವಾಯಿತು. ಈಗ ನೀವು ಹೇಳಿದ ಹಾಗೆ ನಾನು ಮಾಡುತ್ತೇನೆ. ಎಂದು ಹೇಳಿ ಅರ್ಜುನ ಅಭಿಮನ್ಯುವಿನ ಬಗ್ಗೆ ಯೋಚಿಸುವುದನ್ನು ಬಿಟ್ಟು ಯುದ್ಧದಲ್ಲಿ ಪಾಲ್ಗೊಳ್ಳುತ್ತಾನೆ. ಹಾಗೆಯೇ ಭೂಮಿಯ ಮೇಲೆ ಯಾರಿಗೆ ಆದರೂ, ಸತ್ತ ಮೇಲೆ ಹೆಂಡತಿ ಗಂಡ ತಂದೆ ತಾಯಿ ಯಾರ ಮೇಲೆಯೂ ದೃಷ್ಟಿ ಇರುವುದಿಲ್ಲ. ಮೇಲಿನ ಲೋಕಗಳಿಗೆ ಹೋದಮೇಲೆ ಅವರವರ ಕೆಲಸವನ್ನು ಅವರು ನೋಡಿಕೊಳ್ಳುತ್ತಾರೆ. ನೋಡಿ ರೈಲು ಬರ್ತ್ ಬಿಟ್ಟು ಬಿಟ್ಟು ಹೊರಟು ಹೋದರೆ ಆ ಬರ್ತ್ ಮೇಲೆ ಹೇಗೆ ದೃಷ್ಟಿ ಇರುವುದಿಲ್ಲವೋ ಹಾಗೆಯೇ ಮರೆತುಬಿಡುತ್ತಾರೆ.

ಆದ್ದರಿಂದ ನನ್ನದು, ನನ್ನದು ಎಂದು ಹೇಳಿಕೊಳ್ಳುವವರು ಏನೂ ನನ್ನದಲ್ಲ, ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ಇರುವುದೆಲ್ಲ ನಿನ್ನದೇ ಎಂದುಕೊಳ್ಳಸುಮ್ಮನೆ? ಅದು ಭ್ರಮೆ, ಇಲ್ಲಿ ಬದುಕುತ್ತೀಯಾ! ಆದರೆ ಯಾವುದು ನಿನ್ನದಲ್ಲ, ಎಂಬುದನ್ನು ತಿಳಿದುಕೊಳ್ಳಬೇಕು. ಆದುದರಿಂದ ನನ್ನದು ಅಂದವನು ಮೂರ್ಖನು, ಅಜ್ಞಾನಿ, ಏಕೆಂದರೆ ಭೂಮಿ ಮೇಲೆ ನನ್ನದು ಎಂಬುದು ಏನು ಇಲ್ಲ. ಇಲ್ಲಿ ಇರುವುದೆಲ್ಲಾ ಆ ಭಗವಂತನಿಗೆ ಸೇರಿದ್ದು. ಸುಮ್ಮನೆ ನೀನು ಭೂಮಿ ಮೇಲೆ ಕೆಲವೊಂದು ಪಾಠಗಳನ್ನು ಕಲಿತುಕೊಳ್ಳುವುದಕ್ಕೆ ಬಂದಿದ್ದೀಯ. ಹಾಗೆ ಜೀವಿಸುತ್ತಾ ಅನುಭವಿಸುತ್ತಿದ್ದೀಯ ಅಷ್ಟು ಬಿಟ್ಟರೆ, ಯಾವುದು ನಿನ್ನದಲ್ಲ. ಒಂದು ವೇಳೆ ನಿನ್ನದಾದರೆ, ನಿನ್ನ ಜೊತೆ ತೆಗೆದುಕೊಂಡು

ಹೋಗುವೆ, ಅದು ನಿನ್ನದಲ್ಲದ ಕಾರಣ ಎಲ್ಲವನ್ನು ಇಲ್ಲೇ ಬಿಟ್ಟು ಹೊರಟು ಹೋಗುವೆ. ಮತ್ತೆ ಯಾವುದು ನಿನ್ನದು? ಅಂದರೆ, ಈ ಶರೀರದಲ್ಲಿರುವಾಗ ಮಾಡುವ ಕರ್ಮಫಲಗಳು. ಅಂದರೆ ಪಾಪ ಪುಣ್ಯಗಳ ಫಲಿತವೇ ನಿನ್ನದು. ಅದನ್ನು ಮಾತ್ರವೇ ನೀನು ತೆಗೆದುಕೊಂಡು ಹೋಗಬಲ್ಲೆ. ಒಂದು ವೇಳೆ ನೀನು ಜ್ಞಾನವನ್ನು ಸಂಪಾದಿಸಿಕೊಂಡರೆ, ಆ ಜ್ಞಾನವನ್ನು ಕೂಡ ನಿನ್ನ ಜೊತೆಗೆ ತೆಗೆದುಕೊಂಡು ಹೋಗುವೆ.

ಅಷ್ಟು ಬಿಟ್ಟರೆ, ಭೂಮಿ ಮೇಲೆ ಇರುವುದೆಲ್ಲಾ ಯಾವುದು ನಿನ್ನದಲ್ಲ, ನಿನ್ನ ಜೊತೆ ತೆಗೆದುಕೊಂಡು ಹೋಗಲಾರೆ. ಅವುಗಳಿಗೋಸ್ಕರ ಜಗಳ ಬೇಡ, ಮೋಸ ಬೇಡ, ತಪ್ಪುಗಳನ್ನು ಮಾಡಿ, ಅಧರ್ಮವಾಗಿ ವರ್ತಿಸಿ, ಪಾಪಗಳನ್ನು ಮಾಡಿ, ಎಷ್ಟು ಸಂಪಾದನೆ ಮಾಡಿದರೂ, ಸಂಪಾದಿಸಿದಂತಹ ಯಾವುದೊಂದು ನಿನ್ನ ಜೊತೆ ಬರುವುದಿಲ್ಲ. ಆದರೆ ಅವುಗಳನ್ನು ಸಂಪಾದಿಸಲು ಮಾಡಿದ ಪಾಪಗಳ ಫಲಿತವು ಮಾತ್ರ ನಿನ್ನನ್ನು ಬಿಡದೆ ಬೆಂಬಲಿಸಿ ಬರುತ್ತದೆ. ಭವಿಷ್ಯತ್ತಿನಲ್ಲಿ ಅವುಗಳ ಫಲಿತವು ದುಃಖ ರೂಪದಲ್ಲಿ ಅನುಭವಿಸಬೇಕಾಗಿ ಬರುತ್ತದೆ.

ಹಾಗೆಯೇ ನಮ್ಮ ಜೊತೆ ಬರದೇ ಇರುವುದಕ್ಕೋಸ್ಕರ ಚಿಕ್ಕ ಚಿಕ್ಕ ವಿಷಯಗಳಿಗೋಸ್ಕರ ಜಗಳ ಮಾಡಿದರೆ, ನಾವು ದುಃಖಕ್ಕೆ ಒಳಪಡಬೇಕಾಗಿ ಬರುತ್ತದೆ. ನಮ್ಮನ್ನು ನಾವು ಹಾಳು ಮಾಡಿಕೊಳ್ಳುತ್ತೇವೆ. ಕೋರ್ಟು ಕಚೇರಿ ಎಂಬುದಾಗಿ ಅಳೆಯುತ್ತೇವೆ. ನಾವು ಇದನ್ನು ಸಮಾಜದಲ್ಲಿ ನಿತ್ಯ ನೋಡುತ್ತಿದ್ದೇವೆ.

ಭೂಮಿ ಮೇಲೆ ನನ್ನದು ಎಂಬುದು ಏನೂ ಇಲ್ಲ, ಎಂಬ ವಿಷಯ ಯಾರಿಗೂ ಗೊತ್ತಾಗುತ್ತಿಲ್ಲ. ಆದರೆ ಇದನ್ನು ಯಾರು ತಿಳಿದುಕೊಳ್ಳುತ್ತಾರೋ, ಅವನೇ ಜ್ಞಾನಿ. ನಿನಗೆ ತಿನ್ನುವುದಕ್ಕೆ ಊಟ, ಇರುವುದಕ್ಕೆ ಮನೆ ಇದೆಯೋ? ಇಲ್ಲವೋ? ಅವಶ್ಯಕತೆಗೆ ತಕ್ಕಂತೆ ಇದೆಯೋ? ಇಲ್ಲವೋ? ಎಂಬುದನ್ನು ನೋಡಿಕೊಳ್ಳಿ. ಕೋಟಿಗಟ್ಟಲೆ ಇದೆಯಾ? ಇಲ್ಲವಾ? ಬಿಲ್ಡಿಂಗ್ ಇದೆಯಾ? ಇಲ್ಲವಾ? ಕಾರು ಇದೆಯಾ? ಇಲ್ಲವಾ? ಎಂಬುದು ಅನವಶ್ಯಕ.

ಇದನ್ನೆಲ್ಲಾ ಏನು ಮಾಡಿಕೊಳ್ಳುತ್ತೀರಿ? ಇರುವಷ್ಟು ದಿನ ಇರುತ್ತವೆ. ಅಲ್ಲವೇ? ಎಂದು ಹೇಳುತ್ತೀರ! ಇರುವಷ್ಟು ದಿನ ಇರುವುದಕ್ಕೆ ಎಷ್ಟು ಬೇಕಾಗುತ್ತದೆ? ಎಷ್ಟು ಕೋಟಿ ಬೇಕಾಗುತ್ತದೆ? ಎಷ್ಟು ಬಿಲ್ಡಿಂಗುಗಳು ಬೇಕಾಗುತ್ತವೆ? ನೂರಾರು ಎಕರೆ ಜಮೀನು ಎಷ್ಟು ಬೇಕಾಗುತ್ತದೆ? ಯೋಚಿಸಿ. ಸುಮ್ಮಸುಮ್ಮನೆ ಬಿಲ್ಡಪ್ ಗೋಸ್ಕರ ಅಲ್ಲವೇ? ಅಸಲು

ಇರುವಷ್ಟು ದಿನ, ಇರುವುದಕ್ಕೆ ಏನು ಇರಬೇಕು? ಒಂದು ಮನೆ, ಹಾಕಿಕೊಳ್ಳಲು ಬಟ್ಟೆ, ತಿಂಡಿ ಇರಬೇಕು. ಒಬ್ಬರು ಜೊತೆಗೆ ಇರಬೇಕು. ಅಸಲಿಗೆ ಇರುವಷ್ಟು ಕಾಲ ಏನು ಬೇಕು? ಯೋಚಿಸುತ್ತಿದ್ದಾರೆಯೇ ಹೊರತು ನಿಜವಾಗಲೂ ಮಾಡಬೇಕಾಗಿರುವುದರ ಬಗ್ಗೆ ಗಮನ ಕೊಡುತ್ತಿಲ್ಲ.

ಅಸಲಿಗೆ ನಾನು ಯಾರು ಎಲ್ಲಿಂದ ಬಂದಿದ್ದೇನೆ? ತಿರಿಗಿ ಎಲ್ಲಿಗೆ ಹೋಗುತ್ತೇನೆ? ಅಸಲಿಗೆ ನಾನು ಮಾಡಬೇಕಾಗಿರುವುದು ಏನು? ನನ್ನ ಜೀವನದ ಗುರಿ ಏನು? ಎಂಬುದರ ಬಗ್ಗೆ ಯೋಚಿಸಬೇಕು. ತನಗಿರುವ ಸಮಯವನ್ನು ಯಾವುದಕ್ಕೆ ಬಳಸಿಕೊಳ್ಳಬೇಕು? ಎಂಬ ಅರಿವು ಇರಬೇಕು. ಅಷ್ಟೇ ಹೊರತು ಇರುವ ಕಾಲವನ್ನೂ, ಇದ್ದವುಗಳನ್ನು ಇದ್ದಾವೆ ಎಂದು ತಿಳಿದುಕೊಳ್ಳದೆ, ನಮ್ಮತ್ರ ಇಲ್ಲದಿರುವುದರ ಸಂಪಾದನೆಗಾಗಿ ಜೀವನವೆಲ್ಲ ಇರುವ ಸಮಯವನ್ನು ವ್ಯರ್ಥ ಮಾಡಿದರೆ ಅಂತಹವರ ಪರಿಸ್ಥಿತಿ ಏನು?

ಆದ್ದರಿಂದ ಇದನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಿ. ತಾನು ಭೂಮಿಯ ಮೇಲೆ ಅಲ್ಪ ಕಾಲವೇ ಇರುತ್ತೇನೆಂದು, ಶಾಶ್ವತವಾಗಿ ಇರುವುದಿಲ್ಲವೆಂದು ತಿಳಿದುಕೊಳ್ಳಬೇಕು. ತನಗಿಂತ ಮೊದಲು ಬಂದವರು ಹಲವಾರು ಜನ ಸತ್ತು ಹೋಗಿದ್ದಾರೆ, ಹಾಗೆಯೇ ತಾನು ಕೂಡ ಎಂದಾದರೂ ಒಂದು ದಿನ ಸತ್ತು ಹೋಗಬೇಕಾಗಿರುವುದೇ, ಎಂಬುದನ್ನು ತಿಳಿದುಕೊಳ್ಳಬೇಕು.

ಆದುದರಿಂದ ಶ್ರೇಷ್ಠವಂತರೂ ಹೇಳಿರುವ ಸಂದೇಶಗಳನ್ನು ಅರಿತುಕೊಳ್ಳಬೇಕು, ಅರಿತು ಅವುಗಳಿಗೆ ಅನುಗುಣವಾಗಿ ಜೀವಿಸಬೇಕು ನಮ್ಮ ಜ್ಞಾನವು ಹೆಚ್ಚಿದಂತೆಲ್ಲಾ ನಾವು ಇವುಗಳನ್ನು ಅರ್ಥ ಮಾಡಿಕೊಳ್ಳುತ್ತೇವೆ. ಅದಕ್ಕೆ ಅನುಗುಣವಾಗಿ ಜೀವಿಸುತ್ತೇವೆ, ಅದೃಷ್ಟವಂತರು ಆಗುತ್ತೇವೆ.

## ಮರಣಿಸಿದ ತಕ್ಷಣ ಏನು ನಡೆಯುತ್ತದೆ?

ಪತ್ರಿಯವರು ಲಾಕ್ಡೌನ್ ಸಮಯದಲ್ಲಿ ಸುಮಾರು ನೂರು ತರಗತಿಗಳನ್ನು ಹೇಳಿದ್ದಾರೆ. ಅದರಲ್ಲಿ 70 ರಿಂದ 80 ಎಪಿಸೋಡ್ ಗಳು ಕೇವಲ ಆತ್ಮ ಜ್ಞಾನದ ಬಗ್ಗೆ ಹೇಳಿದ್ದಾರೆ.

ಆ ಸಂದರ್ಭದಲ್ಲಿ ಪತ್ರಿಯವರು ಏನು ಹೇಳಿದ್ದಾರೆಂದರೆ, ಮರಣಿಸುವ ಮೊದಲೇ, ಮರಣ ಹೊಂದಬೇಕು, ಎಂದು ಹೇಳಿದ್ದರು. ಅದರ ಅರ್ಥ ಮರಣಿಸಿದ ನಂತರ ನಡೆಯುವ ವಿಚಾರಗಳನ್ನು ಮರಣಿಸುವ ಮೊದಲೇ ತಿಳಿದುಕೊಳ್ಳಬೇಕು.

ಪತ್ರಿಯವರ ಹಾಗೆ ನಾವು ಕೂಡ ಮೂರನೇ ಕಣ್ಣನ್ನು ಸಂಪಾದಿಸಿಕೊಂಡವರಾದರೆ, ಆ ವಿಷಯಗಳೆಲ್ಲವೂ ನಮಗೂ ಅನುಭವಕ್ಕೆ ಬರುತ್ತವೆ.

ಆದ್ದರಿಂದ ಆ ವಿಷಯಗಳಲ್ಲಿ ಕೆಲವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನ ಮಾಡೋಣ. ನೋಡಿ, ನಾವೆಲ್ಲ ಮಾನವರು ಮಾನವ ಎಂದರೆ ಶರೀರ, ಮನಸ್ಸು, ಆತ್ಮ ಇವು ಮೂರು ಸೇರಿಕೊಂಡು ಇರುತ್ತವೆ. ಆತ್ಮ ಆಗಿರುವ ನಾವು ಶರೀರವನ್ನು ಧರಿಸಿಕೊಂಡಿದ್ದೇವೆ. ಇದನ್ನು ಧರಿಸುವ ಮೊದಲು ನಾವು ಆತ್ಮಗಳು ಶರೀರವನ್ನು ಧರಿಸಿದ ನಂತರ ಮಾನವರಾಗಿದ್ದೇವೆ.

ಆತ್ಮ ಶರೀರದಿಂದ ಬೇರ್ಪಟ್ಟ ತಕ್ಷಣ ಆ ಶರೀರವನ್ನು ಶವ ಎಂದು ಕರೆಯುತ್ತೇವೆ. ಸತ್ತು ಹೋಗಿದ್ದಾನೆ ಅಂತಾರೆ ಪ್ರಾಣ ಹೋಗಿದೆ ಅನ್ನುತ್ತಾರೆ. ಆದ್ದರಿಂದ ಆತ್ಮವಿದ್ದರೇನೇ ಅವನು ಜೀವಂತ ಇದ್ದಂತೆ, ಆತ್ಮ ಶರೀರದಿಂದ ನಿಷ್ಕ್ರಯಿಸಿದರೆ ಅವನು ಸತ್ತನೆಂದು ಅರ್ಥ.

ಈ ಶರೀರದಲ್ಲಿ ಆತ್ಮ ಹೇಗೆ ಇರುತ್ತದೆ? ಅಂದರೆ ಈ ಶರೀರಕ್ಕೂ, ಆತ್ಮಕ್ಕೂ ಮಧ್ಯದಲ್ಲಿ ಒಂದು ಕನೆಕ್ಷನ್ ಇದೆ. ಅದನ್ನೇ ಇಲ್ಲಿ ಸಿಲ್ವರ್ ಕಾರ್ಡ್ ಅಥವಾ ಬೆಳ್ಳಿ ವಯರ್ ಎಂದು ಹೇಳುತ್ತಾರೆ. ಆ ಕನೆಕ್ಷನ್ ಇರುವಷ್ಟು ದಿನ ಆತ್ಮ ಶರೀರದಲ್ಲಿದ್ದು ಕೆಲಸಗಳನ್ನು ಮಾಡಿಸುತ್ತದೆ. ಯಾವಾಗ ಆ ಸಿಲ್ವರ್ ಕಾರ್ಡ್ ಕಟ್ಟಾಗುತ್ತದೆಯೋ, ಆಗ ಆತ್ಮ ಶರೀರದಲ್ಲಿ ಇರುವುದಕ್ಕೆ ಆಗುವುದಿಲ್ಲ. ಮತ್ತೆ ಆ ಸಿಲ್ವರ್ ಕಾರ್ಡ್ ಯಾಕೆ ಕಟ್ ಆಗುತ್ತದೆ? ಅಂದರೆ ಅವನು ಇಷ್ಟು ವರ್ಷಗಳ ಕಾಲ ಭೂಮಿ ಮೇಲೆ ಜೀವಿಸಬೇಕೆಂದು ಮೇಲಿನ

ಲೋಕಗಳಲ್ಲಿ ನಿರ್ಣಯಿಸಿಕೊಂಡು ಬಂದಿರುತ್ತಾನೆ. ಅದನ್ನೇ ಆಯುಷ್ಯ ಅನ್ನುತ್ತಾರೆ. ಆಯುಷ್ಯ ತೀರಿಹೋದ ಮೇಲೆ ಯಾವುದೋ ಒಂದು ಕಾರಣದ ಮೇಲೆ, ಅಥವಾ ಕಾರಣದಿಂದ ಸಿಲ್ವರ್ ಕಾರ್ಡ್ ಆಗುತ್ತದೆ. ಇಲ್ಲವಾದರೆ ಕಾರಣ ಏನೇ ಆಗಿರಬಹುದು ಸಿಲ್ವರ್ ಕಾರ್ಡ್ ಆಗುವ ಮೂಲಕ ಆತ್ಮವು ಶರೀರದಲ್ಲಿ ಇರುವುದಕ್ಕೆ ಆಗುವುದಿಲ್ಲ ಹೊರಗೆ ಬಂದುಬಿಡುತ್ತದೆ.

ಹಾಗೆ ಯಾರಾದರೂ ಮನೆಯಲ್ಲಿ ಸತ್ತು ಹೋದರೆ ಸತ್ತವರ ಆತ್ಮ ಶರೀರದಿಂದ ಹೊರಗೆ ಬಂದುಬಿಡುತ್ತದೆ. ಹಾಗೆ ಹೊರಗೆ ಬಂದ ಆತ್ಮ ಆ ಕೊಠಡಿಯಲ್ಲಿಯೇ ಸೀಲಿಂಗ್ ಮೇಲಿಂದ ಕೆಳಗೆ ನೋಡುತ್ತದೆ. ಸತ್ತಿರುವುದು ಪುರುಷನಾದರೆ ಮೇಲಿಂದ ಕೆಳಗೆ ಇರುವ ತನ್ನ ಶರೀರವನ್ನು ತಾನು ನೋಡಿಕೊಳ್ಳುತ್ತಾನೆ. ಆಶ್ಚರ್ಯ ಪಡುತ್ತಾನೆ. ಅದು ಏನು? ನಾನು ಇಲ್ಲಿ ನೆಲೆಸಿದ್ದೇನೆ, ಅಲ್ಲೂ ಇದ್ದೇನೆ. ಅದರಲ್ಲೂ ಮಂಚದ ಮೇಲೆ ಇರುವುದು ನಾನಾ? ಹೀಗೆ ಗಾಳಿಯಲ್ಲಿ ತೂರಾಡುತ್ತಿರುವುದು ನಾನಾ? ಎಂದು ಕೆಲವು ಸಮಯ ತಬ್ಬಿಬ್ಬಾಗುತ್ತಾನೆ. ತಳಮಲಗೊಳ್ಳುತ್ತಾನೆ.

ಕಾರಣ ಅವನು ಮೊದಲ ಬಾರಿಗೆ ತನ್ನನ್ನು ತಾನು ಹಾಗೆ ನೋಡುತ್ತಿದ್ದಾನೆ. ಇದಕ್ಕಿಂತ ಮೊದಲು ತನ್ನನ್ನು ತಾನು ಶರೀರ ಅಂದುಕೊಂಡಿರುತ್ತಾನೆ. ಆದರೆ ಈಗ ಮೇಲೆ ಗಾಳಿಯಲ್ಲಿ ಇದ್ದಾನೆ. ಕೆಳಗೆ ಮಂಚದ ಮೇಲೆ ಶರೀರವು ಇದೆ. ಕೊನೆಗೆ ಕೆಳಗಿರುವ ಆ ಶರೀರವು ನಾನು ಅಲ್ಲ ಗಾಳಿಯಲ್ಲಿ ತೂರಾಡುತ್ತಿರುವ ಈ ಆತ್ಮವೇ ನಾನು ಎಂದು ತಿಳಿಯುತ್ತದೆ. ಹಾಗೆ ಮೊಟ್ಟಮೊದಲ ಬಾರಿಗೆ ಶರೀರವು ತಾನು ಅಲ್ಲ, ತಾನೊಂದು ಆತ್ಮ ಎಂದು ತಿಳಿಯುತ್ತದೆ. ಅದು ತನ್ನ ಶರೀರವೇ ಹೊರತು ತಾನಲ್ಲ ಎಂಬ ಸಂಗತಿ ತಿಳಿದುಕೊಳ್ಳುತ್ತಾನೆ.

ಜೀವನದಲ್ಲಿ ಹಲವಾರು ಜನಕ್ಕೆ ಸತ್ತ ನಂತರ ಮೊದಲ ಬಾರಿಗೆ ಈ ವಿಷಯವು ತಿಳಿಯುತ್ತದೆ. ಆಗ ಆಶ್ಚರ್ಯಪಡುತ್ತಾರೆ. ಕಾರಣ ಅಲ್ಲಿಯವರೆಗೂ ಆ ಶರೀರವೇ ತಾನು ಎಂದು ತಿಳಿದು ಅದಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾರೆ. ಆ ಶರೀರಕೋಸ್ಕರ ಕಷ್ಟಪಟ್ಟಿರುತ್ತಾರೆ. ಜೀವಿಸಿರುತ್ತಾರೆ. ಏನೇ ಮಾಡಿದರೂ ಅದು ಶರೀರಕೋಸ್ಕರ ಮಾಡಿರುತ್ತಾರೆ. ಅದಕ್ಕೂ ಮೊದಲು ಆತ್ಮ ಎಂಬುದು ಒಂದು ಇದೆ ಎಂಬ ಸಂಗತಿಯನ್ನು ಅವರು ತಿಳಿದಿರುವುದಿಲ್ಲ. ಅದಕ್ಕೋಸ್ಕರ ತಾನು ಆತ್ಮ ಎಂದು ತಿಳಿದ ತಕ್ಷಣ ಆಶ್ಚರ್ಯ ಪಡುತ್ತಾರೆ.

ಆದರೆ ತುಂಬಾ ಜನಕ್ಕೆ ಅಂದರೆ ಧ್ಯಾನಮಾರ್ಗದಲ್ಲಿ ನಡೆಯುವವರಿಗೆ ಸಾಯುವುದಕ್ಕಿಂತ ಮೊದಲೇ ಈ ವಿಷಯವು ತಿಳಿದಿರುತ್ತದೆ. ಅದು ಏನೆಂದರೆ ನಾನು ದೇಹವಲ್ಲ ನಾನು ಒಂದು ಆತ್ಮ ಎಂಬ ವಿಷಯ.

ಆದರೆ ಉಳಿದವರು ಅಶ್ಚರ್ಯ ಪಡುತ್ತಾರೆ. ಆರೇ ಇಲ್ಲಿಯವರೆಗೂ ಆ ಕದಲದೆ ಶವವಾಗಿರುವ ಶರೀರವನ್ನೇ ನಾನು ಎಂದು ಅಂದುಕೊಂಡಿದ್ದೇನೆ ಅದಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟೆನು, ಅದಕ್ಕೋಸ್ಕರ ತುಂಬಾ ಕಷ್ಟಪಟ್ಟೆ, ಅಸಲಿಗೆ ಆ ಶರೀರವು ನಾನಲ್ಲ ಎಂಬ ವಿಷಯವನ್ನು ನಾನು ತಿಳಿದುಕೊಳ್ಳಲಿಲ್ಲ. ಎಂದು ಅಂದುಕೊಳ್ಳುತ್ತಾನೆ. ಅಲ್ಲಿಯವರೆಗೂ ಶರೀರದ ರೋಗಗಳನ್ನು ಕಡಿಮೆ ಮಾಡಿಕೊಳ್ಳಲು ಪ್ರಯಾಸ ಪಡುತ್ತಿರುತ್ತಾನೆ. ಶರೀರವನ್ನು ಆರೋಗ್ಯವಾಗಿ ಇಟ್ಟುಕೊಳ್ಳುವುದಕ್ಕೆ ನೋಡಿಕೊಳ್ಳುತ್ತಾನೆ. ತನ್ನ ಶರೀರದ ಅಂದ ಚಂದಕ್ಕಾಗಿ ಹೆಚ್ಚು ಗಮನ ಕೊಟ್ಟಿರುತ್ತಾನೆ. ಆದರೆ ಆತ್ಮವಾಗಿರುವ ತನ್ನ ಬಗ್ಗೆ ಯೋಚಿಸಲೇ ಇಲ್ಲ ಎಂಬುದಾಗಿ ತಿಳಿದುಕೊಳ್ಳುತ್ತಾನೆ.

ಆದರೆ ಧ್ಯಾನ ಮಾರ್ಗದಲ್ಲಿ ಬಂದವರು ಕೂಡ ಆತ್ಮದ ಬಗ್ಗೆ ತಿಳಿದುಕೊಂಡರೂ, ಆತ್ಮವೇ ತಾನು ಎಂದು ತಿಳಿದುಕೊಂಡರೂ, ತಾನು ದೇಹವೆಂಬಂತೆ ಜೀವಿಸುತ್ತಿರುತ್ತಾರೆ. ದೇಹಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಿರುತ್ತಾರೆ.

ಹಾಗೆ ಅವರು ಆತ್ಮದ ಬಗ್ಗೆ ತಿಳಿದುಕೊಂಡರೂ ಅದನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಇಡೀ ಜೀವನವೆಲ್ಲ ಶರೀರಕ್ಕಾಗಿಯೇ ಕಷ್ಟ ಪಡುತ್ತಾರೆ. ಆತ್ಮವನ್ನು ಗಮನಿಸುವುದೇ ಇಲ್ಲ. ಆತ್ಮದ ಬಗ್ಗೆ ಏನು ಮಾಡುವುದಿಲ್ಲ. ಅಂತಹವರು ಅಂದರೆ ಈ ಆತ್ಮ ಜ್ಞಾನವು ಇಲ್ಲದವರು ಶರೀರವನ್ನು ಬಿಟ್ಟಾಗ, ಅಂದರೆ ಸತ್ತಾಗ ತುಂಬಾ ಗಾಬರಿಗೆ ಒಳಪಡುತ್ತಾರೆ.

ಕಾರಣ ತಾನು ಮೇಲೆ ಇದ್ದಾನೆ, ಶರೀರವು ಕೆಳಗೆ ಇದೆ. ಆಗ ಈ ವಿಷಯವನ್ನು ತಮಗೆ ಮೊದಲೇ ಹೇಳಿದ್ದರೂ ಅದನ್ನು ನಾವು ಪಾಲಿಸಲಿಲ್ಲ, ಎಂದು ಅಂದುಕೊಳ್ಳುತ್ತಾರೆ. ಆದರೆ ಆ ಮಾಸ್ಟರ್ ಗಳು ಹೇಳಿದ್ದು ನಿಜ ಎಂಬುದನ್ನು ಆಗ ಅರ್ಥಮಾಡಿಕೊಳ್ಳುತ್ತಾರೆ. ಆದರೆ ಅಷ್ಟೊತ್ತಿಗಾಗಲೇ ಎಲ್ಲವೂ ನಡೆದು ಹೋಗಿರುತ್ತದೆ.

ಇವನ ಶರೀರವು ಯಾವುದೇ ಕಾರಣಕ್ಕೂ ಕದಲುವುದಿಲ್ಲ. ಪಕ್ಕದಲ್ಲಿರುವ ಹೆಂಡತಿಗೆ ಸ್ವಲ್ಪ ಸಮಯಕ್ಕೆ ಅನುಮಾನ ಬರುತ್ತದೆ. ಏನು ಇವರು ಕದಳಲು ಇಲ್ಲವಲ್ಲ ಅಂದುಕೊಂಡು ಹಾಗೆ ಹೀಗೆ ಕದಲಿಸುತ್ತಾಳೆ. ಏನೇ ಮಾಡಿದರೂ ಅವನು ಹಾಗೆ

ಇದ್ದುಬಿಡುತ್ತಾನೆ. ಆಗ ಆಕೆಗೆ ಸತ್ತು ಹೋಗಿದ್ದಾನೆಯೇ? ಎಂಬ ಅನುಮಾನ ಬರುತ್ತದೆ. ಭಯವಾಗುತ್ತದೆ. ತಕ್ಷಣವೇ ಜೋರಾಗಿ ಅಳುತ್ತಾಳೆ. ಆ ಅಳುವನ್ನು ಗಮನಿಸಿದ ಮನೆಯವರೆಲ್ಲ ಬರುತ್ತಾರೆ. ಅವರಲ್ಲಿ ಒಬ್ಬರು ಡಾಕ್ಟರ್ ಹತ್ತಿರ ಹೋಗುತ್ತಾರೆ. ಹಾಗೆ ಹೆಂಡತಿ ರೋಧಿಸುತ್ತಾ ಇರುತ್ತಾಳೆ. ಹಾಗೆ ತನ್ನ ಹೆಂಡತಿ ಅಳುತ್ತಾ ಇದ್ದರೆ ಮೇಲಿರುವ ಇವನು ಹಾಗೆಯೇ ಹತ್ತಿರಕ್ಕೆ ಹೋಗುತ್ತಾನೆ. ತನ್ನ ಹೆಂಡತಿಯೊಂದಿಗೆ ಹೀಗೆ ಹೇಳುತ್ತಾನೆ. ಯಾಕೆ ಅಳುತ್ತಿರುವೆ? ನಾನು ಇನ್ನೂ ಪಕ್ಕದಲ್ಲಿಯೇ ಇದ್ದೇನಲ್ಲವೇ? ಎಂದು ಅನ್ನುತ್ತಾನೆ. ಇವನು ಎಷ್ಟು ಹೇಳಿದರು ಆಕೆಗೆ ಗೊತ್ತಾಗುವುದಿಲ್ಲ. ಆಕೆ ಹಾಗೆಯೇ ಅಳುತ್ತ ಇರುತ್ತಾಳೆ. ಹಾಗೆಯೇ ಯಾರು ಈತನನ್ನು ಗಮನಿಸುವುದಿಲ್ಲ. ಆಗ ಅವನಿಗೆ ಆಶ್ಚರ್ಯವಾಗುತ್ತದೆ. ಕಾರಣ ತಾನು ಅಲ್ಲೇ ಇದ್ದಾನೆ. ಆದರೂ ತನ್ನವರೆಲ್ಲ ಹೊರಟು ಹೋಗಿದ್ದಾನೆಂದು ಅಳುತ್ತಿರುತ್ತಾರೆ. ಅಸಲಿಗೆ ತಾನು ಅಲ್ಲೇ ಇದ್ದರೂ ಅವರೆಲ್ಲರೂ ಯಾಕೆ? ಅಳುತ್ತಿದ್ದಾರೆಂದು ಅರ್ಥವಾಗುವುದಿಲ್ಲ.

ಅವನು ತಾನು ಎಷ್ಟು ಹೇಳುತ್ತಿದ್ದರು ಯಾಕೆ ಕೇಳಿಸಿಕೊಳ್ಳುತ್ತಿಲ್ಲ? ಯಾಕೆ ನನ್ನ ಮಾತನ್ನು ಗಮನಿಸುತ್ತಿಲ್ಲ? ಏನಾಗುತ್ತಿದೆ? ಎಂದು ಅಂದುಕೊಳ್ಳುತ್ತಾನೆ.

ಅಷ್ಟರಲ್ಲಿ ನೆಂಟರು ಸ್ನೇಹಿತರು ಬರುತ್ತಾರೆ. ಅವರ ಹತ್ತಿರವೂ ಹೋಗಿ ಇವನು ಏನು ಹೇಳುತ್ತಾನೆಂದರೆ, ನನ್ನ ಹೆಂಡತಿ ನನ್ನ ಮಾತು ಕೇಳಿಸಿಕೊಳ್ಳುತ್ತಿಲ್ಲ. ನೀವಾದರೂ ಹೇಳಿ ಎಂದು ಅನ್ನುತ್ತಾನೆ. ಅವರು ಕೂಡ ಇವನ ಮಾತನ್ನು ಗಮನಿಸುವುದಿಲ್ಲ. ಇನ್ನು ಇವನಿಗೆ ಹುಚ್ಚು ಹಿಡಿಯುತ್ತದೆ. ಇದೇನು ನನ್ನ ಪರಿಸ್ಥಿತಿ? ಹೀಗೆ ಆಗಿದೆ. ನಾನು ಎಷ್ಟು ಹೇಳುತ್ತಿದ್ದರು ಯಾರು ಕೇಳಿಸಿಕೊಳ್ಳುತ್ತಿಲ್ಲ, ಎಂದು ಆಶ್ಚರ್ಯಪಡುತ್ತಾನೆ.

ಇದಕ್ಕಿಂತ ವಿಚಿತ್ರವೇನೆಂದರೆ ಇವನಿಗೆ ಅವರೆಲ್ಲ ಸ್ಪಷ್ಟವಾಗಿ ಕಾಣಿಸುತ್ತಾರೆ. ಅವರ ಮಾತುಗಳು ಕೇಳಿಸುತ್ತವೆ. ಆದರೆ ಅವರಿಗೆ ಇವನು ಕಾಣಿಸುವುದಿಲ್ಲ, ಈತ ಮಾತಾಡಿದ್ದು ಕೇಳಿಸುವುದಿಲ್ಲ, ಅವನಿಗೆ ಮೊದಲು ಇದೇನು ಅರ್ಥವಾಗುವುದಿಲ್ಲ.

ಅಷ್ಟರಲ್ಲಿ ಅಲ್ಲಿಗೆ ಡಾಕ್ಟರ್ ಬರುತ್ತಾನೆ. ನಾಡಿಯನ್ನು ಹಿಡಿದುಕೊಂಡು ನೋಡುತ್ತಾನೆ. ಅವನು ಸತ್ತು ಹೋಗಿದ್ದಾನೆ. ಎಂಬುದನ್ನು ಖಚಿತಪಡಿಸಿಕೊಂಡ ನಂತರ ಅವನು ಸತ್ತು ಹೋಗಿದ್ದಾನೆ ಎಂಬ ವಿಷಯವನ್ನು ತಿಳಿಸುತ್ತಾನೆ. ಆಗ ಎಲ್ಲರೂ ಅಳುತ್ತಾರೆ. ಅದರಲ್ಲಿ ಕೆಲವರು ಶವವನ್ನು ತೆಗೆದು ಮನೆಯಿಂದ ಹೊರಗೆ ಇಡುತ್ತಾರೆ. ಮೆಲ್ಲಮೆಲ್ಲನೆ ದಹನ ಸಂಸ್ಕಾರಕ್ಕೆ ಬೇಕಾಗಿರುವ ಕೆಲಸ ಕಾರ್ಯಗಳನ್ನು ಮಾಡುತ್ತಿರುತ್ತಾರೆ. ಅವು ಕೂಡ

ಅವನಿಗೆ ಆಶ್ಚರ್ಯವನ್ನು ಉಂಟು ಮಾಡುತ್ತವೆ. ಈ ಸಮಯದಲ್ಲಿ ಮೇಲಿಂದ ಇಬ್ಬರು ಸಹಾಯಕರು ಬರುತ್ತಾರೆ. ಅವರನ್ನೇ ಯಮಭಟರು ಎಂದು ಸಿನಿಮಾಗಳಲ್ಲಿ ತೋರಿಸುತ್ತಾರೆ.

ಆ ಸಹಾಯಕರು ಏನು ಹೇಳುತ್ತಾರೆಂದರೆ, ನೀನು ಸತ್ತು ಹೋಗಿದ್ದೀಯಾ, ಅದಕ್ಕಾಗಿಯೇ ನಾವು ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದೇವೆ. ನಾವು ಮೇಲಿನ ಲೋಕಗಳಿಗೆ ಹೋಗಬೇಕು, ನಡಿ, ಎಂದು ಹೇಳುತ್ತಾರೆ. ಅವನು ಇನ್ನೂ ಆಶ್ಚರ್ಯ ಪಡುತ್ತಾನೆ. ಅಸಲಿಗೆ ಇವರ್ಯಾರು? ಇವರು ನನ್ನನ್ನು ಯಾಕೆ ತೆಗೆದುಕೊಂಡು ಹೋಗುತ್ತಾರೆ? ಮೇಲಿನ ಲೋಕಗಳು ಅನ್ನುತ್ತಿದ್ದಾರೆ, ಮೇಲಿನ ಲೋಕಗಳು ಎಲ್ಲಿವೆ? ಎಂದು ಅಂದುಕೊಳ್ಳುತ್ತಾನೆ. ಅವರನ್ನು ಕೇಳುತ್ತಾನೆ ನೀವು ಯಾರು? ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿದ್ದೀರಾ? ನಾನು ಯಾಕೆ ನಿಮ್ಮ ಜೊತೆ ಬರಬೇಕು? ನಾನು ಬರುವುದಿಲ್ಲ, ಎಂದು ಅನ್ನುತ್ತಾನೆ. ಆಗ ಅವರು ಏನು ಹೇಳುತ್ತಾರೆಂದರೆ:–

ಅಸಲಿಗೆ ನೀನು ಭೂಲೋಕದಲ್ಲಿ ಇರುವವನೇ ಅಲ್ಲ. ನೀನು ಒಂದು ಆತ್ಮ. ಆತ್ಮವಾಗಿರುವ ನೀನು ಮೇಲಿನ ಲೋಕಗಳಿಂದ ಬಂದಿದ್ದೆ ಈಗ ತಿರುಗಿ ಮೇಲಿನ ಲೋಕಗಳಿಗೆ ಹೊರಟು ಹೋಗೋಣ ಎಂದು ಹೇಳುತ್ತಾರೆ.

ಹಾಗೆ ಹೇಳಿದ ತಕ್ಷಣ ಹೊರಟು ಹೋಗುತ್ತಾನೆಯೇ? ಇಲ್ಲ ಹೋಗುವುದಿಲ್ಲ. ಯಾಕೆಂದರೆ ಅವನಿಗೆ ಹೆಂಡತಿ ಮಕ್ಕಳೆಂದರೆ ಬಹಳ ಇಷ್ಟ. ಅವರ ಮೇಲೆ ಎಷ್ಟೋ ಮಮಕಾರವಿರುತ್ತದೆ. ಮತ್ತೆ ಹೇಗೆ ಬಿಟ್ಟು ಹೋಗುತ್ತಾನೆ? ಅಷ್ಟೇ ಅಲ್ಲದೆ ಅವನು ಕಷ್ಟಪಟ್ಟು ಸಂಪಾದನೆ ಮಾಡಿಕೊಂಡ ಆಸ್ತಿ ಅಂತಸ್ತು ಧನ ಎಲ್ಲವನ್ನು ಬಿಟ್ಟು ಹೋಗಬೇಕೆಂದರೆ ಹೇಗೆ ಹೋಗುತ್ತಾನೆ?

ಅಲ್ಲಿಯ ತನಕ ಅದೆಲ್ಲ ನನ್ನದು, ಈ ದೇಹ ನಾನು, ಇವರೆಲ್ಲ ನನ್ನವರು. ಎಂಬ ಭ್ರಮೆಯಲ್ಲಿಯೇ ಇದ್ದಂತವನು.ಯಾವಾಗಲೂ ನಾನು ಚೆನ್ನಾಗಿರಬೇಕು. ನನ್ನವರು ಚೆನ್ನಾಗಿರಬೇಕು ಎಂಬ ಯೋಚನೆ ಬಿಟ್ಟರೆ ಮತ್ತೊಂದು ಯೋಚನೆ ಇದ್ದದ್ದೇ ಇಲ್ಲ.

ಎಷ್ಟೊತ್ತಾದರೂ ನಾನು ಹಣ ಸಂಪಾದಿಸಬೇಕು, ಆಸ್ತಿ ಸಂಪಾದಿಸಬೇಕು, ಎಂದು ಅಂದುಕೊಳ್ಳುತ್ತಾ ಅವೆಲ್ಲ ಸಂಪಾದಿಸುತ್ತಾನೆ. ಅಷ್ಟು ಬಿಟ್ಟರೆ, ತನ್ನ ಆತ್ಮದ ಬಗ್ಗೆ ಅಂದರೆ ತನ್ನ ಬಗ್ಗೆ ಅಲ್ಪ ಮಾತ್ರವೂ ಯೋಚಿಸಿರುವುದಿಲ್ಲ. ಏನು ಮಾಡಿರುವುದಿಲ್ಲ. ಅಷ್ಟೇ ಅಲ್ಲದೆ

ಅವನ ಶರೀರದ ಆರೋಗ್ಯಕ್ಕಾಗಿ ತುಂಬಾ ಕಷ್ಟ ಪಟ್ಟಿರುತ್ತಾನೆ. ತುಂಬಾ ಹಣ ಖರ್ಚು ಮಾಡಿರುತ್ತಾನೆ.

ಮತ್ತೆ ಶರೀರದ ಸುಖಕ್ಕೋಸ್ಕರ ಹಣ ಅಂತಸ್ತು ಆಸ್ತಿ ಎಲ್ಲವನ್ನು ಸಂಪಾದಿಸುವುದಕ್ಕೆ ತಪ್ಪುಗಳನ್ನು ಮಾಡಿದ್ದಾನೆ, ಪಾಪಗಳನ್ನು ಮಾಡಿದ್ದಾನೆ, ಮಾಡಬಾರದನ್ನು ಮಾಡಿದ್ದಾನೆ. ಈಗ ಆ ಸಹಾಯಕರು ಏನು ಹೇಳುತ್ತಿದ್ದಾರೆಂದರೆ, ಅಯ್ಯಾ ಈ ಶರೀರವು ನೀನು ಅಲ್ಲ, ಆ ಸಂಪತ್ತು ನಿನ್ನದಲ್ಲ, ಇನ್ನು ಹೊರಡೋಣ ನಡಿ, ಅನ್ನುತ್ತಾರೆ. ಆದರೆ ಹಾಗೆ ನಡಿ ಎಂದರೆ ಹೋಗಿಬಿಡುತ್ತಾನೆಯೇ? ನಾನು ಬರುವುದಿಲ್ಲ, ಎಂದು ಅನ್ನುತ್ತಾನೆ. ಆಗ ಸಹಾಯಕರು ಅವನೊಂದಿಗೆ ಮೂರು ದಿನ ಇಲ್ಲೇ ನಿಲ್ಲು, ಆಗ ಎಲ್ಲವೂ ನಿನಗೆ ಅರ್ಥವಾಗುತ್ತದೆ.

ಅಷ್ಟರಲ್ಲಿ ತನ್ನ ಬಂಧು ಬಳಗದವರು ಕುಟುಂಬದವರು ಆ ಶರೀರಕ್ಕೆ ದಹನದ ಕಾರ್ಯ ಕರ್ಮಗಳನ್ನು ಮಾಡುವ ಪ್ರಯತ್ನ ಮಾಡುತ್ತಾರೆ. ಪಾಡನ್ನು ಕಟ್ಟುತ್ತಾರೆ. ಅವನನ್ನು ಆ ಪಾಡಿನ ಮೇಲೆ ಮಲಗಿಸುತ್ತಾರೆ. ಹಗ್ಗದಿಂದ ಕಟ್ಟುತ್ತಾರೆ. ಹಾರಗಳನ್ನು ಹಾಕುತ್ತಾರೆ. ಅವನಿಗೆ ಇವೆಲ್ಲವೂ ಆಶ್ಚರ್ಯವನ್ನು ಮೂಡಿಸುತ್ತದೆ. ನೆಮ್ಮದಿಯಾಗಿ ಶವವನ್ನು ತೆಗೆದುಕೊಂಡು ಹೋಗುತ್ತಿದ್ದರೆ, ಇವನು ಕೂಡ ಶವದ ಜೊತೆ ಆ ಸ್ಮಶಾನಕ್ಕೆ ಹೋಗುತ್ತಾನೆ. ತುಂಬಾ ಗಾಬರಿಯಾಗುತ್ತಾನೆ. ಏನಿದು? ನನ್ನನ್ನು ತೆಗೆದುಕೊಂಡು ಹೋಗಿಬಿಡುತ್ತಿದ್ದಾರೆ. ಬೇಡ ಬೇಡ ಎಂದು ಕಿರುಚುತ್ತಾನೆ. ಆದರೆ ಯಾರೂ ಅದನ್ನು ಗಮನಿಸುವುದಿಲ್ಲ. ಸ್ಮಶಾನದಲ್ಲಿ ಅವನ ಶರೀರವನ್ನು ಬಸ್ಮ ಮಾಡುತ್ತಿರುತ್ತಾರೆ. ಅವನು ಇನ್ನೂ ಗಾಬರಿಯಾಗುತ್ತಾನೆ. ನನ್ನನ್ನು ಸುಡಬೇಡಿ ಎಂದು ಕಿರುಚುತ್ತಾನೆ. ಆದರೂ ಅವನನ್ನು ಯಾರು ಹಿಡಿಸಿಕೊಳ್ಳುವುದಿಲ್ಲ. ಅವರವರ ಕೆಲಸ ಅವರು ಮಾಡಿಕೊಂಡು ಹೋಗುತ್ತಾರೆ. ಚಿತೆಗೆ ಬೆಂಕಿಯನ್ನು ಅಚ್ಚುತ್ತಾರೆ. ಕೊನೆಗೆ ಶರೀರವು ಬೂದಿಯಾಗುತ್ತದೆ. ಯಾರ ದಾರಿಗೆ ಅವರು ಹೊರಟು ಹೋಗುತ್ತಾರೆ. ಕಡೆಗೆ ಅವನು ಒಬ್ಬನೇ ಅಲ್ಲಿ ಇರುತ್ತಾನೆ. ಇನ್ನು ಏನು ಮಾಡುತ್ತಾನೆ? ಮತ್ತೆ ಮನೆಗೆ ಬರುತ್ತಾನೆ.

ಆಗ ಆ ಸಹಾಯಕರು ಈಗ ನೋಡು ಯಾರು ಇಲ್ಲ, ಏನು ಇಲ್ಲ, ನಿನ್ನ ಶರೀರವು ಕೂಡ ಬೂದಿಯಾಗಿ ಬಿಟ್ಟಿದೆ. ಇನ್ನು ಭೂಮಿಯ ಮೇಲೆ ಯಾರು ನಿನ್ನನ್ನು ಹಿಡಿಸಿಕೊಳ್ಳುವುದಿಲ್ಲ, ಎಂದು ಹೇಳುತ್ತಾರೆ. ಆದರೂ ನಾನು ಬರುವುದಿಲ್ಲ, ಎಂದು ಹೇಳುತ್ತಾನೆ. ಆಗ ಅವರು ಸರಿ ಇನ್ನು ಸ್ವಲ್ಪ ದಿನ ಇರು ಎಂದು ಹೇಳುತ್ತಾರೆ.

ಹಾಗೆ 11 ದಿನಗಳು ನೋಡುತ್ತಾರೆ. ಆಗ ಹತ್ತನೆಯ ದಿನ, 11ನೆಯ ದಿನದ ಕಾರ್ಯಕ್ರಮಗಳು ಕೂಡ ಕಳೆದು ಹೋಗುತ್ತವೆ. ಎಲ್ಲರೂ ಅವರ ಪಾಡಿಗೆ ಅವರು ಹೊರಟು ಹೋಗುತ್ತಾರೆ. ಅವರವರ ಕೆಲಸಗಳಲ್ಲಿ ಇದ್ದುಬಿಡುತ್ತಾರೆ. ಇವನನ್ನು ಯಾರು ನೆನಪಿಸಿಕೊಳ್ಳುವುದಿಲ್ಲ. ಆಗ ಆ ಸಹಾಯಕರು ಮತ್ತೆ ಹೇಳುತ್ತಾರೆ, ಈಗಲಾದರೂ ನಮ್ಮ ಜೊತೆ ಬರುವೆಯಾ? ಅಥವಾ ಬರುವುದಿಲ್ಲವಾ? ಯಾಕೆಂದರೆ ಈ ಸೃಷ್ಟಿಯಲ್ಲಿ ಯಾವ ವಿಷಯದಲ್ಲಾದರೂ, ಯಾವುದೇ ಸಂದರ್ಭದಲ್ಲಿ ಆದರೂ, ಎಲ್ಲಿಯಾದರೂ, ಯಾವುದನ್ನಾದರೂ, ಯಾರ ಮೇಲೆಯೂ, ಬಲವಂತವಾಗಿ ಹೇರುವುದಿಲ್ಲ. ಪ್ರತಿಯೊಬ್ಬರಿಗೂ ಏನೇ ಮಾಡಬೇಕಾದರೂ ಪೂರ್ಣ ಸ್ವತಂತ್ರ ಕೊಡಲ್ಪಡುತ್ತದೆ. ಅದೇ ಈ ಸೃಷ್ಟಿಯಲ್ಲಿರುವ ಶ್ರೇಷ್ಠ ಏರ್ಪಾಟು ಆಗಿರುತ್ತದೆ.

ಆದ್ದರಿಂದ ಆ ಸಹಾಯಕರು ಕೊನೆಗೆ ಇನ್ನೊಂದು ಸಲ ಅವನನ್ನು ಕೇಳುತ್ತಾರೆ. ಆದರೆ ಅವನು ನನ್ನ ಹೆಂಡತಿ, ಮಕ್ಕಳು ಹಾಗೂ ತಾನು ಸಂಪಾದನೆ ಮಾಡಿಕೊಂಡ ಸಂಪತ್ತಿನ ಮೇಲೆ ಮಮಕಾರವಿದ್ದವನಾದರೆ ತಾನು ಬರುವುದಿಲ್ಲವೆಂದು ಹೇಳುತ್ತಾನೆ. ನನಗೆ ಅವರೇ ಮುಖ್ಯ ಅವರು ನೋವು ಪಡುತ್ತಿದ್ದರೆ ಅವರನ್ನು ಬಿಟ್ಟು ನಾನು ಹೇಗೆ ಬರುತ್ತೇನೆ? ನಾನು ಬರುವುದಿಲ್ಲ, ಎಂದು ಹೇಳುತ್ತಾನೆ.

ಆಗ ಅವರು ಹಲವಾರು ರೀತಿಯಲ್ಲಿ ಹೇಳಿ, ಕೇಳಿಸಿಕೊಳ್ಳದೆ ಇದ್ದರೆ ಅವನನ್ನು ಬಿಟ್ಟು ಹೊರಟು ಹೋಗುತ್ತಾರೆ. ಅವರು ಅಲ್ಲಿಂದ ಹೋದ ತಕ್ಷಣ ಅವರು ಭೂಮಿಯ ಮೇಲೆ ಬಂದಾಗ ತೆರೆದುಕೊಂಡಿದ್ದ ಆತ್ಮದ ಬಾಗಿಲುಗಳು ಮುಚ್ಚಲ್ಪಡುತ್ತವೆ. ಆಗ ಅವನೊಬ್ಬನೇ ಅಲ್ಲಿ ಇದ್ದುಬಿಡುತ್ತಾನೆ.

ಕೆಲವರು ಅದರ ಬಗ್ಗೆ ಆಲೋಚನೆ ಮಾಡುವಂಥವರು, ಬೇರೆ ಯಾವುದರ ಮೇಲೆ ಮಮಕಾರವನ್ನು ಅಂದರೆ ವ್ಯಾಮೋಹವನ್ನು ಇಟ್ಟುಕೊಳ್ಳದವರು, ಜ್ಞಾನವನ್ನು ಪಡೆದವರು, ಇಂತಹ ತರಗತಿಗಳಲ್ಲಿ ಪಾಲ್ಗೊಂಡು ಈ ವಿಷಯವನ್ನು ತಿಳಿದುಕೊಂಡವರು, ಆ ಸಹಾಯಕರ ಜೊತೆ ಅಂದರೆ ಆ ದೂತರ ಜೊತೆ ಅವರು ಹೋಗಬೇಕಾದ ಮೇಲಿನ ಲೋಕಗಳಿಗೆ ಹೊರಟು ಹೋಗುತ್ತಾರೆ.

ಆದರೆ ಭೂಮಿಯ ಮೇಲೆ ಇದ್ದುಬಿಟ್ಟವನು, ತನ್ನ ಹೆಂಡತಿ ಇರುವ ಕೊಠಡಿಯೊಳಗೆ ಹೋಗುತ್ತಾನೆ, ಮಕ್ಕಳಿರುವ ಕೊಠಡಿ ಒಳಗೆ ಹೋಗುತ್ತಾನೆ. ಆಸ್ತಿ ಅಂತಸ್ತು ಇದ್ದರೆ ಅಲ್ಲಿಯೂ ಹೋಗಿ ಸ್ವಲ್ಪ ಸಮಯ ಕಳೆದು ಅದನ್ನು ನೋಡಿಕೊಂಡು ಬರುತ್ತಾನೆ. ಅವನ

ಪೂರ್ಣ ದೃಷ್ಟಿ ಅದರ ಮೇಲೆಯೇ ಇರುತ್ತದೆ. ಅಷ್ಟೇ ಹೊರತು ಮೇಲಿನ ಲೋಕಗಳ ಬಗ್ಗೆಯಾಗಲಿ, ಅಲ್ಲಿ ಹೋಗುವ ಬಗ್ಗೆಯಾಗಲಿ ಅವನು ಯೋಚಿಸುವುದಿಲ್ಲ.

ಕಾರಣ ಅವನು ಮೇಲಿನ ಲೋಕಗಳಿಗೆ ಹೋದರೆ ಏನು ನಡೆಯುತ್ತದೆ? ಅಲ್ಲಿ ಏನಿರುತ್ತದೆ? ಅಲ್ಲಿಗೆ ಯಾಕೆ ಹೋಗಬೇಕು? ಹೋದರೆ ಏನು? ಹೋಗದಿದ್ದರೆ ಏನು? ಈ ವಿಷಯಗಳ ಬಗ್ಗೆ ಅವನಿಗೆ ತಿಳಿದಿರುವುದಿಲ್ಲ. ಆದ್ದರಿಂದ ಅಲ್ಲಿಯೇ ಇದ್ದುಬಿಡುತ್ತಾನೆ. ಹಾಗೆ ಇದ್ದುಬಿಟ್ಟ ಆತನನ್ನು ಅಂದರೆ ಆತ್ಮವನ್ನು ಪ್ರೇತಾತ್ಮ ಇಲ್ಲವೇ ದೆವ್ವ ಎಂದು ಅನ್ನುತ್ತಾರೆ. ಹಾಗೆ ಸಾವಿರಾರು ಜನ, ಲಕ್ಷಗಟ್ಟಲೆ ಜನರು ಪ್ರೇತಾತ್ಮಗಳಾಗಿ ಭೂಮಿಯ ಮೇಲೆ ಇದ್ದುಬಿಟ್ಟವರು ಬಹಳಷ್ಟು ಇದ್ದಾರೆ.

ಹಾಗೆ ಭೂಮಿಯ ಮೇಲೆ ಉಳಿದುಕೊಂಡವನು ಅವನ ಹೆಂಡತಿ ಹಾಗೂ ಮಕ್ಕಳನ್ನು ನೋಡಿಕೊಳ್ಳುತ್ತಾ, ಅವನ ಆಸ್ತಿ ಅಂತಸ್ತುಗಳನ್ನು ನೋಡಿಕೊಳ್ಳುತ್ತಾ, ಕೆಲವು ದಿನಗಳನ್ನು ಕಳೆಯುತ್ತಾನೆ. ಇವನನ್ನು ಯಾರು ನೆನಪಿಸಿಕೊಳ್ಳುವುದಿಲ್ಲ, ಯಾರು ಇವನ ಮಾತುಗಳನ್ನು ಕೇಳಿಸಿಕೊಳ್ಳುವುದಿಲ್ಲ. ಅವರವರ ಕೆಲಸಗಳನ್ನು ಮಾಡಿಕೊಳ್ಳುತ್ತಾ ಇದ್ದುಬಿಡುತ್ತಾರೆ.

ಕೊನೆಗೆ ಅವನ ಹೆಂಡತಿ ಕೂಡ ಕೆಲವು ದಿನಗಳ ನಂತರ ಅವನ ಬಗ್ಗೆ ಯೋಚಿಸುವುದಿಲ್ಲ. ಎಷ್ಟು ದಿನ ಅಂತ ಅಳುವುದಕ್ಕೆ ಆಗುತ್ತದೆ? ಎಷ್ಟು ದಿನ ಯೋಚಿಸುತ್ತಾಳೆ? ಅಸಲಿಗೆ ಅವಳು ಹಾಗೆ ಯೋಚಿಸಿದರೂ ಇವನು ಏನು ಮಾಡಲು ಆಗುತ್ತದೆ? ಆಕೆ ಏನು ಮಾಡುತ್ತಾಳೆ?

ಆದ್ದರಿಂದ ಇವನಿಗೆ ಏನು ಅರ್ಥವಾಗುವುದಿಲ್ಲ. ಏನು ಮಾಡಬೇಕು ತಿಳಿಯುವುದಿಲ್ಲ. ಪ್ರಜ್ಞೆ ಹೋಗುತ್ತದೆ. ಸುಮ್ಮನೆ ಆ ಕಡೆ ಈ ಕಡೆ ತಿರುಗಾಡುತ್ತಾನೆ. ಅಲ್ಲಿ ಇಲ್ಲಿ ಬ್ರಿಜ್ಜಿನ ಮೇಲೆ, ಯಾವುದೋ ಮರದ ಮೇಲೆ ಕೂತುಕೊಂಡು, ಸುಮ್ಮನೆ ಎಲ್ಲರನ್ನೂ ನೋಡುತ್ತಾ ಕುಳಿತುಕೊಳ್ಳುವುದನ್ನು ಬಿಟ್ಟರೆ ಏನೂ ಮಾಡುವುದಿಲ್ಲ. ಹಾಗೆ ಉಳಿದುಕೊಂಡುಬಿಟ್ಟ ಆತ್ಮವನ್ನು ಪ್ರೇತಾತ್ಮ ಇಲ್ಲವೇ ದೆವ್ವ ಅನ್ನುತ್ತಾರೆ. ಹಾಗೆ ಅವನು ನೂರಾರು ವರ್ಷಗಳ ಕಾಲ ವ್ಯರ್ಥ ಮಾಡಿಕೊಳ್ಳುತ್ತಾನೆ. ಬದುಕಿದ್ದಾಗ ಜೀವನವನ್ನು ಹೇಗೂ ವ್ಯರ್ಥ ಮಾಡಿಕೊಂಡನು. ಈಗ ಸತ್ತ ಮೇಲೆಯೂ ಕೂಡ ವ್ಯರ್ಥ ಮಾಡಿಕೊಳ್ಳುತ್ತಿದ್ದಾನೆ.

ಕಾರಣವೇನೆಂದರೆ ಅವನಿಗೆ ಅಲ್ಪ ಮಾತ್ರವೂ ಜ್ಞಾನವಿರುವುದಿಲ್ಲ. ಅಂದರೆ ಅಜ್ಞಾನವೇ ಇದಕ್ಕೆಲ್ಲ ಕಾರಣ. ಯಾಕೆಂದರೆ ಬದುಕಿದ್ದಾಗ ಬರಿ ಹಣ ಸಂಪಾದನೆ, ಸಂಪತ್ತು, ಸಂಸಾರ ಸುಖ ಎಂದು ಇರುವ ಕಾಲವನ್ನೆಲ್ಲ ವ್ಯರ್ಥ ಮಾಡಿಕೊಂಡು, ತಾನು ಒಂದು ಆತ್ಮವೆಂಬ ಸಂಗತಿಯನ್ನು ತಿಳಿದುಕೊಂಡಿರುವುದಿಲ್ಲ. ಆತ್ಮಕ್ಕೆ ಲಾಭವನ್ನು ತಂದು ಕೊಡುವ ಕೆಲಸಗಳನ್ನು ಮಾಡಲಿಲ್ಲ. ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಲಿಲ್ಲ. ಯಾರಾದರೂ ಹೇಳಿದರು ಕೇಳಿಸಿಕೊಳ್ಳಲಿಲ್ಲ. ಎಷ್ಟೊತ್ತು ದೇಹಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟನು. ಹೀಗೆ ಜೀವನವನ್ನು ವ್ಯರ್ಥ ಮಾಡಿಕೊಂಡನು.

ಆದ್ದರಿಂದ ಪತ್ರಿಯವರು ಮರಣಿಸುವ ಮೊದಲೇ ಮರಣ ಹೊಂದಬೇಕು ಎಂದು ಹೇಳಿದ್ದಾರೆ. ಏಕೆಂದರೆ ನಿನ್ನ ಜೀವನ ವ್ಯರ್ಥವಾಗಬಾರದೆಂದು ಅವರು ಯಾವಾಗಲೂ ಸಮಯವನ್ನು ವ್ಯರ್ಥ ಮಾಡಬೇಡಿ, ಎಂದು ಹೇಳುತ್ತಿದ್ದರು. ಅನವಶ್ಯಕವಾದ ವಿಷಯಗಳಿಗೆ ನಿಮ್ಮ ಸಮಯವನ್ನು ಉಪಯೋಗಿಸಬೇಡಿ. ಆತ್ಮಕ್ಕೆ ಸಂಬಂಧಪಟ್ಟವುಗಳಿಗೋಸ್ಕರ, ಯಾವ ಕೆಲಸವನ್ನಾದರೂ ಮಾಡಿ ಅನ್ನುತ್ತಿದ್ದರು. ಹಾಗೆ ಮಾಡಿದಾಗ ನಿಮ್ಮ ಸಮಯವೂ ವ್ಯರ್ಥವಾಗುವುದಿಲ್ಲ ಎಂದು ಹೇಳುತ್ತಿದ್ದರು.

ಆದ್ದರಿಂದ ಆತ್ಮಗಳಾಗಿರುವ ನಾವು ಬದುಕಿದ್ದಾಗ ಸಮಯವನ್ನು ವ್ಯರ್ಥ ಮಾಡಬಾರದು. ಅಷ್ಟೇ ಅಲ್ಲದೆ ಶರೀರವನ್ನು ಬಿಟ್ಟು ಬಿಟ್ಟ ಮೇಲೆ ಅಂದರೆ, ಸತ್ತ ಮೇಲೆ ಕೂಡ ನಮ್ಮ ಸಮಯವು ವ್ಯರ್ಥವಾಗಬಾರದು. ಮತ್ತೆ ಮರಣಿಸಿದ ನಂತರ ಸಮಯವು ವ್ಯರ್ಥವಾಗಬಾರದು ಎಂದರೆ ಮೇಲಿನ ಲೋಕಗಳಿಂದ ನಮ್ಮನ್ನು ಕರೆದುಕೊಂಡು ಹೋಗಲು ಬಂದಿರುವ ಸಹಾಯಕರ ಜೊತೆ ಹೊರಟು ಹೋಗಬೇಕು. ನಂತರ ಏನು ಮಾಡಬೇಕು? ಅದಕ್ಕೋಸ್ಕರ ಸಿದ್ಧವಾಗಬೇಕು. ಅಂದರೆ ಭೂಮಿಯ ಮೇಲೆ ಮತ್ತೆ ಹೊಸ ಶರೀರವನ್ನು ತೆಗೆದುಕೊಂಡು, ಹೊಸ ಅನುಭವಗಳು, ಹೊಸ ಪಾಠಗಳನ್ನು ಕಲಿತುಕೊಳ್ಳಬೇಕು. ಹಾಗೆ ಆತ್ಮ ಎಂದರೆ ನಮ್ಮ ಉನ್ನತಿಗೋಸ್ಕರ ಪ್ರಯತ್ನಿಸಬೇಕು.

ಅದು ಯಾಕೆಂದರೆ ಜೀವನವೆಂಬುದು ಕೆಲವೊಂದು ಪಾಠಗಳನ್ನು ಕಲಿತುಕೊಳ್ಳುವುದಕ್ಕಾಗಿಯೇ ಇದೆ. ಅದರ ಮೂಲಕ ನಾವು ಅಂದರೆ ಆತ್ಮದ ಉನ್ನತಿ ಗೋಸ್ಕರವೇ ಇದ್ದೇವೆ. ಆದ್ದರಿಂದ ಸೃಷ್ಟಿಯಲ್ಲಿ ಈ ಎಲ್ಲಾ ಏರ್ಪಾಟುಗಳು ಅಂದರೆ ಹುಟ್ಟುವುದು, ಅನುಭವಗಳ ಮೂಲಕ ಪಾಠಗಳನ್ನು ಕಲಿತುಕೊಳ್ಳುವುದು, ಮತ್ತೆ ಮರಣಿಸುವುದು, ಮತ್ತೆ ಹುಟ್ಟುವುದು, ಹೀಗೆ ಇದು ಸೃಷ್ಟಿಯಲ್ಲಿ ಸಹಜವಾಗಿ

ನಡೆಯುತ್ತದೆ. ಇದು ಕೇವಲ ಆತ್ಮ ಜ್ಞಾನಿಗೆ ಅರ್ಥವಾಗುತ್ತದೆ. ಹೀಗೆ ಹುಟ್ಟುವುದು, ಮರಣ ಹೊಂದುವುದು, ಎಂಬ ವಿಷಯದ ಬಗ್ಗೆ ಭಗವದ್ಗೀತೆಯಲ್ಲಿ ಕೂಡ ಹೇಳಲ್ಪಟ್ಟಿದೆ.

ಶ್ಲೋ : ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।

ತಸ್ಮಾದಪರಿಹಾರ್ಯೇರ್ಥೇ ನ ತ್ವಂ ಶೋಚಿತುಮರ್ಹಸಿ । (ಭ.ಗೀ  2. 27)

ತಾ:– ಹುಟ್ಟು–ಸಾವು, ಸುಖ–ದುಃಖ, ಒಂದು ನಾಣ್ಯದ ಎರಡು ಮುಖವಿದ್ದಂತೆ. ರಾತ್ರಿ ಇಲ್ಲದೆ ಹಗಲಿಲ್ಲ. ಹುಟ್ಟಿದ ಮೇಲೆ ಸಾವು ಕಟ್ಟಿಟ್ಟ ಬುತ್ತಿ. ನಾವು ಜೀವನದಲ್ಲಿ ಅನಿವಾರ್ಯವಾದದ್ದನ್ನು ಹೊಂದಿಸಿಕೊಳ್ಳುವುದನ್ನು ಕಲಿಯಬೇಕು. ಅದನ್ನು ಬಿಟ್ಟು ಕಷ್ಟ ಬಂದಾಗ ಕೊರಗುವುದು ತರವಲ್ಲ. ಅನಿವಾರ್ಯವಾದ ಕರ್ತವ್ಯ ಪಾಲನೆಯಲ್ಲಿ ನಾವು ಎಂದೂ ದುಃಖಿಸಬಾರದು.

ಶ್ಲೋ: ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ।

ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ॥ (ಭ.ಗೀ  2. 22)

ತಾ:–ಮನುಷ್ಯ ಹಳೆಯ ಬಟ್ಟೆಬರೆಗಳನ್ನು ತೆಗೆದಿಟ್ಟು ಹೇಗೆ ಹೊಸಬಟ್ಟೆ ಉಡುತ್ತಾನೋ? ಹಾಗೇ–ಜೀವ ಒಂದು ದೇಹವನ್ನು ಬಿಟ್ಟು ಬೇರೆ ಹೊಸ ದೇಹವನ್ನು ಪಡೆದುಕೊಳ್ಳುತ್ತದೆ.

ಇದೇ ಅಲ್ಲವೇ ನಮಗೆ ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿರುವುದು. ಆದ್ದರಿಂದ ಶರೀರವು ಹೋಗಿದೆ ಎಂದು ನೋವು ಪಡಬಾರದು, ಅಳಬಾರದು, ಕಾರಣ ಇನ್ನೊಂದು ಹೊಸ ಶರೀರವು ನಮಗೆ ಬರುತ್ತದೆ. ಇದೆಲ್ಲ ಆತ್ಮಜ್ಞಾನಿಗೆ ತಿಳಿಯುತ್ತದೆ.

ಆದ್ದರಿಂದಲೇ ಯಾರಾದರೂ ಸತ್ತು ಹೋದಾಗ ಅಳುತ್ತಾ ಇದ್ದರೆ, ಪತ್ರಿಯವರು ಆ ವಿಷಯವನ್ನೇ ಹೇಳುತ್ತಿದ್ದರು. ಈ ಶ್ಲೋಕವನ್ನೇ ಹೇಳುತ್ತಿದ್ದರು. ಅನ್ನಮಚಾರ್ಯರ ನಾನಾಟಿ ಬದುಕು ನಾಟಕಮು ಎಂಬ ಹಾಡನ್ನು ಹಾಡುತ್ತಿದ್ದರು. ಆತ್ಮ ಜ್ಞಾನಿಗಳು ಏನು ಹೇಳುತ್ತಾರೆಂದರೆ, ಹೊಸ ವಸ್ತ್ರವನ್ನು ಧರಿಸುವಾಗ ಹಳೆಯದನ್ನು ಬಿಡುವುದಕ್ಕೆ ಯಾಕೆ ನೋವು ಪಡುತ್ತಿಯಾ? ಇದಕ್ಕಿಂತ ಚೆನ್ನಾಗಿರುವುದು ಬರುತ್ತದೆಯಲ್ಲವೇ? ಇದನ್ನು ಬಿಟ್ಟುಬಿಡಲು ಯಾಕೆ ನೀನು ನೋವು ಪಡುತ್ತಿರುವೆ? ಅನ್ನುತ್ತಾರೆ.

ಸತ್ತವನ ಹೆಂಡತಿ ಏನು ಅಂದುಕೊಳ್ಳುತ್ತಾಳೆಂದರೆ, ನನ್ನ ಜೀವನ ಹೀಗಾಯಿತು. ಇನ್ನು ಯಾಕೆ ನನಗೆ ಈ ಜೀವನ? ಎಂದು ಅಂದುಕೊಳ್ಳುತ್ತಾಳೆ. ಅವಳ ಉದ್ದೇಶ ತಾನು ಇಲ್ಲಿ ಶಾಶ್ವತವಾಗಿ ಇರುತ್ತೇನೆ ಅನ್ನುವ ಹಾಗೆ. ಅವನು ಹೋದ ಎಂದು ನೋವು ಪಡುತ್ತಾಳೆ. ಅಸಲಿಗೆ ಇವಳು ಮಾತ್ರ ಇರುತ್ತಾಳೆಯೇ? ಇವಳು ಕೂಡ ಹೋಗಬೇಕಾಗಿರುವುದೇ, ಎಂಬ ವಿಷಯವನ್ನು ತಿಳಿದುಕೊಳ್ಳುವುದಿಲ್ಲ. ಯಾರೇ ಆದರೂ ಇಂದೇ ಮುಂದೆ ಹೋಗಬೇಕಾಗಿರುವುದೇ.

ಮರಣಿಸಿದವರು ಭೂಮಿಯ ಮೇಲೆ ಭೂತಗಳಾಗಿ (ದೆವ್ವ) ಯಾಕೆ ಇದ್ದುಬಿಡುತ್ತಾರೆ?

ಅಷ್ಟೇ ಅಲ್ಲದೆ ಮರಣಿಸಿದವರು ಮೇಲಿನ ಲೋಕಗಳಿಗೆ ಹೋಗದೆ ಭೂಮಿಯ ಮೇಲೆ ಪ್ರೇತಾತ್ಮಗಳಾಗಿ, ಅಂದರೆ ದೆವ್ವಗಳಾಗಿ ಯಾಕೆ ಇದ್ದುಬಿಡುತ್ತಾರೆ? ಅದಕ್ಕೆ ಕಾರಣವೇನು? ಭೂಮಿ ಮೇಲೆನೆ ಯಾಕೆ ಇರುತ್ತಾರೆ? ಅನ್ನುವುದಕ್ಕೆ ಕಾರಣಗಳನ್ನು ತಿಳಿದುಕೊಳ್ಳೋಣ.

ಅವುಗಳನ್ನು ತಿಳಿದುಕೊಂಡರೆ ನೀವು ಕೂಡ ನಿಮ್ಮ ಜೀವನವನ್ನು ಸರಿ ಮಾಡಿಕೊಳ್ಳಲು ಅವಕಾಶವಿರುತ್ತದೆ. ಇಲ್ಲವಾದರೆ ನೀವು ನಷ್ಟ ಹೊಂದುವಿರಿ. ಆದ್ದರಿಂದ ಮೇಲಿನ ಲೋಕಗಳಿಗೆ ಹೋಗದೆ ಪ್ರೇತಾತ್ಮಗಳಾಗಿ ಇದ್ದು ಬಿಡಲು ಕಾರಣಗಳನ್ನು ತಿಳಿದುಕೊಳ್ಳೋಣ.

1. ಮುಖ್ಯವಾಗಿ ಹೆಂಡತಿ ಮಕ್ಕಳು ಕುಟುಂಬ ಸದಸ್ಯರ ಮೇಲೆ ಇರುವಂತಹ ವಿಪರೀತವಾದ ಮಮಕಾರ ಅಥವಾ ವ್ಯಾಮೋಹ.

2. ಸತ್ತ ಮೇಲೆ ಎಲ್ಲರೂ ದುಃಖದಿಂದ ನೋವಿನಿಂದ ಅಳುತ್ತಿದ್ದರೆ, ಇವನು ಅವರನ್ನು ಬಿಡುವುದಕ್ಕಾಗುವುದಿಲ್ಲ, ಏನೆಂದುಕೊಳ್ಳುತ್ತಾನೆಂದರೆ ಅವರು ನನಗೋಸ್ಕರ ಎಷ್ಟು ನೋವು ಪಡುತ್ತಿದ್ದಾರೆ. ಅವರನ್ನು ಬಿಟ್ಟು ಬಿಟ್ಟು ಹೇಗೆ ಹೊರಟು ಹೋಗಲಿ? ಎಂದು ಅವರನ್ನು ಸಮಾಧಾನ ಪಡಿಸುವುದಕ್ಕೋಸ್ಕರ ಅಲ್ಲಿಯೇ ಇದ್ದುಬಿಡುತ್ತಾನೆ.

ಮೇಲಿನ ಲೋಕಗಳಿಂದ ಬಂದ ಸಹಾಯಕರು ಎಷ್ಟೇ ಹೇಳಿದರೂ, ಏನೇ ಬೋಧನೆ ಮಾಡಿದರೂ, ಅರ್ಥಮಾಡಿಕೊಳ್ಳುವುದಿಲ್ಲ. ಗಟ್ಟಿಯಾಗಿ ನಾನು ಬರುವುದಿಲ್ಲ ಎಂದು ಅಲ್ಲೇ ಉಳಿದುಕೊಳ್ಳುತ್ತಾನೆ.

ಅದಕ್ಕಾಗಿ ದೊಡ್ಡವರು ಯಾರಾದರೂ ಸತ್ತು ಹೋದಾಗ ಅಳಬಾರದು ಎಂದು ಹೇಳುತ್ತಾರೆ. ಸಹಜವಾಗಿ ಯಾರಿಗಾದರೂ, ಎಂತಹವರಿಗಾದರೂ, ನೋವು ಇರುತ್ತದೆ ಅಳು ಬರುತ್ತದೆ. ಆದ್ದರಿಂದ ಪತ್ರಿಯವರು ಏನು ಹೇಳುತ್ತಾರೆಂದರೆ, ಸ್ವಲ್ಪ ಸಮಯ ಅಳುವುದಾದರೆ ಅತ್ತುಬಿಡಿ. ನಿಮ್ಮಲ್ಲಿ ಇರುವ ಭಾವನೆಗಳನ್ನು ವ್ಯಕ್ತಪಡಿಸಿ ತಪ್ಪು ಇಲ್ಲ. ಆದರೆ ಹಾಗೆಯೇ ಅಳುತ್ತಾ ಕುಳಿತುಕೊಳ್ಳುವುದು ಸರಿಯಲ್ಲ, ಎಂದು ಹೇಳುತ್ತಿದ್ದರು. ಎಲ್ಲರೂ ಹಾಗೆ ಅಳುತ್ತಿದ್ದರೆ, ಸತ್ತವನು ಅವರನ್ನೆಲ್ಲ ಬಿಟ್ಟು ಮೇಲಿನ ಲೋಕಗಳಿಗೆ ಹೋಗಲಿಕ್ಕಾಗದು. ಪ್ರೇತಾತ್ಮನಾಗಿ ಇಲ್ಲಿಯೇ ಇದ್ದುಬಿಡುತ್ತಾನೆ. ಅಂದರೆ ಹತ್ತಿರದವರು ತುಂಬಾ ಅಳುತ್ತಿದ್ದರೆ ಅವರೇ ಆತನನ್ನು ಪ್ರೇತಾತ್ಮನನ್ನಾಗಿ ಮಾಡಿದವರಾಗುತ್ತಾರೆ. ಅವನಿಗೆ ಸಾಕಷ್ಟು ನಷ್ಟವನ್ನು ತಂದುಕೊಡುತ್ತಾರೆ. ಒಂದು ವೇಳೆ ಅವರು ಅಳದೆ ಇದ್ದರೆ, ಅವನು ಖಂಡಿತವಾಗಿ ಸಹಾಯಕರ ಜೊತೆ ಮೇಲಿನ ಲೋಕಗಳಿಗೆ ಹೊರಟು ಹೋಗುತ್ತಾನೆ. ಆದ್ದರಿಂದ ಇದ್ದವರು ಅಳಬಾರದೆಂದು ತಿಳಿದುಕೊಳ್ಳಬೇಕು.

ಆದ್ದರಿಂದ ಸ್ವಲ್ಪ ಮಾತ್ರವಾದರೂ ಜ್ಞಾನವಿದ್ದವರು ಇದನ್ನು ಅರ್ಥ ಮಾಡಿಕೊಳ್ಳುತ್ತಾರೆ. ಇನ್ನು ನಾನು ಅಳುತ್ತಾ ಅವನನ್ನು ದುಃಖಿಸುವುದಿಲ್ಲ. ಎಷ್ಟು ಅತ್ತರೆ ಅವನು ಅಷ್ಟು ನೋವು ಪಡುತ್ತಾನೆ. ಮೇಲಿನ ಲೋಕಗಳಿಗೆ ಹೋಗುವುದಿಲ್ಲ. ಆದ್ದರಿಂದ ತಿಳಿದುಕೊಳ್ಳಿ. ಸತ್ತು ಹೋದವನನ್ನು ಪ್ರೇತಾತ್ಮನನ್ನಾಗಿ ಅಂದರೆ ದೆವ್ವವನ್ನಾಗಿ ಮಾಡಬೇಕೆಂದಾದರೆ ನೀವು ಅಳುವುದನ್ನು ಮುಂದುವರಿಸಿ. ಇಲ್ಲವೇ ಸತ್ತವನು ಆರಾಮಾಗಿ ಹೋಗಬೇಕಾದ ಲೋಕಗಳಿಗೆ ಹೋಗಿ ತನ್ನ ಕೆಲಸಗಳನ್ನು ತಾನು ಮಾಡಿಕೊಳ್ಳಬೇಕಾದರೆ ಅಳುವುದನ್ನು ನಿಲ್ಲಿಸಿ.

ಅದಕ್ಕೆ ಜ್ಞಾನವುಳ್ಳವನು ಅಂದರೆ ನಾನು ದೇಹವಲ್ಲ ಆತ್ಮ ಎಂದು ತಿಳಿದುಕೊಂಡವನು, ಯಾರಿಗೆ ಆಗಲಿ, ಸಾವು ಇಲ್ಲ ಎಂದು ತಿಳಿದುಕೊಂಡವನು, ಅಳುವುದಿಲ್ಲ. ಅಳಬಾರದು ಎಂದು ಕೂಡ ಹೇಳುತ್ತಾನೆ.

3. ಅಷ್ಟೇ ಅಲ್ಲ ತಾನು ಸಂಪಾದಿಸಿಕೊಂಡ ಆಸ್ತಿ ಅಂತಸ್ತು ಸಂಪತ್ತು ಅಪಾರವಾದ ಹಣ ಬಂಗಾರ ಇಂತಹವುಗಳನ್ನೆಲ್ಲ ಕೂಡಿಟ್ಟು ಕೂಡಿಟ್ಟು ಜೀವನದಲ್ಲಿ ಕಷ್ಟಪಟ್ಟು ಈಗ ಎಲ್ಲವನ್ನು ಬಿಟ್ಟು ಹೋಗುವುದೆಂದರೆ ಎಷ್ಟು ನೋವಾಗುತ್ತದೆ? ಹೇಳಿ. ಜೀವಂತವಾಗಿ ಇದ್ದಾಗ ಮಾಡಬಾರದ ಕೆಲಸಗಳನ್ನು ಮಾಡಿ, ತಪ್ಪುಗಳನ್ನು ಮಾಡಿ ಪಾಪಗಳನ್ನು ಮಾಡಿ, ಅಧರ್ಮದಿಂದ ಸಂಪಾದಿಸಿದ್ದಾನೆ. ಈಗ ಅವನು ಬಿಟ್ಟುಬಿಡಬೇಕೆಂದರೆ ಹೇಗೆ ಬಿಡುತ್ತಾನೆ?

ನೋಡಿ ಕೆಲವರು ದೊಡ್ಡ ದೊಡ್ಡ ಕೋಟ್ಯಾಧಿಪತಿಗಳು ಇದ್ದಾರೆ. ಅವರು ತಮ್ಮ ಬಾತ್ರೂಮ್ ಗಳಲ್ಲೂ ಕೂಡ ಬಂಗಾರದಿಂದ ಮಾಡಿಸಿದ ವಸ್ತುಗಳಿರುತ್ತವೆ. ಅಷ್ಟು ಲಗ್ಜರಿ ಲೈಫ್ ಲೀಡ್ ಮಾಡಿದವರು ಅದನ್ನು ಬಿಟ್ಟುಬಿಡಬೇಕೆಂದರೆ ಹೇಗೆ ಬಿಡುತ್ತಾರೆ? ಅವುಗಳನ್ನೆಲ್ಲ ಬಿಟ್ಟು ಮೇಲಿನ ಲೋಕಗಳಿಗೆ ಹೋಗಲಾಗದೆ ಪ್ರೇತಾತ್ಮರಾಗಿ ಭೂಮಿಯ ಮೇಲೆಯೇ ಇದ್ದುಬಿಡುತ್ತಾರೆ.

ಆದ್ದರಿಂದ ಪ್ರೇತಾತ್ಮಗಳು ಆಗಬಾರದೆಂದರೆ ನಮ್ಮ ಜೊತೆ ಬಾರದವುಗಳ ಸಂಪಾದನೆ ಮಾಡಬಾರದು. ನಮ್ಮ ಕೂಡ ಬರುವ ಜ್ಞಾನವನ್ನು ಸಂಪಾದಿಸಬೇಕು. ಆಸ್ತಿಪಾಸ್ತಿ ಎಂಬುದು ನಮ್ಮ ಅವಶ್ಯಕತೆಗಳನ್ನು ಪೂರೈಸುತ್ತವೆಯೇ? ಇಲ್ಲವೇ? ಎಂಬುದನ್ನು ನೋಡಿಕೊಳ್ಳಬೇಕು. ಅಷ್ಟೇ ಅಲ್ಲದೆ ಅವಶ್ಯಕತೆಗೆ ಮೀರಿ ಅಧಿಕವಾಗಿ ಸಂಪಾದನೆ ಮಾಡುವ ಅವಶ್ಯಕತೆ ಇಲ್ಲ. ಆದ್ದರಿಂದ ಅವುಗಳ ಮೇಲೆ ವ್ಯಾಮೋಹವನ್ನು ಬೆಳೆಸಿಕೊಳ್ಳಬಾರದು. ಮಮಕಾರವನ್ನು ಇಟ್ಟುಕೊಳ್ಳಬಾರದು.

ಒಂದು ವೇಳೆ ನಿಮ್ಮ ಅವಶ್ಯಕತೆಗೆ ಮೀರಿ ನಿಮ್ಮ ಹತ್ತಿರ ಸಂಪತ್ತು ಇದೆ, ಎಂದಾದರೆ ಅದನ್ನು ಮೇಲಿನ ಲೋಕಗಳಲ್ಲಿ ಅಂದರೆ ನಿಮ್ಮ ಆತ್ಮಕ್ಕೆ ಸಿಗುವ ಆತ್ಮ ಸೇವೆಗೆ ಉಪಯೋಗಿಸಿಕೊಳ್ಳಿ. ಶರೀರವನ್ನು ಬಿಟ್ಟ ನಂತರ ಆ ಸೇವೆಗಳು ನಿಮಗೆ ಸಾಕಷ್ಟು ಲಾಭವನ್ನು ತಂದುಕೊಡುತ್ತವೆ.

ಅಷ್ಟೇ ಅಲ್ಲದೆ ಈ ಭೂಮಿ ಮೇಲೆ ಪ್ರೇತಾತ್ಮಗಳಾಗಿ ಇದ್ದು ಬಿಡಲು ಇನ್ನಷ್ಟು ಕಾರಣಗಳನ್ನು ತಿಳಿದುಕೊಳ್ಳೋಣ.

4. ಯಾರಾದರೂ ತಾವು ಮಾಡಬೇಕಾದ ಕೆಲಸಗಳನ್ನು ಮಧ್ಯದಲ್ಲಿಯೇ ಬಿಟ್ಟು ಸತ್ತು ಹೋಗುತ್ತಾರೋ, ಅಂದರೆ ಯಾವುದನ್ನೋ ಕಟ್ಟುತ್ತಿರುತ್ತಾರೆ. ಏನನ್ನೋ ಮಾಡುತ್ತಿರುತ್ತಾರೆ. ಇನ್ನೇನ್ನೋ ಪ್ಲಾನ್ ಮಾಡುತ್ತಿರುತ್ತಾರೆ. ಇವನು ಯಾವಾಗಲಾದರೆ ಸ್ವಲ್ಪ ಕೆಲಸವನ್ನು ಮಾಡಿ ಸತ್ತು ಹೋಗುತ್ತಾನೋ ಆ ಕೆಲಸಗಳು ಮಧ್ಯದಲ್ಲಿಯೇ ನಿಂತು ಹೋಗಿರುವುದರಿಂದ ಆ ಕೆಲಸದ ಮೇಲೆಯೇ ದೃಷ್ಟಿ ಇರುತ್ತದೆ. ಆದ್ದರಿಂದ ಮೇಲಕ್ಕೆ ಹೋಗಲಾರರು. ದೃಷ್ಟಿ ಎಲ್ಲಾ ಅವುಗಳ ಮೇಲೆಯೇ ಇರುತ್ತದೆ ಆದ್ದರಿಂದ ಸಹಾಯಕರು ಎಷ್ಟು ಹೇಳಿದರು ಇವರು ಕೇಳಿಸಿಕೊಳ್ಳುವುದಿಲ್ಲ. ಭೂಮಿ ಮೇಲೆಯೇ ಇದ್ದುಬಿಡುತ್ತಾರೆ. ಹಾಗೆಯೇ ಪ್ರೇತಾತ್ಮಗಳಾಗಿ ಮಾರ್ಪಾಡಾಗುತ್ತಾರೆ.

5. ಹಾಗೆಯೇ ಬದುಕಿದ್ದಾಗ ಅತ್ಯಂತ ನೋವಿನಿಂದ ಜೀವಿಸಿದವರು, ಯಾವಾಗಲೂ ದುಃಖದಿಂದ ನಮ್ಮವರ ಜೀವನ ಯಾಕೆ ಹೀಗೆ ಆಯಿತು? ನನ್ನ ಜೀವನ ಯಾಕೆ ಹೀಗಾಯಿತು? ಅಂದುಕೊಳ್ಳುತ್ತಾ ಜೀವನವೆಲ್ಲ ಸಮಸ್ಯೆಗಳಿಂದಲೇ ಇದ್ದು, ಅತ್ಯಂತ ದುಃಖದಿಂದ ಯಾರು ಭೂಮಿಯ ಮೇಲೆ ಜೀವನವನ್ನು ನಡೆಸುತ್ತಿರುತ್ತಾರೋ? ಅವರು ಕೂಡ ಮೇಲಿನ ಲೋಕಗಳಿಗೆ ಹೋಗಲಿಕ್ಕಾಗದು. ಅವರು ಪ್ರೇತಾತ್ಮರಾಗಿ ಬದಲಾಗುತ್ತಾರೆ.

6. ಹಾಗೆಯೇ ಯಾರು ಸಡನ್ನಾಗಿ ಆಕ್ಸಿಡೆಂಟ್ ಗಾಯಗಳಿಂದ ಮರಣಿಸುತ್ತಾರೋ ಅಥವಾ ಯಾರಿಂದಲಾದರೂ ಹತ್ಯೆಗೋಳಪಟ್ಟಾಗ ಮೇಲಿನ ಲೋಕಗಳಿಗೆ ಹೋಗುವುದಿಲ್ಲ. ಕಾರಣ ಹತ್ಯೆಮಾಡಿದವನ ವಿರುದ್ಧ ದ್ವೇಷವನ್ನು ಸಾಧಿಸುತ್ತಾನೆ. ಅದನ್ನು ತೀರಿಸಿಕೊಳ್ಳಲು ಭೂಮಿಯ ಮೇಲೆ ಪ್ರೇತಾತ್ಮನಾಗಿ ಇದ್ದುಬಿಡುತ್ತಾನೆ.

ಇವೆಲ್ಲವೂ ಕೂಡ ಪ್ರೇತಾತ್ಮಗಳಾಗಿ ಬದಲಾವಣೆಯಾಗುವುದಕ್ಕೆ ಕಾರಣಗಳು ನೆನಪಿಟ್ಟುಕೊಳ್ಳಿ. ನೀವು ಜ್ಞಾನವನ್ನು ಸಂಪಾದಿಸಿಕೊಂಡು ನಿಮ್ಮ ನೀವೇ ಸರಿ ಮಾಡಿಕೊಂಡರೆ ನೀವು ಅದ್ಭುತವಾಗಿ ಮೇಲಿನ ಲೋಕಗಳಿಗೆ ಹೊರಟು ಹೋಗುತ್ತೀರಿ. ನಿಮಗೆ ಸಮಯ ಕೂಡಿ ಬರುತ್ತದೆ. ನೀವು ನಂತರದ ಜೀವನಕ್ಕಾಗಿ ಪ್ಲಾನ್ ಮಾಡಿಕೊಂಡು ಮತ್ತೊಂದು ಜನ್ಮವನ್ನು ತೆಗೆದುಕೊಂಡು ಇನ್ನೆಷ್ಟು ಸಾಧಿಸುವುದಕ್ಕೋಸ್ಕರ ಪ್ರಯತ್ನ ಮಾಡುತ್ತೀರಿ.

ಒಂದನ್ನು ನೆನಪಿಟ್ಟುಕೊಳ್ಳಿ ಏನೇ ಆದರೂ ಕೂಡ ಸತ್ತವರಿಗೆ ಅಂದರೆ ಆತ್ಮಕ್ಕೆ ಹನ್ನೊಂದು ದಿನಗಳ ಕಾಲಾವಕಾಶ ಇರುತ್ತದೆ ಅಷ್ಟರೊಳಗೆ ಅವನು ನಿರ್ಣಯಿಸಿಕೊಂಡು ಸಹಾಯಕರ ಜೊತೆ ಮೇಲಿನ ಲೋಕಗಳಿಗೆ ಹೊರಟು ಹೋಗಬೇಕು. ಇಲ್ಲವಾದರೆ 11 ದಿನಗಳ ನಂತರ ಸಹಾಯಕರು ಹೊರಟು ಹೋಗುತ್ತಾರೆ. ಅಷ್ಟೇ ಅಲ್ಲ ಸತ್ತವನನ್ನು ಕರೆದುಕೊಂಡು ಹೋಗಲು ತೆರೆದುಕೊಂಡ ಆತ್ಮದ ದ್ವಾರಗಳು ಕೂಡ ಮುಚ್ಚಲ್ಪಡುತ್ತವೆ. ಒಂದು ವೇಳೆ ಹಾಗೆ ನಡೆದರೆ ಸತ್ತವನ ಪರಿಸ್ಥಿತಿ ಮತ್ತಷ್ಟು ಹೀನಾಯವಾಗುತ್ತದೆ.

ಯಾಕೆಂದರೆ ಆತ್ಮ ಮೇಲೀನ ಲೋಕಗಳಿಗೆ ಹೋಗಲಿಕ್ಕಾಗದು. ಮತ್ತೆ ಇನ್ನೊಂದು ಜನ್ಮವನ್ನು ತೆಗೆದುಕೊಳ್ಳಲು ಆಗದು. ಅಂದರೆ ಪ್ರೇತಾತ್ಮನಾಗಿಯೇ ಅಂದರೆ ದೆವ್ವವಾಗಿ ಭೂಮಿ ಮೇಲೆ ಸಂಚರಿಸಲ್ಪಡುತ್ತದೆ. ಹಾಗೆ ನೂರಾರು ವರ್ಷಗಳ ಕಾಲ ಏನು ಮಾಡುವುದಕ್ಕಾಗದೆ ವ್ಯರ್ಥವಾಗಿ ಬಿಡುತ್ತದೆ.

ಅದಕ್ಕಾಗಿ ಪತ್ರಿಯವರು ಒಂದು ಸಂದರ್ಭದಲ್ಲಿ ಹೀಗೆ ಹೇಳಿದರು. ನಿಮಗೆ ಮೂರನೇ ಕಣ್ಣು ಇರುವುದಾದರೆ ವಿಜಯವಾಡ ಬ್ಯಾರೇಜ್ ಮೇಲೆ ಆಗಲಿ, ದೊಡ್ಡ ದೊಡ್ಡ ಅಣೆಕಟ್ಟುಗಳ ಮೇಲೆಯಾಗಲಿ ಆ ಪ್ರೇತಾತ್ಮಗಳು ಸರದಿ ಸಾಲಿನಲ್ಲಿ ಕುಳಿತುಕೊಂಡಿರುವುದನ್ನು ನೀವು ಚೆನ್ನಾಗಿ ಗಮನಿಸಬಹುದು. ಅಂದರೆ ಎಷ್ಟು ಜನ ಪ್ರೇತಾತ್ಮಗಳಾಗಿ ಬದಲಾಗುತ್ತಿದ್ದಾರೋ ತಿಳಿದುಕೊಳ್ಳಿ. ಮತ್ತೆ ಅವು ಏನು ಮಾಡುತ್ತವೆ? ನೋಡಿಕೊಂಡು ಕುಳಿತಿರುವುದನ್ನು ಬಿಟ್ಟರೆ. ಅದಕ್ಕಾಗಿ ಪತ್ರಿಯವರು ಹೀಗೂ ಹೇಳುತ್ತಾರೆ ಹಾಗೆ ನಾವು ಪ್ರೇತಾತ್ಮಗಳು ಆಗದೆ ಪ್ರಶಾಂತವಾಗಿ ಸಹಾಯಕರ ಜೊತೆ ಮೇಲಿನ ಲೋಕಗಳಿಗೆ ಹೋಗಬೇಕೆಂದರೆ ನಾವು ಕೆಲವೊಂದು ವಿಷಯಗಳನ್ನು ತಿಳಿದುಕೊಳ್ಳಬೇಕು ಎಂದು ಹೇಳಿದ್ದಾರೆ.

1. ಮುಖ್ಯವಾಗಿ ಬದುಕಿದ್ದಾಗಲೇ ನಾನು ದೇಹವಲ್ಲ ನಾನೊಂದು ಆತ್ಮ ಎಂಬ ಅವಗಾಹನೆ ಹೊಂದಿರಬೇಕು. ಅದಕ್ಕೆ ನಾನು ಈ ವಿಷಯವನ್ನು ಯಾವಾಗಲೂ ಹೇಳುತ್ತಿರುತ್ತೇನೆ. ಅಷ್ಟೇ ಅಲ್ಲ ನಿಮ್ಮ ಮನೆಯಲ್ಲಿ ಗೋಡೆಯ ಮೇಲೆ ಚೆನ್ನಾಗಿ ಕಾಣಿಸುವಂತೆ ನಾನು ದೇಹವಲ್ಲ ನಾನು ಒಂದು ಆತ್ಮ ಎಂದು ಬರೆದು ಇಟ್ಟುಕೊಳ್ಳಬೇಕು. ಕನಿಷ್ಠ ಅದನ್ನು ನೋಡಿದಾಗಲಾದರೂ ನಾನು ಆತ್ಮ ಎಂಬ ವಿಷಯ ನೆನಪಿಗೆ ಬರುತ್ತದೆ.

2. ಮುಖ್ಯವಾಗಿ ಮರಣಿಸುವ ಮೊದಲೇ ಮರಣ ಹೊಂದಬೇಕು ಅಂದರೆ ಮರಣಿಸಿದ ನಂತರ ನಡೆಯುವುದೆಲ್ಲವನ್ನು ಮೊದಲೇ ತಿಳಿದುಕೊಳ್ಳಬೇಕು.

3. ಮುಖ್ಯವಾಗಿ ಮರಣ ಒಂದು ಸಹಜಕ್ರಿಯೆ, ಎಂಬುದನ್ನು ತಿಳಿದುಕೊಳ್ಳಬೇಕು. ಮರಣಕ್ಕೆ ಸಿದ್ಧವಾಗಿರಬೇಕು. ಅಷ್ಟೇ ಅಲ್ಲದೆ ಮರಣವು ಎಲ್ಲರಿಗೂ ಬರುತ್ತದೆ ಎಂಬ ವಿಷಯವನ್ನು ತಿಳಿದುಕೊಳ್ಳಬೇಕು. ಹುಟ್ಟು ಎಷ್ಟು ಸಹಜವೋ! ಮರಣವೂ ಕೂಡ ಅಷ್ಟೇ ಸಹಜ! ಎಂದು ತಿಳಿದುಕೊಳ್ಳಿ.

ಅದಕ್ಕೆ ಪತ್ರೀಜಿಯವರು ಜನ್ಮ ಪಡೆದಾಗ ಸಂಭ್ರಮಗಳನ್ನು ಮಾಡಿಕೊಂಡಂತೆಯೇ ಮರಣದ ಸಂಭ್ರಮಗಳನ್ನು ಮಾಡಿಕೊಳ್ಳಬೇಕು, ಎಂದು ಹೇಳಿದ್ದಾರೆ. ಆತ್ಮಗಳಾಗಿರುವ ನಾವು ಶರೀರವನ್ನು ಬಿಟ್ಟು ಹೋಗಬೇಕು. ಅದು ಅನಿವಾರ್ಯ ಎಂದು ತಿಳಿದುಕೊಳ್ಳಿ. ಅದಕ್ಕೆ ಗೀತೆಯಲ್ಲಿ ಹುಟ್ಟಿದವನು ಸಾಯದೆ ಇರುವುದಿಲ್ಲ, ಸತ್ತವನು ಮರು ಹುಟ್ಟದೆಯೂ ಇರುವುದಿಲ್ಲ, ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಮರಣವೆಂಬುದು ಸಹಜ ಎಂದು ತಿಳಿದುಕೊಳ್ಳಬೇಕು. ಆ ಮರಣಕ್ಕೆ ಯಾವಾಗಲೂ ಸಿದ್ದರಾಗಿರಬೇಕು.

4. ಹಾಗೆ ತನ್ನವರ ಮೇಲೆ ತಾನು ಸಂಪಾದಿಸಿಕೊಂಡ ಸಂಪತ್ತಿನ ಮೇಲೆ ಮಮಕಾರವನ್ನು ಬೆಳೆಸಿಕೊಳ್ಳಬಾರದು.

5. ಅಷ್ಟೇ ಅಲ್ಲದೆ ಸತ್ತ ತಕ್ಷಣ ಕುಟುಂಬದ ಸದಸ್ಯರು ಬಂಧುಗಳು ಅತ್ಯಧಿಕವಾಗಿ ಅಳುವುದು, ತುಂಬಾ ದಿನಗಳ ಕಾಲ ರೋಧಿಸುವುದು, ಅವರ ಮೇಲೆ ಪ್ರೇಮವಿಲ್ಲವೆಂದುಕೊಳ್ಳುತ್ತಾರೆ ಎಂದು ಮತ್ತಷ್ಟು ಅಳುವುದು, ನೋಡುವುದಕ್ಕೆ ಯಾರಾದರೂ ಬಂದರೆ ಮತ್ತೆ ಮತ್ತೆ ಅಳುವುದು, ಒಂದು ವೇಳೆ ದುಃಖ ಪಡದೆ ಇದ್ದರೆ ಸತ್ತವರ ಮೇಲೆ ಇವರಿಗೆ ಪ್ರೀತಿ ಇಲ್ಲವೆಂದುಕೊಳ್ಳುತ್ತಾರೆಂದು ಮತ್ತೂ ಅಳುತ್ತಾರೆ.

ನೆನಪಿಟ್ಟುಕೊಳ್ಳಿ, ಪ್ರೀತಿ ಇದ್ದವನು ಅಳುವುದಿಲ್ಲ, ಸತ್ತವನ ಶ್ರೇಯಸ್ಸನ್ನು ಬಯಸುವವನು, ಅವನಿಗೆ ಲಾಭವನ್ನು ಆಶಿಸುವವನು, ಅವನು ನಷ್ಟವಾಗಬಾರದೆಂದು ಅಂದುಕೊಳ್ಳುವವನು, ಅಳುವುದಿಲ್ಲ.

6. ಎಲ್ಲಾ ಸಮಯಗಳಲ್ಲೂ ಈ ಜೀವನವು ತಾತ್ಕಾಲಿಕವಾದದ್ದು, ಕೆಲವೊಂದು ಅನುಭವಗಳನ್ನು, ಪಾಠಗಳನ್ನು, ಕಲಿತುಕೊಳ್ಳುವುದಕ್ಕಾಗಿಯೇ ಈ ಜೀವನ, ಎಂಬುದನ್ನು ತಿಳಿದುಕೊಳ್ಳಬೇಕು. ಆದ್ದರಿಂದ ತಿಳಿದುಕೊಳ್ಳಿ ನಮಗೆ ಮರಣವಿಲ್ಲ, ಮರಣವೆಂಬುದು ನಮಗೆ ಅಂತ್ಯವೂ ಅಲ್ಲ, ಮರಣವೆಂಬುದು ನಾವು ಮತ್ತೆ ಭೂಮಿ ಮೇಲೆ ಬರುವುದಕ್ಕಾಗಿಯೇ. ಮರಣವು ಒಂದು ವಿರಾಮವಷ್ಟೆ ಎಂಬ ವಿಷಯವನ್ನು ಚೆನ್ನಾಗಿ ನೆನಪಿಟ್ಟುಕೊಳ್ಳಬೇಕು.

7. ಮರಣವೆಂದರೆ ಶರೀರವನ್ನು ಆ ಪ್ರದೇಶವನ್ನು ಬದಲಾವಣೆ ಮಾಡುವುದು ಬಿಟ್ಟರೆ, ಮತ್ತೇನು ಅಲ್ಲ. ಈ ಆವಾಗಹನೆ ಅಂದರೆ ಈ ಜ್ಞಾನ ನಿಮಗಿದ್ದರೆ ಸತ್ತಮೇಲೆ ನೀವು ಭೂಮಿಯ ಮೇಲೆ ಇರುವುದಿಲ್ಲ. ಪ್ರೇತಾತ್ಮ ಆಗುವುದಿಲ್ಲ. ಆ ಸಹಾಯಕರ ಜೊತೆಗೆ ಸಂತೋಷವಾಗಿ ಮೇಲಿನ ಲೋಕಗಳಿಗೆ ಹೊರಟು ಹೋಗುತ್ತೀರಿ. ಆದ್ದರಿಂದ ಇವೆಲ್ಲವುಗಳ ಬಗ್ಗೆ ಎಷ್ಟು ಅವಗಾಹನೆ ಇರುತ್ತದೆಯೋ? ನಾವು ಅಷ್ಟು ಲಾಭವನ್ನು ಪಡೆಯುತ್ತೇವೆ. ಆದುದರಿಂದ ಮರಣ ನಂತರ ನಡೆಯುವ ಹಲವಾರು ವಿಷಯಗಳನ್ನು ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳಬೇಕು.

## ಪರದಲ್ಲಿ ಯಾವ ಯಾವ ಲೋಕಗಳಿರುತ್ತವೆ?

ಸಹಜವಾಗಿ ಸತ್ತವನನ್ನು ಕರೆದುಕೊಂಡು ಹೋಗಲು ಬಂದಿರುವ ಸಹಾಯಕರು ಎಷ್ಟೇ ಹೇಳಿದರು ಇವನು ಬರುವುದಿಲ್ಲ. ಎಂದು ಹೇಳುತ್ತಾನೆ. ಆಗ ಕರೆದುಕೊಂಡು ಹೋಗಲು ಬಂದಿರುವ ಸಹಾಯಕರು ಏನು ಹೇಳುತ್ತಾರೆಂದರೆ, ಕೊನೆಯದಾಗಿ ಹೇಳುತ್ತಿದ್ದೇವೆ ಬರುತ್ತೀಯೋ? ಇಲ್ಲವೋ? ಎಂದು ಕೇಳುತ್ತಾರೆ. ಎಷ್ಟೇ ಹೇಳಿದರು ಅವನು ಕೇಳದಿದ್ದರೆ ಸಹಾಯಕರು ಹೊರಟು ಹೋಗುತ್ತಾರೆ. ಅವನನ್ನು ಕರೆದುಕೊಂಡು ಹೋಗಲು ತೆರೆಯಲ್ಪಟ್ಟಿರುವ ಆತ್ಮದ್ವಾರಗಳು ಮುಚ್ಚಲ್ಪಡುತ್ತವೆ. ಆಗ ಅವನು ಪ್ರೇತಾತ್ಮ ಅಂದರೆ ದೆವ್ವವಾಗಿ ಪರಿವರ್ತನೆಯಾಗುತ್ತಾನೆ. ಹಾಗೆ ದೆವ್ವವಾಗಿ ಬದಲಾವಣೆ ಹೊಂದಿದ ಅವನು ಏನು ಮಾಡಲಾಗದು. ಅಲ್ಲೂ ಇಲ್ಲೂ ತಿರುಗಾಡುತ್ತಾನೆ. ಯಾರು ಅವನನ್ನು ಗಮನಿಸುವುದಿಲ್ಲ. ಅವನ ಮಕ್ಕಳ ಪಕ್ಕದಲ್ಲಿಯೇ ಮಂಚದ ಮೇಲೆ ಮಲಗಿಕೊಳ್ಳುತ್ತಾನೆ. ಅದು ಆ ಮಕ್ಕಳಿಗೆ ತಿಳಿಯುವುದಿಲ್ಲ. ಆ ಕೊಠಡಿಯಲ್ಲಿಯೇ ಇರುತ್ತಾನೆ. 24 ಗಂಟೆ ಏನು ನೋಡುತ್ತಾನೆ? ಹೆಂಡತಿಗೆ ಹತ್ತಿರ ಹೋಗುತ್ತಾನೆ. ಅಲ್ಲಿಯೇ ಇರುತ್ತಾನೆ, ತಾನು ಸಂಪಾದಿಸಿದ ಆಸ್ತಿಗಳ ಹತ್ತಿರವೂ ಹೋಗುತ್ತಾನೆ. ಅಲ್ಲಿಯೂ ಇರುತ್ತಾನೆ. ಹಾಗೆ ಬಹಳಷ್ಟು ಸಮಯವನ್ನು ವ್ಯರ್ಥ ಮಾಡಿಕೊಳ್ಳುತ್ತಾನೆ. ಕೆಲವರು ಇದೇ ರೀತಿಯಲ್ಲಿ ನೂರಾರು ವರ್ಷಗಳ ಕಾಲ ಕೂಡ ಇದ್ದುಬಿಡುತ್ತಾರೆ.

ಅವನಿಗೆ ಯಾವುದೋ ಒಂದು ಕಾಲಕ್ಕೆ ಅದು ಅರ್ಥವಾಗುತ್ತದೆ. ಯಾರು ನನ್ನನ್ನು ಗಮನಿಸುತ್ತಿಲ್ಲ, ಯಾರು ಲೆಕ್ಕಕ್ಕೆ ತೆಗೆದುಕೊಳ್ಳುತ್ತಿಲ್ಲ. ಅವರವರ ಕೆಲಸಗಳಲ್ಲಿ ತಲೀನರಾಗಿದ್ದಾರೆ. ಈಗ ನಾನು ಏನು ಮಾಡಬೇಕು? ಹೀಗೆ ಇದ್ದುಬಿಟ್ಟೆನಲ್ಲ. ಈಗ ನನ್ನ ಪರಿಸ್ಥಿತಿ ಏನು? ಆ ಮೇಲಿನ ಲೋಕಗಳಿಗೆ ಹೇಗೆ ಹೋಗಲಿ? ನನ್ನನ್ನು ಯಾರು ಕರೆದುಕೊಂಡು ಹೋಗುತ್ತಾರೆ? ಮತ್ತೆ ದಾರಿಯಲ್ಲಿದೆ? ಇಲ್ಲಿ ಏನು ಇಲ್ಲ. ದಾರಿ ತೋರಿಸುವವನು ಇಲ್ಲ. ಕರೆದುಕೊಂಡು ಹೋಗುವವನು ಇಲ್ಲ. ಅಂದುಕೊಳ್ಳುತ್ತಾ, ಹಾಗೆಯೇ ದಿಕ್ಕು ತೋಚದೆ ತಳಮಳ ಪಡುತ್ತಾ ಇದ್ದುಬಿಡುತ್ತಾನೆ.

ಹೀಗೆ ನೂರಾರು ವರ್ಷಗಳ ನಂತರ ಇನ್ನೂ ಇಲ್ಲಿ ಏನು ಮಾಡಬೇಕು? ಏನಿದೆ ಇಲ್ಲಿ? ಯಾರ ಜೊತೆಯಲ್ಲೂ, ಯಾವುದರ ಜೊತೆಯಲ್ಲೂ, ಏನು ಸಂಬಂಧವಿಲ್ಲ. ಇಲ್ಲಿ ಎಷ್ಟು ವರ್ಷಗಳು ಇದ್ದು ಬಿಡಲಿ? ಆ ಸಹಾಯಕರು ಕೇಳಿದಾಗ ಹೋಗಿದ್ದರೇ ಚೆನ್ನಾಗಿರುವುದು. ಕನಿಷ್ಠ ಈಗಲಾದರೂ ಹೊರಟು ಹೋಗಬೇಕು ಎಂಬ ಅಭಿಪ್ರಾಯವೂ ಗಟ್ಟಿಯಾಗಿ ಅನ್ನಿಸುತ್ತದೆ. ಹಾಗೆ ಅನ್ನಿಸುವಾಗ ಮೇಲಿನ ಲೋಕಗಳಿಂದ ಯಾರೋ ಒಬ್ಬರು ಬಂದು ಅವನಿಗೆ ಯಾವುದೋ ಒಂದು ಸಹಾಯವನ್ನು ಮಾಡಿ ಕರೆದುಕೊಂಡು ಹೋಗುತ್ತಾರೆ. ಆದರೆ ಅವನು ಹೀಗೆಯೇ ತನ್ನ ನೂರಾರು ವರ್ಷಗಳ ಕಾಲವನ್ನು ನಷ್ಟಪಡಿಸಿಕೊಂಡಿರುತ್ತಾನೆ. ಸಾಕಷ್ಟು ಸಮಯವನ್ನು ವ್ಯರ್ಥ ಮಾಡಿಕೊಂಡಿದ್ದಾನೆ.

ಇದೆಲ್ಲಾ ಯಾರ ವಿಷಯದಲ್ಲಿ ನಡೆಯುತ್ತದೆ? ಅಂದರೆ ಧ್ಯಾನವನ್ನು ಮಾಡದವನಿಗೆ ನಡೆಯುತ್ತದೆ. ಅಲ್ಪ ಮಾತ್ರವೂ ಜ್ಞಾನವಿಲ್ಲದವನ ವಿಷಯದಲ್ಲಿ ನಡೆಯುತ್ತದೆ. ಪತ್ರಿಯವರ ಪರಿಚಯವು ಇಲ್ಲದವನಿಗೆ ನಡೆಯುತ್ತದೆ.

ಆದರೆ ಯಾರು ಧ್ಯಾನವನ್ನು ಮಾಡುತ್ತಾರೋ? ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೋ? ಪತ್ರಿಯವರ ಪರಿಚಯವೂ ಇರುತ್ತದೆಯೋ? ಪತ್ರಿಯವರ ಮಾರ್ಗದಲ್ಲಿ ನಡೆಯುತ್ತಿರುತ್ತಾರೋ ಅವರು ತಾವು ಸತ್ತ ನಂತರ ನಡೆಯುವ ವಿಷಯಗಳನ್ನು ತಿಳಿದುಕೊಳ್ಳುತ್ತಾರೆ. ಏನು ನಡೆಯುತ್ತದೋ? ಹೇಗೆ ನಡೆಯುತ್ತದೋ? ತಿಳಿದುಕೊಳ್ಳುತ್ತಾರೆ. ಮರಣಿಸಿದ ನಂತರ ಸಹಾಯಕರು ಬಂದ ತಕ್ಷಣ ಹೋಗಬೇಕಾದ ಲೋಕಗಳಿಗೆ ಹೊರಟು ಹೋಗುತ್ತಾರೆ. ಕಾರಣ ನಾನು ದೇಹವಲ್ಲ ನಾನೊಂದು ಆತ್ಮ ಎಂಬ ವಿಷಯ ಅವರಿಗೆ ತಿಳಿಯುತ್ತದೆ. ಅಷ್ಟೇ ಅಲ್ಲದೆ ಯಾವುದೋ ಒಂದು ದಿನ ನಾನು ಸತ್ತುಹೋಗಬೇಕಾಗಿ ಬರುತ್ತದೆ. ಅಂದರೆ ಈ ದೇಹವನ್ನು ಬಿಟ್ಟು ಹೋಗಬೇಕಾಗಿ ಬರುತ್ತದೆ, ಎಂಬುದು ಅರ್ಥವಾಗುತ್ತದೆ. ಅಷ್ಟೇ ಅಲ್ಲದೆ ಸತ್ತು ಹೋಗುವವನಿಗೆ ಇನ್ನು ಯಾವುದರೊಂದಿಗೂ ಸಂಬಂಧವಿಲ್ಲವೆಂದು ಅರ್ಥವಾಗುತ್ತದೆ. ಈ ಆಸ್ತಿಗಳು ಬಂದುತ್ವಗಳು ಯಾವುದರೊಂದಿಗೆ ಸಂಬಂಧ ಇರುವುದಿಲ್ಲ. ಅವರವರ ದಾರಿ ಅವರದೇ, ನನ್ನ ದಾರಿ ನನ್ನದೇ. ಎಂಬ ಅವಗಾಹನೆ ಲಭಿಸುತ್ತದೆ.

ಅದು ಯಾಕೆಂದರೆ ಪತ್ರಿಯವರು ಬಹಳಷ್ಟು ಸಲ ಇವನ್ನೇ ಹೇಳುತ್ತಿದ್ದರು.

ಇತ್ತೀಚಿನ ಅಂದರೆ ಒಂದು ವರ್ಷದ ಹಿಂದಿನ ದಿನಗಳಲ್ಲಿ ಪತ್ರಿಯವರು ಸಾವಿನ ಬಗ್ಗೆ ಹೆಚ್ಚು ಹೆಚ್ಚಾಗಿ ತರಗತಿಗಳನ್ನು ಹೇಳುತ್ತಿದ್ದರು. ನೀವು ಪತ್ರಿಯವರ ತರಗತಿಗಳನ್ನು ಕೇಳಿಸಿಕೊಂಡಿದ್ದರೆ ಅದು ನಿಮಗೂ ಕೂಡ ತಿಳಿದಿರುತ್ತದೆ.

ಅದಕ್ಕೆ ಯಾರೇ ಆಗಲಿ ನಾಳೆ ನಾವು ಇರುವುದಿಲ್ಲ, ಎಂಬಂತೆ ಜೀವಿಸಬೇಕು. ಮರುಕ್ಷಣದಲ್ಲಿ ನಾವು ಇರಬಹುದು, ಇಲ್ಲದೆಯೂ ಇರಬಹುದು. ಅದಕ್ಕಾಗಿ ನೀವು ಏನು ಗಂಟು ಮೂಟೆ ಕಟ್ಟಿಕೊಳ್ಳಬೇಕಾಗಿದ್ಯೋ? ಅದನ್ನು ಕಟ್ಟಿಕೊಳ್ಳಿ ಎಲ್ಲದಕ್ಕೂ ಸಿದ್ಧವಾಗಿ ಎಂದು ಹೇಳುತ್ತೇನೆ.

ನೋಡಿ ನೀವು ರೈಲು ಪ್ರಯಾಣವನ್ನು ಮಾಡಬೇಕಾದರೆ ಮೊದಲೇ ಪ್ಯಾಕ್ ಮಾಡಿಕೊಳ್ಳಬೇಕಾದ ವಸ್ತುಗಳನ್ನು ಮಾಡಿಕೊಂಡಿಲ್ಲವೆಂದಾದರೆ, ಹೋಗುವಾಗ ಗಡಿಬಿಡಿಯಲ್ಲಿ ಏನು ಮಾಡಲು ಆಗುವುದಿಲ್ಲ. ಒಂದು ವೇಳೆ ಹಾಗೆ ಮಾಡಿದರೆ ಹೋಗುವಾಗ ತುಂಬಾ ಗಡಿಬಿಡಿ ಆಗಿರುತ್ತದೆ. ಹೌದಲ್ಲವೇ? ಅದನ್ನೇ ನಾವು ಮೊದಲು ಪ್ಯಾಕ್ ಮಾಡಿಟ್ಟುಕೊಂಡರೆ ಗಡಿಬಿಡಿ ಮಾಡುವ ಅವಶ್ಯಕತೆ ಇಲ್ಲ. ಆರಾಮಾಗಿ ಪ್ಯಾಕ್ ಮಾಡಿರುವ ಪೆಟ್ಟಿಗೆಗಳನ್ನು ತೆಗೆದುಕೊಂಡು ಹೊರಟು ಹೋಗುತ್ತೇವೆ.

ಹಾಗೆಯೇ ಮೇಲಿನ ಲೋಕಗಳ ಪ್ರಯಾಣಕ್ಕಾಗಿ ನಾವು ನಮ್ಮನ್ನು ಯಾವಾಗಲೂ ಸಿದ್ಧಪಡಿಸಿಕೊಂಡು ಇರಬೇಕು. ನನ್ನ ಮಕ್ಕಳು ಏನಾಗುತ್ತಾರೋ? ನನ್ನ ವಸ್ತುಗಳೆಲ್ಲ ಏನಾಗುತ್ತೆ? ನನ್ನ ಗಂಡನಿಗೆ ಏನಾಗುವುದು? ಹೆಂಡತಿ ಏನಾಗುವಳು? ಅದು ಎಲ್ಲಾ ಏನಾಗುವುದು? ಇದೆಲ್ಲ ಏನಾಗುವುದು? ಅಂದುಕೊಂಡು ಕುಳಿತಿದ್ದರೆ, ಸಾವು ನಿಲ್ಲುವುದಿಲ್ಲ. ನೀನು ಮೊದಲೇ ನಿರ್ಣಯಿಸಿಕೊಂಡು ಬಂದ ಸಮಯವು ಮುಗಿದರೆ, ನೀನು ಹೊರಟು ಹೋಗಬೇಕು. ಆ ಸಮಯವು ನಿನಗೆ ಗೊತ್ತಿಲ್ಲ. ಆದರೆ ಪ್ರಕೃತಿಗೆ ಗೊತ್ತಿದೆ.

ನೀನು ಮೇಲಿನ ಲೋಕಗಳಿಂದ ಬರುವಾಗಲೇ ಇಷ್ಟು ವರ್ಷಗಳ ಕಾಲ ಇಲ್ಲಿ ಇರುತ್ತೇನೆಂದು ಅಲ್ಲಿಯೇ ನಿರ್ಣಯಿಸಿಕೊಂಡು ಬಂದಿರುತ್ತೀಯ. ಆ ವಿಷಯವೂ ಪ್ರಕೃತಿಗೆ ಗೊತ್ತಿರುತ್ತದೆ. ಆ ಸಮಯವು ಬಂದಾಗ ಯಾವುದೋ ಒಂದು ಕಾರಣದಿಂದ ನೀನು ಇಲ್ಲಿಂದ ನಿಷ್ಕ್ರಮಿಸಬೇಕು. ನೀನು ನಿನ್ನನ್ನು ಸಿದ್ಧತೆ ಮಾಡಿಕೊಂಡಿಲ್ಲವಾದರೆ ಶರೀರವನ್ನು ಬಿಟ್ಟ ತಕ್ಷಣ ತುಂಬಾ ಗೊಂದಲಮಯವಾಗಿರುತ್ತದೆ. ಶರೀರವನ್ನು ಬಿಟ್ಟ ನಂತರ ಅಯ್ಯೋ ಆ ಕೆಲಸವು ಉಳಿದುಕೊಂಡು ಬಿಟ್ಟಿದೆ. ಆ ಕೆಲಸವನ್ನು

ಮಾಡಬೇಕಾಗಿತ್ತು. ಅದು ಮಾಡಲಿಲ್ಲ. ಇದು ಮಾಡಿದ್ದರೆ ಚೆನ್ನಾಗಿರುತ್ತಿತ್ತು. ಎಂದು ದುಃಖಿಸುತ್ತೀಯ. ಹಾಗೆ ನಷ್ಟ ಪಡುತ್ತೀಯ ಕೂಡ. ಆದ್ದರಿಂದ ಯಾವಾಗಲೂ ನಾವು ಸಾವಿಗೆ ಸಿದ್ದರಾಗಿ ಇರಬೇಕು, ಎಂದು ಪತ್ರಿಯವರು ಅನ್ನುತ್ತಾರೆ.

ಒಂದು ವೇಳೆ ನೀನು ಇವತ್ತು ಹೊರಟು ಹೋಗೋಣ ಅಂದುಕೊಂಡರೂ, ಹೋಗಬೇಕಾದ ಸಮಯ ಬಂದಿಲ್ಲವಾದರೆ 20 ವರ್ಷಗಳಾಗಲಿ, 30 ವರ್ಷಗಳಾಗಲಿ, 50 ವರ್ಷಗಳಾಗಲಿ ನೀನು ಇರುತ್ತೀಯ. ಒಂದು ವೇಳೆ ನೀನು ಹೋಗಬೇಕಾದ ಸಮಯವೂ ಬಂದರೆ ನಿನಗೆ ಎಷ್ಟೇ ಕೆಲಸಗಳಿದ್ದರೂ, ನೀನು ಮಾಡುತ್ತಿರುವ ಕೆಲಸಗಳು ಮಧ್ಯದಲ್ಲಿದ್ದರೂ, ನೀನು ಸಿದ್ಧವಾಗಿಲ್ಲದಿದ್ದರೂ, ಎಲ್ಲವನ್ನೂ ಬಿಟ್ಟು ಹೊರಟು ಹೋಗುವೆ.

ಚಿಕ್ಕ ಉದಾಹರಣೆ ನೋಡೋಣ. ಒಬ್ಬ ತುಂಬಾ ಸುಖವಾಗಿ ಬಾಳ ಬೇಕೆಂಬ ಉದ್ದೇಶದಿಂದ ಜೀವನದಲ್ಲಿ ತುಂಬಾ ಪ್ರಯಾಸ ಪಟ್ಟು ಕೋಟಿಗಟ್ಟಲೆ ಹಣ ಸಂಪಾದಿಸುತ್ತಾನೆ. ಅನೇಕ ಅಂತಸ್ತುಗಳುಳ್ಳ ದೊಡ್ಡ ಅರಮನೆ ಒಂದನ್ನು ಕಟ್ಟಿಕೊಳ್ಳುತ್ತಾನೆ. ಅದರಲ್ಲಿ ಸಾಕಷ್ಟು ಸೌಕರ್ಯಗಳು ಇರುತ್ತವೆ. ನನ್ನ ಅದೃಷ್ಟವೇ ಅದೃಷ್ಟ! ಎಂದು ಅಂದುಕೊಳ್ಳುತ್ತಾನೆ. ಇಷ್ಟು ದಿನ ಕಷ್ಟಪಟ್ಟಿದ್ದಕ್ಕೂ, ಇನ್ನೂ ಹಾಯಾಗಿ ಜೀವಿಸಬಹುದು, ಎಲ್ಲವನ್ನು ಅನುಭವಿಸಬಹುದು, ಎಂದು ಅಂದುಕೊಳ್ಳುತ್ತಾನೆ. ಹಾಗೆ ನಾಲ್ಕು ದಿನ ಅದನ್ನೆಲ್ಲ ಅನುಭವಿಸುತ್ತಾನೆ. ಆದರೆ ಅವನ ಟೈಮ್ ಮುಗಿದು ಹೋಗಿರುತ್ತದೆ. ಸತ್ತು ಹೋದನು. ಈಗ ಏನು ಮಾಡುತ್ತಾನೆ? ಇಷ್ಟು ದಿನ ಕಷ್ಟಪಟ್ಟು ಕಟ್ಟಿಕೊಂಡ ಸಂಪಾದಿಸಿಕೊಂಡ ಆಸ್ತಿ ಅಂತಸ್ತನ್ನು ಅನುಭವಿಸಲು ಇಲ್ಲವಾದರೆ ಎಂದು ದುಃಖಿಸುವುದನ್ನು ಬಿಟ್ಟರೆ, ಏನು ಮಾಡಲಾಗದು.

ಅವನ ಮನೆಯ ಮೇಲೆಯೇ ದೃಷ್ಟಿ ಇರುತ್ತದೆ. ಅಂತಹವನು ಸಹಾಯಕರ ಜೊತೆ ಹೋಗಬೇಕೆಂದರೆ ಹೋಗುತ್ತಾನೆಯೇ? ಹೋಗಲು ಆಗುವುದಿಲ್ಲ ಅಲ್ಲವೇ? ಆದ್ದರಿಂದ ನಾನು ಬರುವುದಿಲ್ಲ ಅನ್ನುತ್ತಾನೆ. ಭೂಮಿಯ ಮೇಲೆ ಇದ್ದುಬಿಡುತ್ತಾನೆ. ಪ್ರೇತಾತ್ಮನಾಗಿ ಇರುತ್ತಾನೆ.

ಆದ್ದರಿಂದ ಇಲ್ಲಿ ನಾವು ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ, ಯಾರು ಧ್ಯಾನವನ್ನು ಮಾಡುತ್ತಾರೋ, ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೋ, ಸತ್ತ ಮೇಲೆ ಏನು ನಡೆಯುತ್ತದೆ ಎಂದು ತಿಳಿದುಕೊಳ್ಳುತ್ತಾರೋ, ಅಂದರೆ ಸತ್ತ ನಂತರ ಆ ಮೇಲಿನ

ಲೋಕಗಳಿಗೆ ಕರೆದುಕೊಂಡು ಹೋಗಲು ಸಹಾಯಕರು ಬರುತ್ತಾರೆ. ಅವರ ಜೊತೆ ನಾವು ಹೋಗಬೇಕಾಗಿ ಬರುತ್ತದೆ ಅಲ್ಲಿ ನಾವು ಹೊಸ ಜೀವನವನ್ನು ಆರಿಸಿಕೊಳ್ಳಬೇಕಾಗಿರುತ್ತದೆ. ಹೊಸ ಪ್ರಣಾಳಿಕೆಗಳನ್ನು ನಾವು ಆರಿಸಿಕೊಂಡು ಮತ್ತೊಂದು ಜನ್ಮವನ್ನು ತೆಗೆದುಕೊಳ್ಳಬೇಕಾಗುತ್ತದೆ. ಎಂಬ ವಿಷಯಗಳ ಬಗ್ಗೆ ಅವಗಾಹನೆ ಇರುತ್ತದೆ. ಇವೆಲ್ಲದರ ಅವಗಾಹನೆ ಇದ್ದಾಗ ನಮಗೆ ಬೇರೆ ಯಾವುದೇ ವ್ಯಕ್ತಿಗಳ ಬಗ್ಗೆ ಆಗಲಿ, ವಸ್ತುವಿನ ಬಗ್ಗೆ ಆಗಲಿ, ಮಮಕಾರ ಇರುವುದಿಲ್ಲ. ಅಂದರೆ ವ್ಯಾಮೋಹವು ಇರುವುದಿಲ್ಲ. ಅಷ್ಟೇ ಅಲ್ಲದೆ ಇವರೆಲ್ಲ ನಾನು ಹೇಗೆ ಬಂದೆನೋ ಹಾಗೆ ಇವರು ಬಂದವರು, ಎಂದು ತಿಳಿದುಕೊಳ್ಳುತ್ತಾನೆ. ಯಾವ ಕೆಲಸಕ್ಕಾಗಿ ಅವರು ಬಂದಿದ್ದಾರೆ? ಎಂದು ತಿಳಿದುಕೊಳ್ಳುತ್ತಾನೆ. ಆದ್ದರಿಂದ ಯಾರೇ ಆಗಲಿ ಸ್ವಲ್ಪ ದಿನ ಮಾತ್ರ ಇರುವವರು. ನಾನು ಹಾಗೆಯೇ ಸ್ವಲ್ಪ ಕಾಲದವರೆಗೆ ಇದ್ದು ಹೋಗುವುದಕ್ಕೆ ಬಂದಿರುವವನೇ ಎಂದು ತಿಳಿದುಕೊಳ್ಳುತ್ತಾನೆ. ಅದರಿಂದ ಯಾರ ಮೇಲೆಯೂ ಮಮಕಾರ ಇಟ್ಟುಕೊಳ್ಳುವುದಿಲ್ಲ, ಆಗ ಮೇಲಿಂದ ಬಂದ ಸಹಾಯಕರ ಜೊತೆ ಮೇಲಿನ ಲೋಕಗಳಿಗೆ ಸಂತೋಷವಾಗಿ ಹೊರಟು ಹೋಗುತ್ತಾನೆ.

ಇಲ್ಲಿ ನಾವು ಒಂದು ವಿಷಯವನ್ನು ತಿಳಿದುಕೊಳ್ಳಬೇಕು, ಸಹಜವಾಗಿ ಸತ್ತು ಹೋದಾಗ ಏನು ನಡೆಯುತ್ತದೆ? ಧ್ಯಾನವನ್ನು ಮಾಡದೆ ಪಾಪಗಳನ್ನು ಮಾಡುತ್ತಾ, ಸತ್ತು ಹೋದವರನ್ನು ಕರೆದುಕೊಂಡು ಹೋಗಲು ಸಾಮಾನ್ಯ ಸಹಾಯಕರು ಬರುತ್ತಾರೆ. ಇವರನ್ನು ಪಿತೃದೇವತೆಗಳು ಎಂದು ಪತ್ರೀಜಿಯವರು ಹೇಳುತ್ತಿದ್ದರು. ಅವರು ಅವನನ್ನು ಅದೋ ಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ.

ಆದರೆ ಧ್ಯಾನವನ್ನು ಮಾಡುತ್ತಾ, ಸೇವೆಗಳನ್ನು ಮಾಡುತ್ತಾ, ಜ್ಞಾನವನ್ನು ಸಂಪಾದಿಸಿಕೊಂಡು, ಹಲವಾರು ಸೇವಾ ಕಾರ್ಯ ಕ್ರಮಗಳಲ್ಲಿ ಭಾಗವಹಿಸಿ, ಬಹಳಷ್ಟು ಸೇವೆ ಮಾಡಿ, ಮರಣಿಸಿದ ವ್ಯಕ್ತಿಯನ್ನು ಕರೆದುಕೊಂಡು ಹೋಗಲು ಶ್ರೇಷ್ಠವಂತರಾದ ಯೋಗಿಗಳು, ಸಹಾಯಕರಾಗಿ ಬಂದು ಪೂರ್ವ ಲೋಕಗಳಿಗೆ ಅಂದರೆ ಉನ್ನತವಾದ ಮೇಲಿನ ಲೋಕಗಳಿಗೆ ಕರೆದುಕೊಂಡು ಹೋಗುತ್ತಾರೆಂದು ಪತ್ರೀಜಿಯವರು ಹೇಳಿದ್ದಾರೆ.

ಆದ್ದರಿಂದ ಪ್ರತಿದಿನ ಪ್ರಾತಃಕಾಲ ಧ್ಯಾನ ಮಾಡುವುದಲ್ಲದೆ, ಸಾಯಂಕಾಲವೂ ಕೂಡ ನಾವು ಧ್ಯಾನವನ್ನು ಮಾಡಬೇಕು. ನನ್ನ ಲೆಕ್ಕದಲ್ಲಿ ಹೇಳುವುದಾದರೆ ಕನಿಷ್ಟ ಬೆಳಿಗ್ಗೆ ಎರಡು ಗಂಟೆಗಳು, ಸಾಯಂಕಾಲ ಎರಡು ಗಂಟೆಗಳು ಪ್ರತಿಯೊಬ್ಬರೂ ತಪ್ಪದೆ ಧ್ಯಾನ

ಮಾಡಬೇಕು. ಅದರ ಫಲಿತವು ನಿಮಗೆ ಇಲ್ಲಿ ತಿಳಿಯುವುದಿಲ್ಲ. ಸತ್ತ ಮೇಲೆ ಅರ್ಥವಾಗುತ್ತದೆ ಇದನ್ನೇ ನಮ್ಮ ಹಿಂದೂ ಪುರಾಣಗಳಲ್ಲಿ ಏನು ಹೇಳಿದ್ದಾರೆಂದರೆ, ಪಾಪಗಳನ್ನು ಮಾಡಿದವರನ್ನು ಕರೆದುಕೊಂಡು ಹೋಗಲು ಯಮಭಟರು ಬಂದು ಯಮಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ. ಪುಣ್ಯಗಳನ್ನು ಮಾಡಿದವರನ್ನು ಇಂದ್ರ ದೂತಗಳು ಬಂದು ಸ್ವರ್ಗ ಲೋಕಕ್ಕೆ ಕರೆದುಕೊಂಡು ಹೋಗುತ್ತಾರೆಂದು ಹೇಳುತ್ತಿರುತ್ತಾರೆ.

ಹಾಗೆ ಇಷ್ಟಪಟ್ಟು ಮೇಲಿನ ಲೋಕಗಳಿಗೆ ಹೋಗಬೇಕೆಂದುಕೊಂಡಾಗ ಒಂದು ದೊಡ್ಡ ಕತ್ತಲೆಯ ಸುರಂಗ ಮಾರ್ಗದಲ್ಲಿ ಆತ್ಮವೂ ಪ್ರಯಾಣ ಮಾಡಬೇಕಾಗಿ ಬರುತ್ತದೆ. ಆ ಸಹಾಯಕರು ಯಾವ ಲೋಕಕ್ಕೆ ಇವನು ಸೇರಬೇಕಾಗಿದೆಯೋ ಅಲ್ಲಿಗೆ ಕರೆದುಕೊಂಡು ಹೋಗುತ್ತಾರೆ. ಹಾಗೆ ಲಕ್ಷಗಟ್ಟಲೆ ಕೋಟಿಗಟ್ಟಲೆ ಕಿಲೋ ಮೀಟರ್ ಪ್ರಯಾಣ ಮಾಡಿದ ಮೇಲೆ ಪ್ರಯಾಣದ ಪ್ರಯಾಸವು ಅವನಿಗೆ ತಿಳಿಯುವುದಿಲ್ಲ. ಅಷ್ಟು ವೇಗವಾಗಿ ಹೊರಟು ಹೋಗುತ್ತಾನೆ. ಆ ಲೋಕಗಳು ಹತ್ತಿರವಾದಾಗ, ಹತ್ತಿರಕ್ಕೆ ಬಂದೆವು ಎಂಬ ಸೂಚನೆಗೆ ಆ ಮಾರ್ಗದ ಕೊನೆಯಲ್ಲಿ ಒಂದು ಬೆಳಕು ಕಾಣಿಸುತ್ತದೆಯಂತೆ. ನೋಡಿ ನಾವು ರೈಲಿನ ಸುರಂಗ ಮಾರ್ಗದಲ್ಲಿ ಹೋಗುತ್ತಿದ್ದಾಗ ರೈಲು ಹೊರಗೆ ಬರುವ ಸಮಯದಲ್ಲಿ ಬೆಳಕು ಹೇಗೆ ಕಾಣಿಸುತ್ತದೆ. ಇಲ್ಲಿ ಕೂಡ ಅಷ್ಟೇ. ಅಂದರೆ ಅದರ ಅರ್ಥ ಅವನು ಸೇರಬೇಕಾಗಿದ್ದ ಲೋಕ ಬಂದಿದೆ ಎಂದು ಅರ್ಥ.

ಇಲ್ಲಿ ಮತ್ತಷ್ಟು ವಿಷಯಗಳನ್ನು ತಿಳಿದುಕೊಳ್ಳಬೇಕು, ಭೂಲೋಕ ಅಂದರೆ ಭೂಮಿ ಒಂದೇ ಎಲ್ಲಾ ನಮ್ಮ ಕಣ್ಣಿಗೆ ಕಾಣಿಸುವುದೆಲ್ಲವನ್ನು ಭೂಲೋಕ ಅನ್ನುತ್ತಾರೆ. ಅಂತಹ ಲೋಕಗಳು ಸೃಷ್ಟಿಯಲ್ಲಿ ಕೋಟ್ಯಾನು ಕೋಟಿ ಇದ್ದಾವೆ. ಸೂರ್ಯ ಚಂದ್ರ ನಕ್ಷತ್ರಗಳು ಲಕ್ಷಗಟ್ಟಲೆ, ಭೂಮಂಡಲಗಳು ಹಾಗೆಯೇ ಹಲವಾರು ಸೂರ್ಯಗಳು, ಚಂದ್ರಗಳು, ಎಷ್ಟೋ ಕಾಣಿಸದ ವಿಶ್ವಗಳು. ಇವೆಲ್ಲ ಭೂಲೋಕದ ಅಡಿಯಲ್ಲಿಯೇ ಬರುತ್ತವೆ, ಎಂದು ಹೇಳುತ್ತಾರೆ. ಯೋಚಿಸಿ ಈ ಭೂಲೋಕವೇ ಇಷ್ಟು ದೊಡ್ಡದಾಗಿದ್ದರೆ, ಇನ್ನು ಮೇಲೆ ಇರುವ ಸೂಕ್ಷ್ಮ ಲೋಕಗಳು ಎಷ್ಟು ದೊಡ್ಡವು? ಎಷ್ಟು ಪಟ್ಟು ದೊಡ್ಡದಾಗಿರಬಹುದೋ ಒಂದು ಸಲ ಯೋಚಿಸಿ.

ಹಾಗೆ ಭೂಲೋಕವಲ್ಲದೆ ಭೂಲೋಕದ ನಂತರ ಇರುವ ಲೋಕವನ್ನು ಭುವ ಲೋಕ ಅನ್ನುತ್ತಾರೆ. ಭೂಲೋಕದ ನಂತರ ಇರುವ ಲೋಕವನ್ನು ಸುವರ್ಣ ಲೋಕ ಅಂದರೆ

ಸ್ವರ್ಗಲೋಕ ಅನ್ನುತ್ತಾರೆ, ಅದರ ಮೇಲೆ ಇರುವ ಲೋಕ ಜನಲೋಕ, ಅದನ್ನೇ ಕಾರಣ ಲೋಕಗಳು ಅನ್ನುತ್ತಾರೆ. ಅದರ ಮೇಲೆ ಮಹಾ ಲೋಕ ಇರುತ್ತದೆ. ಅದರ ಮೇಲೆ ತಪೋಲೋಕ ಅದರ ಮೇಲೆ ಸತ್ಯ ಲೋಕ ಇರುತ್ತದೆ. ಪೂರ್ಣಾತ್ಮಕಗಳು ಇರುವುದು, ದೇವರುಗಳು ಇರುವುದು ಸತ್ಯ ಲೋಕದಲ್ಲಿಯೇ. ಅದು ತುಂಬಾ ಶ್ರೇಷ್ಠವಾದ ಲೋಕ. ಹಾಗೆಯೇ ಒಂದೊಂದು ಲೋಕದಲ್ಲಿಯೂ ಬಹಳಷ್ಟು ಭೋಗ ಭಾಗ್ಯಗಳು ಇರುತ್ತವೆ.

ಸಹಜವಾಗಿ ಪಾಪಗಳನ್ನು ಮಾಡುವವರು ಭುವ ಲೋಕದಲ್ಲಿ ಸೇರಿಕೊಳ್ಳಲ್ಪಡುತ್ತಾರೆ. ಪುಣ್ಯಗಳನ್ನು ಮಾಡಿದವರು ಸುವರ್ಣ ಲೋಕದಲ್ಲಿ, ಅಂದರೆ ಸ್ವರ್ಗದಲ್ಲಿ ಸೇರಿಕೊಳ್ಳುತ್ತಾರೆ. ಯಾರು ನಿಸ್ವಾರ್ಥದಿಂದ ಇದ್ದು ಶ್ರೇಷ್ಠ ಸೇವೆಗಳನ್ನು ಮಾಡುತ್ತಾರೋ, ಅವರು ಮಹಾ ಲೋಕಗಳನ್ನು ಸೇರಿಕೊಳ್ಳುತ್ತಾರೆ. ಹಾಗೆಯೇ ಯಾರು ಯಾವುದೇ ಕೋರಿಕೆ ಸಂಕಲ್ಪಗಳು ಇಲ್ಲದೆ ಧ್ಯಾನವನ್ನು ಮಾಡುತ್ತಾರೋ ಅಂದರೆ ತಪಸ್ಸು ಮಾಡುತ್ತಾರೋ ಅವರು ತಪೋಲೋಕವನ್ನು ಸೇರಿಕೊಳ್ಳುತ್ತಾರೆ. ಹಾಗೆಯೇ ಈ ಭೂಮಿ ಮೇಲೆ ಪತ್ರಿಯವರನ್ನು ಅನುಸರಿಸಿ ಅವರು ತಿಳಿಸಿದ ಮಾರ್ಗದಲ್ಲಿ ನಡೆದು, ತುಂಬಾ ತೀವ್ರವಾದ ಸಾಧನೆ ಮಾಡಿ, ಸ್ವಾಧ್ಯಾಯ, ಸಜ್ಜನ ಸಾಂಗತ್ಯ ಮಾಡಿ, ಸತ್ಯವನ್ನು ಅನುಭವದಲ್ಲಿ ತಂದುಕೊಂಡರೆ ಸತ್ಯ ಲೋಕಕ್ಕೆ ಸೇರಿಕೊಳ್ಳುತ್ತಾರೆ. ಹಾಗೆ ಸೇರಬೇಕಾದರೆ ಮರಣಿಸಿದ ನಂತರ ನಡೆಯುವ ವಿಷಯಗಳ ಬಗ್ಗೆ ಖಚಿತವಾಗಿ ತಿಳಿದುಕೊಳ್ಳಬೇಕು. ಅದಕ್ಕೆ ಪತ್ರಿಯವರು ಹೇಳಿದ ಹಾಗೆ ನಾಲ್ಕು ಕೆಲಸಗಳನ್ನು ಮಾಡಬೇಕು,

1. ಶ್ವಾಸದ ಮೇಲೆ ಗಮನ ಇಟ್ಟು ಧ್ಯಾನ ಮಾಡಬೇಕು.
2. ಜ್ಞಾನವುಳ್ಳ ಪುಸ್ತಕಗಳನ್ನು ಅಂದರೆ ಪತ್ರಿಯವರ ಪುಸ್ತಕಗಳನ್ನು ಓದಬೇಕು.
3. ಜ್ಞಾನವನ್ನು ಬೋಧಿಸುವ ವ್ಯಕ್ತಿಗಳ ಸಾಂಗತ್ಯವನ್ನು ಮಾಡಬೇಕು.
4. ಈ ಜ್ಞಾನಮಾರ್ಗದಲ್ಲಿ ಸೇವೆಯನ್ನು ಮಾಡಬೇಕು.

ಪತ್ರಿಯವರನ್ನು ನೀವು ಗಮನಿಸಿದ್ದರೆ ಅವರು ಯಾವುದೇ ಸಮಯದಲ್ಲಾದರೂ ಪ್ರತಿಕ್ಷಣವೂ ತಾನು ದೇಹವೆಂಬುದಾಗಿ ಜೀವಿಸುತ್ತಿರಲಿಲ್ಲ. ನಾನು ಒಂದು ಆತ್ಮ ಅನ್ನುವ ಹಾಗೆ ಅವರ ವರ್ತನೆ ಇರುತ್ತಿತ್ತು. ಅವರು ಆತ್ಮಕ್ಕೆ ಹೆಚ್ಚು ಪ್ರಿಯಾರಿಟಿ ಕೊಡುತ್ತಿದ್ದರು. ಭೋಗಗಳಿಗೆ ಯಾವತ್ತೂ ಪ್ರಿಯಾರಿಟಿ ಕೊಟ್ಟವರಲ್ಲ. ಇದ್ದರೆ ಎಸಿಯಲ್ಲಿ ಮಲಗುತ್ತಾರೆ. ಇಲ್ಲದಿದ್ದರೆ ಹೊರಗೆ ಬೇಕಂದರೂ ಮಲಗುತ್ತಾರೆ. ಅವರಿಗೆ ಎಸಿ ಆದರೂ ಹೊರಗೆ

ಆದರೂ ಎರಡೂ ಒಂದೇ. ಯಾರೇ ಆಗಲಿ ಸತ್ಯವನ್ನು ಅನುಭವಕ್ಕೆ ತಂದುಕೊಂಡು, ಪೂರ್ಣ ಜ್ಞಾನವನ್ನು ಹೊಂದಿ, ಎಲ್ಲರಿಗೂ ಜ್ಞಾನ ಬೋಧನೆಯನ್ನು ಮಾಡುತ್ತಾ ಇದ್ದರೆ ಸತ್ಯ ಲೋಕಕ್ಕೆ ಸೇರಿಕೊಳ್ಳುತ್ತಾರೆ.

ಹೀಗೆ ಮೇಲಕ್ಕೆ ಹೋದ ನಂತರ ನಡೆಯುವುದನ್ನು ನಾವು ಸೂಕ್ಷ್ಮವಾಗಿ ತಿಳಿದುಕೊಳ್ಳೋಣ. ಅದಕ್ಕಾಗಿಯೇ ನಾವು ಭೀಮ ವರಂನಲ್ಲಿ ಮೂರು ದಿನಗಳ ಕ್ಲಾಸ್ಸುಗಳನ್ನು ಇಟ್ಟು ಈ ಜ್ಞಾನವನ್ನೆಲ್ಲ ಬೋಧಿಸುತ್ತಾ ಇದ್ದೇವೆ.

## ಪಾಪವನ್ನು ಮಾಡಿದವರು ಯಾವ ಲೋಕಕ್ಕೆ ಹೋಗ್ತಾರೆ?

ಇದಕ್ಕೆ ಹಿಂದೆ ನಾವು ತುಂಬಾ ವಿಷಯಗಳನ್ನು ತಿಳಿದುಕೊಂಡಿದ್ದೇವೆ. ಆದರೆ ಪಾಪ ಮಾಡಿದವರು ಯಾವ ಲೋಕಕ್ಕೆ ಹೋಗ್ತಾರೆ? ಪುಣ್ಯ ಮಾಡಿದವರು ಯಾವ ಲೋಕಕ್ಕೆ ಹೋಗ್ತಾರೆ? ಮತ್ತೆ ಧ್ಯಾನ ಮಾಡಿದವರು ಯಾವ ಲೋಕಕ್ಕೆ ಹೋಗ್ತಾರೆ? ಶ್ರೇಷ್ಠ ಶ್ರೇಷ್ಠ ಕಾರ್ಯಗಳನ್ನು ಮಾಡಿ ಮತ್ತು ಸೇವೆ ಮಾಡಿದವರು ಯಾವ ಲೋಕಕ್ಕೆ ಹೋಗ್ತಾರೆ?ಇವೆಲ್ಲ ಕೂಡ ನಾವು ತಿಳಿದುಕೊಳ್ಳೋಣ.

ಅಂದ್ರೆ ಅಲ್ಲಿ ಹೋದ ನಂತರ ಆ ಲೋಕದಲ್ಲಿ ಏನು ನಡೆಯುತ್ತಿದೆ ಅನ್ನೋದನ್ನ ಸ್ವಲ್ಪ ತಿಳಿದುಕೊಳ್ಳೋಣ ಏಕೆಂದ್ರೆ ? ಇದೆಲ್ಲವನ್ನು ತಿಳಿದುಕೊಳ್ಳ ಬೇಕು. ಸ

ಆತ್ಮವಾದ ನಮ್ಮಲ್ಲಿ 7 ಶರೀರಗಳು ಇವೆ ಅಂತ ಪತ್ರಿಜೀಯವರು ಹೇಳಿದ್ದಾರೆ. ಅದರಿಂದ ಅವುಗಳ ಬಗ್ಗೆ ತಿಳಿದುಕೊಳ್ಳೋಣ. ಹಾಗೆ ಈ ಸೃಷ್ಟಿ ಯಲ್ಲಿರುವ ಲೋಕಗಳ ಬಗ್ಗೆ ಕೂಡ ತಿಳಿದುಕೊಳ್ಳೋಣ. ಆಗಲೇ ನಮಗೆ ಮರಣದ ನಂತರ ನಡೆಯುವುದು ಅರ್ಥವಾಗುತ್ತದೆ.

ಆದ್ದರಿಂದ ಮೊದಲು 7 ಶರೀರಗಳ ಬಗ್ಗೆ ತಿಳಿದುಕೊಳ್ಳೋಣ. ಮಾನವನಿಗೆ

1.ಸ್ಥೂಲ ಶರೀರ, 2. ಪ್ರಾಣಮಯ ಶರೀರ, 3. ಸೂಕ್ಷ್ಮ ಶರೀರ, 4. ಕಾರಣ ಶರೀರ, 5. ಮಹಾಕಾರಣ ಶರೀರ, 6. ವಿಶ್ವಮಯ ಶರೀರ, 7. ನಿರ್ವಾಣಮಯ ಶರೀರ ಅಂತ 7 ಶರೀರಗಳು ಇವೆ.

ಹಾಗೆ ಸೃಷ್ಟಿಯಲ್ಲಿ 7 ಲೋಕಗಳು ಇವೆ

1. ಭೂಲೋಕ, 2. ಬುವರ್ ಲೋಕ,3. ಸುವರ್ರಲೋಕ, 4.ಜನ ಲೋಕ, 5 ಮಹಾಲೋಕ, 6. ತಪೋಲೋಕ,7. ಸತ್ಯಲೋಕ ಅಂತ

7 ಲೋಕಗಳು ಇವೆ.

ಇಲ್ಲಿ ನೀವು ನೆನಪಿಟ್ಟುಕೊಳ್ಳಬೇಕು ಸ್ಥೂಲ ಶರೀರ, ಪ್ರಾಣಮಯ ಶರೀರ, ಎರಡೂ ಸತ್ತ ಮೇಲೆ ಭೂಲೋಕದಲ್ಲೇ ಉಳಿಯುತ್ತದೆ.

ಸೂಕ್ಷ್ಮ ಶರೀರ ಅಂದ್ರೆ ಮನೋಮಯ ಶರೀರವು, ಭುವರ್ ಲೋಕಕ್ಕೆ ಆಗ್ಲಿ ಸುವರ್ ಲೋಕಕ್ಕೆ ಆಗ್ಲಿ ಮಾಡಿದ ಕರ್ಮದ ಅನುಸಾರ ಹೋಗುತ್ತಾರೆ. ನಾಲ್ಕನೆಯದು ಕಾರಣ ಶರೀರವು ಜನಲೋಕಕ್ಕೆ ಸೇರಿಕೊಳ್ಳುತ್ತೇವೆ. ಐದನೇದು ಅವನ ಮಹಾಕಾರಣ ಶರೀರವು ಮಹಾ ಲೋಕಕ್ಕೆ ಸೇರಿಕೊಳ್ಳುತ್ತವೆ. ಆರನೆಯದು ಅವನ ವಿಶ್ವಮಯ ಶರೀರವು ತಪೋಲೋಕಕ್ಕೆ ಸೇರಿಕೊಳ್ಳುತ್ತವೆ. ಏಳನೆಯದು ನಿರ್ವಾಣಮಯ ಶರೀರವು ಸತ್ಯಲೋಕಕ್ಕೆ ಸೇರಿಕೊಳ್ಳುತ್ತವೆ.

ಇಲ್ಲಿ ನೀವು ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ ಜನಲೋಕಕ್ಕೆ ಮುಂದೆ ಕೆಳಗಡೆ ಮೂರು ಲೋಕಗಳು ಇವೆ. ಜನಾಲೋಕಕ್ಕೆ ಮೇಲೆ ಮೂರು ಲೋಕಗಳು ಇವೆ. ಮಧ್ಯದಲ್ಲಿ ಜನಲೋಕ ಇದೆ. ಅಂದ್ರೆ ಜನ ಲೋಕದ ಕೆಳಗಡೆ ಮೂರು ಲೋಕಗಳು, ಭೂಲೋಕ, ಬುವರ್ ಲೋಕ ,ಸುವರ್ರ ಲೋಕಗಳಿವೆ,ಜನ ಲೋಕದ ಮೇಲೆ ಮಹಾಲೋಕ, ತಪೋಲೋಕ, ಸತ್ಯಲೋಕಗಳಿವೆ.

ಹೀಗೆ ನಾವು ಹೇಳಿಕೊಳ್ಳುವುದಕ್ಕೆ ಕಾರಣ ಜನಲೋಕದಲ್ಲಿ ಒಂದು ವಿಶೇಷತೆ ಇದೆ.

ಮೊಟ್ಟ ಮೊದಲಿಗೆ ಭೂಲೋಕದಲ್ಲಿ ಹುಟ್ಟುವ ಆತ್ಮ ಅವನು ನಾವು ಸತ್ತ ಮೊದಲ ದಿನ ಸ್ಥೂಲ ಶರೀರವನ್ನು ಭೂಲೋಕದಲ್ಲೇ ಬಿಟ್ಟು ಬಿಡುತ್ತೇವೆ. ಇನ್ನು ಎರಡನೇದು ಅವನ ಪ್ರಾಣಮಯ ಶರೀರವನ್ನು ಭೂಲೋಕದಲ್ಲಿ ಮೂರನೆ ದಿನ ಬಿಟ್ಟು ಹೋಗುತ್ತೇವೆ.

ಆಗ ಆತ್ಮವಾದ ನಾವು ಸೂಕ್ಷ್ಮ ಶರೀರದಲ್ಲಿ ಭುವರ್ ಲೋಕದಲ್ಲಿ ಆಗಲಿ ಸುವರ್ ಲೋಕದಲ್ಲಿ ಆಗಲಿ ಸೇರಿಕೊಳ್ಳುತ್ತೇವೆ. ಈ ಎರಡು ಲೋಕಗಳಲ್ಲಿ ಯಾವ ಲೋಕಕ್ಕೆ ನಮಗೆ ಅರ್ಹತೆ ಇರುತ್ತೋ ಆ ಲೋಕಕ್ಕೆ ಸಹಾಯಕರು ತೆಗಕೊಂಡು ಹೋಗಿ ಬಿಟ್ಟುಬಿಡುತ್ತಾರೆ. ಅರ್ಹತೆ ಅನ್ನುವುದು ನಾವು ಈ ಹಿಂದೆ ಮಾಡಿಕೊಂಡಿರುವ ಕರ್ಮಗಳ ಅನುಸಾರ ಇರುತ್ತದೆ.

ಭೂಲೋಕದಲ್ಲಿ ವಿಧವಿಧವಾದ ಕರ್ಮಗಳನ್ನು ಮಾಡಿದವರು ಇರುತ್ತಾರೆ. ಈ ಸೃಷ್ಟಿಯಲ್ಲಿ ಸ್ವಲ್ಪ ಜನ ಪಾಪಗಳನ್ನು ಮಾಡುತ್ತಾರೆ, ಸ್ವಲ್ಪ ಜನ ಪಾಪಗಳು ಪುಣ್ಯಗಳನ್ನು ಎರಡನ್ನು ಮಾಡುತ್ತಾರೆ, ಸ್ವಲ್ಪ ಜನ ಪುಣ್ಯವನ್ನೇ ಮಾಡುತ್ತಾರೆ, ಹಾಗೆ ಮಾಡಿರುವ ಕಾರಣ ಯಾರಿಗೆ ತಮೋಗುಣ, ರಜೋಗುಣ ದಾಟಿ ಸಾತ್ವಿಕ ಗುಣಕ್ಕೆ ಬರುವವರು ಅವರು ಪಾಪಗಳನ್ನು ಮಾಡುವುದಿಲ್ಲ –ಪುಣ್ಯವನ್ನೇ ಮಾಡುತ್ತಾರೆ. ಅಂದ್ರೆ ಒಳ್ಳೆ ಕೆಲಸವನ್ನೇ ಮಾಡುತ್ತಾರೆ. ಈ ಎರಡು ಗುಣಗಳನ್ನು ದಾಟಿ ಅಂದ್ರೆ ತಮೋಗುಣ ದಾಟಿ

ಸಾತ್ವಿಕ ಗುಣಕ್ಕೆ ಬರ್ತಾರೆ ಅವರು ಪಾಪಗಳನ್ನು ಮಾಡುವುದಿಲ್ಲ ಪುಣ್ಯವನ್ನೇ , ಒಳ್ಳೆಯ ಕೆಲಸವನ್ನೇ ಮಾಡುತ್ತಾರೆ.

ಅದಕ್ಕೆ ನಾನು ಧ್ಯಾನವನ್ನು ಮಾಡಿದವರು ಕನಿಷ್ಠ ಆ ಸ್ಥಾಹೀಗೆ ಬನ್ನಿ ಅಂತ ಹೇಳ್ತೀನಿ . ಸಾತ್ವಿಕ ಗುಣ ಅಂದ್ರೆ ಮನಸ್ಸು ಶುದ್ದಿ ಮಾಡಿಕೊಳ್ಳುತ್ತೀವಿ. ಮನಸ್ಸು ಶುದ್ದಿ ಆದ್ರೆ ಸಾತ್ವಿಕ ಗುಣಕ್ಕೆ ಬರ್ತಾರೆ. ಚೆನ್ನಾಗಿ ಶುದ್ದಿ ಮಾಡಿಕೊಂಡರೆ ಅವರು ಶುದ್ಧ ಸಾತ್ವಿಕ ಸ್ಥಿತಿಗೆ ಹೋಗ್ತಾರೆ.

ಅದರಿಂದ ಒಬ್ಬನು ಪಾಪ ಮಾಡಿಕೊಂಡಿದ್ದಾನೆ ಅಂದುಕೊಳ್ಳೋಣ. ಸುವರ್ರಲೋಕಕಾಗಲಿ ಅಥವಾ ಭುವರ್ರಲೋಕಕಾಗಲಿ ತೆಗೆದುಕೊಂಡು ಹೋಗಿ ಅಲ್ಲಿ ಬಿಟ್ಟುಬಿಡುತ್ತಾರೆ. ಈ ಭುವರ್ರಲೋಕದಲ್ಲಿ ಕೂಡ ಎಂಟು ಭಾಗಗಳು ಇವೆ ಅಂತ ಹೇಳ್ತಾರೆ ಪತ್ರಿ ಸಾರ್. ಅದರಲ್ಲಿ ಮೇಲೆ ಭಾಗಗಳು ನಾಲ್ಕು ಕೆಳಗಡೆ ಭಾಗಗಳು ನಾಲ್ಕು ಇರುತ್ತದೆ. ಮೇಲೆ ಭಾಗಗಳಲ್ಲಿ ಪಾಪಗಳು, ಪುಣ್ಯಗಳು ಮಾಡಿದವರನ್ನು ಕರೆದುಕೂಂಡು ಹೋಗುತ್ತಾರೆ.

ಯಾರು ಸಾತ್ವಿಕ ಗುಣದಲ್ಲಿ ಬಂದು ಎಲ್ಲಾ ಪುಣ್ಯಗಳನ್ನು ಮಾಡುತ್ತ ಸುವರ್ರಲೋಕಕ್ಕೆ ಅಂದ್ರೆ ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ.

ಭೂಲೋಕಕ್ಕೆ ದೊಡ್ಡದಾಗಿ ಭುವರ್ರಲೋಕ ಇದೆ. ಹಾಗೆ ಸುವರ್ರಲೋಕ ಕೂಡ ತುಂಬಾ ದೊಡ್ಡದು. ಈ ಭೂಲೋಕದಲ್ಲಿ ನಾವು ಅಂದುಕೊಂಡ ಹಾಗೆ ಸಿಗುವುದಿಲ್ಲ, ಈ ಒಂದನ್ನು ಬಿಟ್ಟು ಬೇರೆ ಲೋಕಗಳು ಹೇಗೆ ಇರುತ್ತವೆ ನಾವು ಒಂದು ಸಾರಿ ಅರ್ಥಮಾಡಿಕೊಳ್ಳಬೇಕು. ಭಗವದ್ಗೀತೆಯಲ್ಲಿ 9ನೆಯ ಅಧ್ಯಾಯ 21ನೇ ಶ್ಲೋಕದಲ್ಲಿ ಏನು ಹೇಳಿದ್ದಾರೆ ಅಂದರೆ?

ಶ್ಲ್ ಟಟ ತೇ ತಂ ಭುಕ್ತ್ವಾ ಸ್ವರ್ಗಲೋಕಂ

ವಿಶಾಲಂ

ಕ್ಷೀಣೇ ಪುಣ್ಯೇ ಮತ್ರ್ಯಲೋಕಂ ವಿಶಂತಿ ಟ

ಏವಂ ತ್ರಯಾಧರ್ಮಮನುಪ್ರಪನ್ನಾ

ಗತಾಗತಂ ಕಾಮಕಾಮಾ ಲಭಂತೇ ಟಟ 21 ಟಟ

ತಾತ್ಪರ್ಯ:–ಅವರು ಆ ವಿಶಾಲವಾದ ಸ್ವರ್ಗಸುಖವನ್ನು ಅನುಭವಿಸಿ ಪುಣ್ಯ ಫಲಗಳೆಲ್ಲಾ ಮುಗಿದ ನಂತರ ಮೃತ್ಯುಲೋಕವನ್ನು ಪುನಃ ಪಡೆಯುತ್ತಾರೆ. ಈ ರೀತಿ ಸ್ವರ್ಗಕ್ಕೆ ಸಾಧನ ರೂಪಿಯಾದ ಮೂರು ವೇದಗಳಲ್ಲಿಯೂ ಹೇಳಲಾಗಿರುವ ಸಕಾಮ ಕರ್ಮಗಳನ್ನೇ ಆಶ್ರಯಿಸಿರುವವರು ಮತ್ತು ಭೋಗಾ ಪೇಕ್ಷೆಯುಳ್ಳವರು ಪದೇ–ಪದೇ ಜನನ–ಮರಣಗಳನ್ನೂ ಪಡೆಯುತ್ತಾರೆ. ಅರ್ಥಾತ್ ಪುಣ್ಯದ ಪ್ರಭಾವದಿಂದ ಸ್ವರ್ಗವನ್ನು ಸೇರುತ್ತಾರೆ ಮತ್ತು ಪುಣ್ಯಫಲ ಮುಗಿದ ಮೇಲೆ ಮೃತ್ಯು ಲೋಕಕ್ಕೆ ಮರಳುತ್ತಾರೆ. ಟ ಟ21 ಟಟ

ಅಂದ್ರೆ ವಿಶಾಲವಾದ ಸ್ವರ್ಗ ಲೋಕ ಅಂದ್ರೆ ಎಷ್ಟು ದೊಡ್ಡದಾಗಿ ಇದೆ ಅಂತ ಹೇಳುತ್ತಾರೆ. ಹಾಗೆ ಸುವರ್ರಲೋಕ. ಅಂದ್ರೆ ಯಾವುದು ನಮ್ಮ ಭೂಲೋಕದಲ್ಲಿ ಸ್ವಲ್ಪ ದೇಶಗಳು ಅಂತ ಅನ್ಕೊಳ್ತೀವಿ  ಅದು ಅಲ್ಲಾ. ಎಷ್ಟು ಇರುತ್ತೆ ಅಂತಾನ್ನೂಅಲ್ಲ

ಭೂಲೋಕದಲ್ಲಿರುವ ಮಾನವನ ಆತ್ಮಗಳು ಎಷ್ಟು ಇರುತ್ತವೆ? ಸುಮಾರು ಏಳು ನೂರು ಕೋಟಿ ಮೇಲೆ ಇರುತ್ತದೆ. ಹಾಗೆ ಪ್ರತಿ ಲೋಕದಲ್ಲಿ ನೂರಾರು,  ಕೋಟಿ ಮಾನವ ಆತ್ಮಗಳು ಇರುತ್ತವೆ. ಅವರವರ  ಅರ್ಹತೆಯ ಅನುಸಾರ ಆ ಲೋಕಗಳಿಗೆ ಹೋಗುತ್ತಾರೆ.

ಭುವರ್ರ ಲೋಕಕ್ಕೆ ಸೇರಿದ ಮೇಲೆ

ಏನು ನಡೆಯುತ್ತದೆ? ಅವರವರ ಆತ್ಮನುಸಾರ  ವಿಶ್ರಾಂತಿಯನ್ನು ಪಡೆಯುತ್ತದೆ. ಇನ್ನು ಅಲ್ಲಿ ಸ್ತ್ರೀ ಪುರುಷ ಭೇದಗಳು  ಇರುವುದಿಲ್ಲ. ಮೇಲೆ ಲೋಕದಲ್ಲಿ ಇರುವುದೆಲ್ಲವೂ ಆತ್ಮಗಳೇ ಯಾಕೆ ಎಂದರೆ

ನಿಜ ಜೀವನದಲ್ಲಿ ಅನೇಕರು ಅನೇಕ ಕಷ್ಟಗಳನ್ನು ಎದುರಿಸಿದ್ದಾರೆ. ಅವರು ತುಂಬಾ ಬಳಲುತ್ತಿದ್ದರು. ಸುಸ್ತಾಗಿದೆ. ಆದ್ದರಿಂದ, ಅಲ್ಲಿಗೆ ಹೋದ ನಂತರ, ಅವರು ಮೊದಲು ವಿಶ್ರಾಂತಿ ಪಡೆಯುತ್ತಾರೆ.

ವಿಶ್ರಾಂತಿ ನಂತರ, ಅವರು ಸ್ವಲ್ಪ  ಎಚ್ಚರಗೊಂಡು ಹಿಂದೆ ಮಾಡಿದ ಎಲ್ಲಾ ಕೆಲಸಗಳನ್ನು ನೆನಪಿಸಿಕೊಳ್ಳುತ್ತಾನೆ. ನಾನೇನು ಮಾಡಿದೆ  ಎಷ್ಟು ಪಾಪಗಳನ್ನು ಮಾಡಿದ್ದೀನಿ? ನಾನು ಎಷ್ಟು ತಪ್ಪುಗಳನ್ನು ಮಾಡಿದ್ದಿನಿ? ಎಷ್ಟು ಹಿಂಸೆ ಮಾಡಿದ್ದಿನಿ?ಎಷ್ಟು ಕೋಳಿಗಳನ್ನು ಕೊಂದಿದ್ದೇನೆಯೇ? ನಾನು ಎಷ್ಟು ಮೇಕೆಗಳ ರಕ್ತವನ್ನು ಕುಡಿದಿದ್ದೇನೆ?

ಅವರು ಮಾಡಿದ ಎಲ್ಲಾ ಕೆಲಸಗಳನ್ನು ಅವರು ನೆನಪಿಸಿಕೊಳ್ಳುತ್ತಾರೆ. ಹಾಗೆ ಒಂದೊಂದೇ ನೆನಪಿಸಿಕೊಂಡು  ಫೀಲ್ ಮಾಡ್ಕೋತಾರೆ.

ಅವುಗಳನ್ನ ಹಾಗೆ ಹಿಂಸಿಸಿದ್ದೇನೇ, ನನಗೇ ಹಾಗಾದರೆ ನನ್ನ ಪರಿಸ್ಥಿತಿ ಏನು? ಎಂದು ಯೋಚಿಸಿದಾಗ ಅವರಿಗೂ ಅದೇ ರೀತಿಯ ಹಿಂಸೆ ಅನಿಸುತ್ತದೆ. ಆ ಜೀವನದಲ್ಲಿ ಮಾಡಿದ್ದನ್ನು ಒಂದೊಂದು ಜ್ಞಾಪಿಸಿಕೊಳ್ಳುತ್ತಾ ಹೀಗೆ ಏಕೆ ಮಾಡಿದ್ದೇನೆ? ಅಂದುಕೊಳ್ಳುತ್ತಾರೆ. ಹಾಗೆ ಯಾವಾಗ ಅನ್ಕೊಳ್ತಾ ರು! ಆ ನರಕವನ್ನು ಅನುಭವಿಸ್ತಾರೆ. ಕೋಳಿ ಜಾಗದಲ್ಲಿ  ಅವರು ಇದ್ದು.  ಆ ನರಕವನ್ನು ಅನುಭವಿಸುತ್ತಾರೆ. ಈ ಎಲ್ಲವನ್ನೂ ಅನುಭವಿಸುತ್ತಾ  ಇರುತ್ತಾರೆ. ಹಾಗೆ ಯೋಚಿಸಿದರೆ ಅದು ಆಗುತ್ತೆ. ಹಾಗೆ ಅವರು ಏನು ತಿನ್ನಲು  ಬಯಸುತ್ತಾರೆ ಅಥವಾ ಮಾಡಲು ಬಯಸುತ್ತಾರೆ, ಅವೆಲ್ಲವೂ ಸ್ವಯಂಚಾಲಿತವಾಗಿ ಅಲ್ಲಿಗೆ ಬರುತ್ತದೆ.

ಇಷ್ಟೆಲ್ಲ ಆದ ಮೇಲೆ ಬಹಳ ಸಮಯದ ನಂತರ ಹಿಂದೆ ಬಿಟ್ಟು ಹೋದ ಇಷ್ಟಾರ್ಥಗಳೆಲ್ಲವೂ ಈಡೇರುತ್ತವೆ. ಎಲ್ಲಾ ಮುಗಿದ ಮೇಲೆ, ಏನು ಮಾಡಬೇಕು? ಅಂದರೆ ಏನೂ ಇರುವುದಿಲ್ಲ. ಕಲ್ಪಿಸಲಾಗಿದೆ. ಎಲ್ಲವೂ ಮುಗಿಯಿತು. ಇದು ಸ್ವಲ್ಪ ಸಮಯ ತೆಗೆದುಕೊಳ್ಳುತ್ತದೆ. ಎಲ್ಲಾ ಆಸೆಗಳು ತೃಪ್ತಿಗೊಂಡಾಗ, ಮನೋಮಯ ಶರೀರ ಅಂದರೆ ಸೂಕ್ಷ್ಮ ಶರೀರ ಕುಸಿಯುತ್ತದೆ. ಈ ಮನೋಮಯ ಶರೀರ  ಪತನಗೊಂಡ ನಂತರ, ಉಳಿದಿರುವುದು ಕಾರಣ ಶರೀರ.

ಮತ್ತೊಮ್ಮೆ ತಿಳಿದುಕೊಳ್ಳೋಣ.  ಭೂಮಿಯ ಮೇಲೆ ಮೊದಲ  ದಿನ ಸ್ಥೂಲ ಶರೀರ ಬಿಟ್ಟು ಹೋಗುತ್ತದೆ. ಮೂರನೇ ದಿನ ಪ್ರಾಣಮಾಯ  ಶರೀರ ಬಿಟ್ಟು ಹೋಗುತ್ತದೆ . ಹಾಗೆಯೇ ಸೂಕ್ಷ್ಮ ಶರೀರ ಅಂದರೆ ಮನೋಮಯ ಶರೀರ  ಭುವರ್ ಲೋಕದಲ್ಲಿರವ ಎಲ್ಲಾ ಆಸೆಗಳನ್ನು ಪೂರೈಸಿದ ನಂತರ ಬೀಳುತ್ತದೆ. ಏಕೆಂದರೆ ಆಗ ಒಂದು ಕಾರಣಿಕ ಶರೀರವಿತ್ತು, ಆ ಕಾರಣಿಕ ಶರೀರದೊಡನೆ  ಜನಲೋಕವನ್ನು ತಲುಪುತ್ತಾನೆ. ಸೂಕ್ಷ್ಮ ಶರೀರದಿಂದ ಜನಲೋಕಕ್ಕೆ ಹೋಗಲಿಲ್ಲ. ಅವರು ಭೌತಿಕ ದೇಹದೊಂದಿಗೆ ಭೂಮಿಯನ್ನು ತಲುಪಲಿಲ್ಲ. ಸ್ಥೂಲ ಶರೀರವು ಭೂಲೋಕದಲ್ಲೇ ಇರುತ್ತದೆ.ಸೂಕ್ಷ್ಮ ಶರೀರವು ಭುವರ್ ಲೋಕದಲ್ಲಿ ಸೇರಿಕೊಳ್ಳುತ್ತದೆ.ಅಲ್ಲಿ ಸೂಕ್ಷ್ಮ ಶರೀರವು ಕೂಡ ಬಿಟ್ಟುಬಿಡುತ್ತದೆ ಕಾರಣ ಶರೀರ ಜನಲೋಕಕ್ಕೆ ಸೇರಿಕೊಳ್ಳುತ್ತದೆ.

ಹಾಗೆಯೇ ಕೆಲವರು ಪಾಪ ಮತ್ತು ಪುಣ್ಯಗಳನ್ನು ಮಾಡುತ್ತಾರೆ. ಅವರನ್ನ ಭುವರ್ ಲೋಕದ ಮೇಲಿನ ಲೋಕಗಳಿಗೆ ಕರೆದೊಯ್ಯಲಾಗುತ್ತದೆ.  ಅಲ್ಲಿ ಕೂಡ ಮೊದಲು ವಿಶ್ರಾಂತಿಯನ್ನು  ಪಡೆದು ಕೆಲವು ಪಾಪಗಳನ್ನು ಮಾಡಿದನು, ಆದ್ದರಿಂದ ಅವನು ಅವುಗಳನ್ನು ಮೊದಲಿನಂತೆ ಕಲ್ಪಿಸಿಕೊಳ್ಳುತ್ತಾನೆ, ಆ ತಪ್ಪುಗಳನ್ನು ನೆನಪಿಸಿಕೊಳ್ಳುತ್ತಾ , ನಾನು ಏನಾದರೂ ಅನುಭವಿಸಬೇಕು ಎಂದು ಅವನು ಭಾವಿಸಿದರೆ, ಅದಕ್ಕೆ ತಕ್ಕಂತೆ ಆ ನರಕ  ಅನುಭವಿಸುತ್ತಾನೆ. ಹಾಗೆ ಇಷ್ಟಾರ್ಥಗಳನ್ನು ಈಡೇರಿಸುಕ್ಕೂಳತ್ತ ಅಲ್ಲಿ ಇರುತ್ತಾರೆ.

ಆ ಪಾಪಕರ್ಮಗಳೆಲ್ಲ ಮುಗಿದ ಮೇಲೆ ಪುಣ್ಯಕರ್ಮಗಳಿಂದ ಇವರು ಸುವರ್ರಲೋಕಕ್ಕೆ ತಲುಪುತ್ತಾರೆ. ಮೇಲಾಗಿ ಯಾರು ಸಾತ್ವಿಕ ಗುಣವನ್ನು ಪಡೆದು ಮನಸ್ಸನ್ನು ಶುದ್ಧಿ ಮಾಡಿಕೊಳ್ಳುವರು. ಅವರು ಪಾಪಗಳನ್ನು ಮಾಡುವುದಿಲ್ಲ. ಪುಣ್ಯಗಳನ್ನೆ ಮಾಡುತ್ತಾರೆ. ಅವರು ಕೂಡ ಸುವರ್ರಲೋಕವನ್ನು ಸೇರಿಕೊಳ್ಳುತ್ತಾರೆ.

ಸುವರ್ರಲೋಕ ಎಂದರೆ ಸ್ವರ್ಗ ಲೋಕ ಮತ್ತು ಅದ್ಭುತವಾಗಿರುತ್ತದೆ. ಅನೇಕ ರಮಣೀಯವಾದ ದೃಶ್ಯಗಳು, ಪಕ್ಷಿಗಳ ಚಿಲಿಪಿಲಿ, ಸುಂದರವಾದ ಮರಗಳು, ಹೂವುಗಳು, ಸಸ್ಯಗಳು ಬಹಳ ಸುಂದರ ಮತ್ತು ಆಹ್ಲಾದಕರವಾಗಿವೆ. ಅದನ್ನು ತಲುಪಿದ ನಂತರ, ಮೊದಲು ವಿಶ್ರಾಂತಿ ಪಡೆಯುತ್ತಾರೆ. ತಮ್ಮ ಉಳಿದಿರುವ ಆಸೆಗಳನ್ನು ಒಂದೊಂದಾಗಿ ಕಲ್ಪಿಸಿಕೊಂಡರೆ ಅವೆಲ್ಲವೂ ಈಡೇರುತ್ತವೆ. ಅನೇಕ ದಿನಗಳು ಅಂದರ್ರೆ ಇಷ್ಟೇ ವರ್ಷಗಳು ಎನ್ನುವ ಯಾವುದೇ ಮಿತಿಯಿಲ್ಲ, ಎಷ್ಟು ವರ್ಷಗಳು ಬೇಕಾದರೂ ಇರಬಹುದು ಇಲ್ಲಿ ಯಾರು ಬೇಡ ಅನ್ನುವವರು  ಇಲ್ಲಾ. ಅವರ ಇಷ್ಟ ವರ್ಷಾನುಗಟ್ಟಲೆ ಹೀಗೇ ಇರ್ತಾರೆ ಅನ್ನಿಸುತ್ತೆ. ಹಾಗೆ ಅವರಿಗಿರುವ ಎಲ್ಲಾ ಆಸೆಗಳನ್ನು ಪೂರೈಸಿದ ನಂತರ ಮನೋಮಯ ಶರೀರವು  ಬೀಳುತ್ತದೆ.

ಭೌತಿಕ ಶರೀರ ಪತನವಾದರೆ ಪ್ರಾಣಮಯ ಶರೀರ ಉಳಿಯುತ್ತದೆ.ಅದು ಬಿದ್ದರೆ ಮನೋಮಯ ಶರೀವು ಇರುತ್ತದೆ ಹಾಗೆ ಮನೋಮಯ ಶರೀರ ಪತನವಾದರೆ ಕಾರಣ ಶರೀರವು ಇರುತ್ತದೆ. ಈ ಶರೀರಗಳು ಒಂದಕ್ಕಿಂತ ಒಂದು ತುಂಬಾ ಸೂಕ್ಷ್ಮವಾಗಿದೆ ಅಂತ ತಿಳ್ಕೊತ್ತಿವಿ. ಎಷ್ಟು ಸೂಕ್ಷ್ಮ ಸ್ಥಿತಿಗೆ ಸೇರ್ಕೊಳ್ತಾರೆ ಅಂದ್ರೆ ಶ್ರೇಷ್ಠ ಲೋಕಗಳಿಗೆ ಸೇರ್ಕೊಳ್ತಾರೆ ಹಾಗೆ ಕಾರಣ ಲೋಕಕ್ಕೆ ಅಂದರೆ ಜನ ಲೋಕಕ್ಕೆ ಹೋಗ್ತಾರೆ.

ಜನ ಲೋಕವು ತುಂಬಾ ದೊಡ್ಡದಾಗಿದೆ. ಎಷ್ಟು ದೊಡ್ಡದಾಗಿದೆ ಅಂದರೆ ಯಾರ ಕಲ್ಪನೆಗೂ ಮೀರಿದ್ದು, ಅಷ್ಟು ದೊಡ್ಡದಾಗಿದೆ. ಹಾಗೆಯೇ ಪಾಪಗಳನ್ನು ಮಾಡುವವನೂ ಸಹ ಭುವರ್ರಲೋಕದಿಂದ ಜನಲೋಕಕ್ಕೆ ಬರುತ್ತಾರೆ.ಅಲ್ಲಿ ಉನ್ನತ

ಲೋಕಗಳಿಂದ ಮಾಸ್ಟರ್ಸ್ ಕೌನ್ಸೆಲಿಂಗ್ ಮಾಡುತ್ತಾರೆ.

ಉನ್ನತ ಲೋಕ ಎಂದರೆ ಮಹಾಲೋಕ, ತಪೋಲೋಕ, ಸತ್ಯಲೋಕ. ಈ ಲೋಕಗಳಲ್ಲಿ ವಾಸಿಸುವವರನ್ನು ಉನ್ನತ ಲೋಕಗಳ ವಾಸಿಗಳು ಎಂದು ಕರೆಯಲಾಗುತ್ತದೆ. ಇವರು ಕಾರಣ ಲೋಕದಿಂದ ಬಂದವರಿಗೆ ಕೌನ್ಸಿಲಿಂಗ್ ಮಾಡ್ತಾರೆ. ಅವರು ಏನು ಮಾಡ್ತಾರೆ ಅಂದ್ರೆ? ಭೂಲೋಕಕ್ಕೆ ಹೋಗಿ ಏನು ಮಾಡಲಿ? ಏನು ಮಾಡುತ್ತೀಯ? ಹೋಗಿದ್ದು ಯಾವುದಕ್ಕೋಸ್ಕರ? .

ನಿನ್ನ ಜೀವನದಲ್ಲಿ ನೀವೂ ಏನು ಮಾಡಬೇಕು ಅದನ್ನು ಮರೆತು ಬಿಟ್ಟಿದ್ದೀರಿ,ನಿಮ್ಮ ಸಮಯವನ್ನು ವ್ಯರ್ಥ ಮಾಡುತ್ತಿದ್ದೀರಿ. ನಿಮಗೆ ಸಿಕ್ಕ ಅವಕಾಶವನ್ನು ಬಳಸಿಕೊಳ್ಳಲು ನೀವು ತುಂಬಾ ಮೂರ್ಖರು ಎಂದು ಅವರು ಹೇಳುತ್ತಾರೆ.

ಅವರೆಲ್ಲರೂ ಕೇಳುತ್ತಿರುತ್ತಾರೆ. ಇನ್ನೇನು ಮಾಡಬೇಕು? ಅಂತ ಅವರು ಕೇಳುತ್ತಾರೆ. ಮಗು!ನೀವು ಈ ಲೋಕವೇ ಎಂದು ಭಾವಿಸುತ್ತೀರಿ. ಹೆಚ್ಚೇನೂ ಇಲ್ಲ ಅಂತ ಅಂದುಕೊಳ್ಳುತ್ತೇವೆ. ಆದರೆ ಈ ಸೃಷ್ಟಿಯಲ್ಲಿ ಇವುಗಳಿಗಿಂತಲೂ ದೊಡ್ಡ ಲೋಕಗಳಿವೆ. ಆ ಲೋಕಗಳನ್ನು ಸೇರಬೇಕು. ಪಾಪಗಳನ್ನು ಮಾಡುತ್ತ, ಮಾಂಸವನ್ನು ತಿನ್ನುತ್ತ, ಆ ಪ್ರಾಣಿಗಳನ್ನು ಕೊಲ್ಲತ್ತ, ಈ ಕೆಳಗಿನ ಲೋಕಗಳಲ್ಲಿ ತುಂಬಾ ನೋವು ಅನುಭವಿಸುವುದಕ್ಕಿಂತ, ಆ ಮೇಲಿನ ಶ್ರೇಷ್ಠವಾದ ಲೋಕಗಳನ್ನು ತಲುಪಲು ಪ್ರಯತ್ನಿಸಿ. ನಿಮಗೆ ಒಳ್ಳೆಯ ಅವಕಾಶ ಒದಗಿ ಬಂದಿದೆ. ನಿಮಗೆ ದೇಹವನ್ನು ನೀಡಲಾಗಿದೆ. ನಿಮ್ಮ ದೇಹದಿಂದ ನೀವು ಬಹಳಷ್ಟು ಸಾಧಿಸಬಹುದು. ಧ್ಯಾನಸಾಧನೆ ಮಾಡಬಹುದು, ಪುಸ್ತಕಗಳನ್ನು ಓದಬಹುದು ಮತ್ತು ಪ್ರತಿಯೊಬ್ಬರ ಮಾತುಗಳನ್ನು ಕೇಳಬಹುದು. ಸೇವೆಗಳು. ಮಾಡಬಹುದು ಇಷ್ಟೆಲ್ಲಾ ಮಾಡುವುದರಿಂದ ಪುಣ್ಯ ಸಂಪಾದಿಸಿ ಮಹಾ ಲೋಕಗಳನ್ನು ತಲುಪಬಹುದು. ಜ್ಞಾನವನ್ನು ಗಳಿಸಿ ಶ್ರೇಷ್ಠವಂತರಾಗುಬಹುದು. ಆದರೆ ನೀವು ಆ ಕೆಲಸಗಳನ್ನು ಮಾಡುವುದನ್ನು ಬಿಟ್ಟು ಕೆಲಸಕ್ಕೆ ಬಾರದ ಎಲ್ಲ ಕೆಲಸಗಳನ್ನು ಮಾಡಿದ್ದೀರಿ ಇದು ಅರ್ಥಪೂರ್ಣವಾಗಿದೆ ಎಂದು ಅವರು ಹೇಳುತ್ತಾರೆ.

ಹಾಗಾಗಿ ಜನಾಲೋಕದಲ್ಲಿ ಪಾಪಗಳನ್ನು ಮಾಡಿದವರಿಗೆ, ಮತ್ತು ಪುಣ್ಯ ಮಾಡುವವರಿಗೆ ಕೌನ್ಸೆಲಿಂಗ್ ಇರುತ್ತದೆ. ಅವರು ಇನ್ನೇನೂ ಮಾಡುತ್ತಾರೆಂದರೆ ? ನೀವು ಪುಣ್ಯಗಳ ಜೊತೆಗೆ ಪಾಪಗಳನ್ನೂ ಮಾಡಿದ್ದು ಒಳ್ಳೇದು, ಆದರೆ ಪಾಪಗಳನ್ನು ಏಕೆ ಮಾಡಿದಿರಿ? ಈ ಬಾರಿ ಆ ಕೆಲಸಗಳನ್ನು ಮಾಡಬೇಡಿ ಎಂದು ಹೇಳಿತ್ತಾರೆ. ಹಾಗೆಯೇ ಪುಣ್ಯಗಳನ್ನು ಮಾಡಿದವರಿಗೆ ಹೀಗೆ ಹೇಳುತ್ತಾರೆ ಮಗು! ಈ ಪುಣ್ಯಗಳು ಮಾತ್ರವಲ್ಲ, ಇನ್ನೂ ಹೆಚ್ಚಿನ ಪುಣ್ಯಗಳಿವೆ. ನೀವು ಹೆಚ್ಚಿನ ಪುಣ್ಯಗಳನ್ನು ಮಾಡಿದರಿಂದ ಈ ಕೆಳಗಿನ ಲೋಕಕ್ಕೆ ಹೋಗುತ್ತಿದ್ದೀರಿ. ಆ ಮೇಲಿನ ಮತ್ತು ಕೆಳಗಿನ ಲೋಕಗಳನ್ನು ತಲುಪಲು ಸಾಧ್ಯವಾಗಲಿಲ್ಲ. ಆದುದರಿಂದ ಈ ಪುಣ್ಯಗಳಲ್ಲ, ಪುಣ್ಯ ಕರ್ಮಗಳು ಅಲ್ಲ, ಮುಕ್ತಿ ಕರ್ಮಗಳೆಂದರೆ ಆತ್ಮ ಕರ್ಮಗಳು,ಅಂದರೆ ಯಾರು ಈ ಆತ್ಮಕ್ಕೆ ಸೇರಿಕೊಳ್ಳುತ್ತಾರೂ! ಆತ್ಮ ಆದ ನೀವು ಉನ್ನತ ಲೋಕಕ್ಕೆ ಸೇರುವ ಕೆಲಸವನ್ನೇ ಮಾಡಬೇಕು. ಇನ್ನೂ ಧ್ಯಾನ ಮಾಡಬೇಕು, ಜ್ಞಾನವಂತರ ಪುಸ್ತಕಗಳನ್ನು ಓದಬೇಕು, ಆತ್ಮ ಜ್ಞಾನವನ್ನು ಕಲಿಸಬೇಕು. ಸಂದೇಶಗಳನ್ನು ಕೇಳಬೇಕು, ಆತ್ಮಕ್ಕೆ ಸವಾಲುಗಳನ್ನು ಹಾಕಬೇಕು, ಇವೆಲ್ಲವನ್ನು ಮಾಡುತ್ತಾ ನೀನು ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು ಆಗ ನೀವು ಮೇಲೆ ಲೋಕಕ್ಕೆ ಸೇರಿಕೊಳ್ತೀರಾ ಹಾಗಂತ ಅವರು ಹೇಳ್ತಾ ಇದ್ದಾರೆ

ಆಗ ಅವನಿಗೆ ಅರ್ಥವಾಗುತ್ತದೆ. ಅಂತ ಅಂದುಕೊಂಡೆ. ಮತ್ತು ನಾವು ಮೇಲಿನ ಲೋಕಗಳಿಗೆ ಹೋದರೆ ಅದು ಎಷ್ಟು ಶ್ರೇಷ್ಠವಾಗಿರುತ್ತದೆ? ಅವನು ಯೋಚಿಸುತ್ತಾನೆ. ಆಗ ಅವನಲ್ಲಿ ಸ್ವಲ್ಪ ಬದಲಾವಣೆ ಆಗುತ್ತದೆ. ಆದರೆ ಕೆಲವರಿಗೆ ಅರ್ಥವಾಗುವುದಿಲ್ಲ. ಆದರೆ ಕೆಲವು ಜನರು. ನೀವು ಏನು ಹೇಳುತ್ತೀರಿ, ಆಗ ನೀವು ಹೇಳಿದಂತೆಯೇ ನಾವು ಎಲ್ಲವನ್ನೂ ಮಾಡುತ್ತೇವೆ. ಮತ್ತೆ ನಮಗೆ ಅವಕಾಶ ಕೊಡಿ ಎಂದ್ರೆ ದೇಹವನ್ನು ಕೊಡಿ ಅಂತ ಕೇಳುತ್ತಾರೆ. ಇನ್ನೂ ಸ್ವಲ್ಪ ಜನರು ಮತ್ತೊಮ್ಮೆ ಅಲ್ಲಿಗೆ ಹೋದರ ಹಿಂದೆ ಅನುಭವಿಸಿದ ಕಷ್ಟ ನೋವುಗಳನ್ನೆಲ್ಲ ನೆನಪಿಕೊಂಡು ಯಾಕೆ ಅಲ್ಲಿಗೆ ಹೋಗಿ ಇಲ್ಲಾದ ಸಮಸ್ಯೆಗಳು, ಜಗಳಗಳು, ಗಂಡನ ಜಗಳ ಹೆಂಡತಿ ಜಗಳ, ಮಕ್ಕಳೊಂದಿಗೆ ಜಗಳ, ಹಣಕಾಸಿನ ಮುಗ್ಗಟ್ಟು, ಇವೆಲ್ಲವೂ ಇರುತ್ತದೆ ಯಾಕೆ,ಎಂದು ಕೆಲವರು ಯೋಚಿಸುತ್ತಾರೆ. ಹಾಗೆಯೇ ಅಲ್ಲೇ ಉಳಿಯುತ್ತಾರೆ.

ಇಲ್ಲಿ ತಿಳಿಯಬೇಕಾದದ್ದು ಒಂದೇ. ಎಲ್ಲರಿಗೂ ಸ್ವಾತಂತ್ರ್ಯವಿದೆ. ಯಾರ ಮೇಲೂ, ಎಲ್ಲಿಯೂ ಒತ್ತಾಯವಿಲ್ಲ. ಆದ್ದರಿಂದ, ಉಳಿಯಲು ಬಯಸುವವರು ಉಳಿಯುತ್ತಾರೆ.

ಕಾರಣ ಎಷ್ಟು ದಿನ ಅಲ್ಲಿಯೇ ಇರಲು ಬಯಸಿದರೆ ಅಲ್ಲಿಯೇ ಇರುತ್ತೀರಿ. ಹೋಗಲು ಬಯಸುವವರ ಬಗ್ಗೆ ಏನು? ನಾವು ಹೇಗಾದರೂ ಹೋಗುತ್ತೇವೆ. ನೀವು ಹೇಳಿದಂತೆ ಮಾಡುತ್ತೇವೆ. ನಾವು ಇಲ್ಲಿ ಕುಳಿತು ಏನು ಮಾಡುತ್ತೇವೆ? ನಾವು ಎಷ್ಟು ವರ್ಷ ಕುಳಿತುಕೊಳ್ಳುತ್ತೇವೆ, ಇಲ್ಲಿ ಏನು ನಡೆಯುತ್ತಿದೆ? ಏನು ಮಾಡಬೇಕೆಂದು ಹೇಳು ಎನ್ನುತ್ತಾರೆ.

ಆಗ ಯಾರು ಹೋಗಲು ಸಿದ್ಧರಿದ್ದರೂ ಒಬ್ಬೊಬ್ಬರನ್ನು ಒಂದು ಕೋಣೆಗೆ ಕಳುಹಿಸಲಾಗುತ್ತದೆ. ಆ ಕೋಣೆಯನ್ನು ಆಕಾಶಿಕ್ ರೆಕಾರ್ಡ್ಸ್ ರೂಮ್ ಎಂದು ಕರೆಯಲಾಗುತ್ತದೆ. ಆ ಕೋಣೆಯಲ್ಲಿ ದೊಡ್ಡ ಪರದೆಯಿದೆ.ಆ ಪರದೆಯ ಮೇಲೆ ಅವನ ಆ ಜನ್ಮಗಳು, ಹುಟ್ಟಿನಿಂದ ಯಾವ ಕರ್ಮಗಳನ್ನು ಮಾಡಿದ್ದರೆ, ಅವೆಲ್ಲವೂ ಸಿನಿಮಾಗಳಂತೆ ಕಾಣುತ್ತವೆ.

ಅವರು ಎಷ್ಟು ಚಿತ್ರಹಿಂಸೆಗಳನ್ನು ಮಾಡಿದರು! ಎಷ್ಟು ಜನರಿಗೆ ನೋವು ಕೊಟ್ಟಿದ್ದಾರೆ! ಎಷ್ಟು ಜನ ಮೋಸ ಹೋಗಿದ್ದಾರೆ! ಎಷ್ಟು ಮಂದಿಗೆ ಅನ್ಯಾಯವಾಗಿದೆ! ಎಷ್ಟು ಜನರು ಅಳುತ್ತಾರೆ! ಎಷ್ಟು ಜನರು ಸೇವೆ ಸಲ್ಲಿಸಿದರು! ಎಷ್ಟು ಜನ ಪ್ರಯೋಜನ ಪಡೆದಿದ್ದಾರೆ! ಎಷ್ಟು ಜನರು ಪ್ರಯೋಜನ ಪಡೆದರು! ಎಷ್ಟು ಜನರಿಗೆ ಊಟ ನೀಡಲಾಯಿತು! ಈ ರೀತಿ ಮಾಡಿದ ಎಲ್ಲವೂ ಗೋಚರಿಸುತ್ತದೆ. ಹೀಗೆ ಅವರು ಮಾಡಿದ ಎಲ್ಲಾ ಕಾರ್ಯಗಳನ್ನು ತೋರಿಸಲಾಗುತ್ತದೆ

ನಿಮ್ಮನ್ನು ಆ ಕೋಣೆಗೆ ಕಳುಹಿಸಿದಾಗ, ನೀವು ಆ ಕೋಣೆಗೆ ಹೋಗುತ್ತಿದ್ದೀರಿ, ಅಲ್ಲಿ ನಿಮ್ಮ ಎಲ್ಲಾ ಕರ್ಮಗಳು ಗೋಚರಿಸುತ್ತವೆ. ಬಂದದ್ದನ್ನೆಲ್ಲ ತೆಗೆದುಕೊಂಡು ಹೋಗಬೇಕೆಂದರೆ ಅದರಲ್ಲಿ ಎಷ್ಟು ಕರ್ಮಗಳನ್ನು ಅನುಭವಿಸಬೇಕೋ! ಸುಪು ಕರ್ಕ ಎಂದರೆ ನೀವು ಎಷ್ಟು ಪಾಪ ಕರ್ಮಗಳನ್ನು ಮತ್ತು ಎಷ್ಟು ಪುಣ್ಯ ಕರ್ಮಗಳನ್ನು ಅನುಭವಿಸುತ್ತೀರಿ ಎಂಬುದನ್ನು ಆರಿಸಿಕೊಳ್ಳುವುದು.

ಅವರು ಮಾಡಿದ ಎಲ್ಲಾ ಕಾರ್ಯಗಳನ್ನು ನೋಡಿಕೊಳ್ಳುತ್ತಾರೆ. ನೆನಪಿರಲಿ ಸಹೋದರಿ, ಸ್ವಾಭಾವಿಕವಾಗಿ ಹೆಚ್ಚು ಪಾಪಕರ್ಮಗಳನ್ನು ಮಾಡಿದವರು, ಆಯ್ಕೆ ಮಾಡಲು ಪಾಪಕರ್ಮಗಳು ಮಾತ್ರ ಇವೆ. ಕೆಲವನ್ನು ಅದರಿಂದ ತೆಗೆದುಕೊಳ್ಳಲಾಗಿದೆ. ಪುಣ್ಯಕಾರ್ಯಗಳು ಕಡಿಮೆಯಾದರೆ ಅವು ಸ್ವಲ್ಪ ತೆಗೆದುಕೊಳ್ಳುತ್ತವೆ. ಪಾಪ ಕರ್ಮ, ಪುಣ್ಯ ಮಾಡಿದವರು ಕೆಲವರು ಕೆಲವನ್ನು ತೆಗೆದುಕೊಳ್ಳುತ್ತಾರೆ.

ಪುಣ್ಯ ಕರ್ಮಗಳನ್ನು ಮಾಡಿದವರೂ ಇದ್ದಾರೆ. ಅವರು ಧಾರ್ಮಿಕ ಆಚರಣೆಗಳನ್ನು ತೆಗೆದುಕೊಳ್ಳುತ್ತಾರೆ. ಯಾವುದಾದರೂ ಇದ್ದರೆ, ನಂತರ ಒಂದನ್ನು ತೆಗೆದುಕೊಳ್ಳಲಾಗುತ್ತದೆ. ಅದರಂತೆ ಅವರು ಆಯ್ಕೆ ಮಾಡುತ್ತಾರೆ. ಇಲ್ಲಿ ನೀವು ಇನ್ನೇನು ತಿಳಿದುಕೊಳ್ಳಬೇಕು? ಬಲವಂತ ಇಲ್ಲ. ಎಲ್ಲವೂ ನಮ್ಮ ಆಯ್ಕೆ. ಅವನು ಹಿಂದಿನ ಜನ್ಮದಲ್ಲಿ ಅನೇಕ ಕರ್ಮಗಳನ್ನು ಮಾಡಿದ್ದಾನೆ. ಎಷ್ಟೇ ಇರಲಿ. ತೆಗೆದುಕೊಳ್ಳಲು ಏನೂ ಇಲ್ಲ. ಅದರಲ್ಲಿ ಅವರನ್ನು ಆಯ್ಕೆ ಮಾಡಲಾಗಿದೆ. ಅವರು ನಿರ್ಧರಿಸಿದರು. ಅವರು ಆರಿಸಿದ ಕರ್ಮಗಳನ್ನು ಅವರು ತೆಗೆದುಕೊಳ್ಳುತ್ತಾರೆ.

_ನೋಡಿ. ಎಲ್ಲೂ ಬಲವಂತವಿಲ್ಲ. ಅವರವರ ಇಚ್ಛೆಯಂತೆಯೇ ಎಲ್ಲವೂ ನಡೆಯುತ್ತದೆ. ಅವರು ಮಾಡಿದ ಕಾರ್ಯಗಳಲ್ಲಿ, ಅವರು ಆರಿಸಿಕೊಂಡರು. ಅವರು ತೆಗೆದುಕೊಳ್ಳುತ್ತಿದ್ದಾರೆ. ಹೀಗೆ ಆಯ್ದುಕೊಂಡ ಕರ್ಮಗಳನ್ನು ಪ್ರಾರಬ್ಧ ಕರ್ಮಗಳೆನ್ನುತ್ತಾರೆ. ಅವುಗಳನ್ನು ತೆಗೆದುಕೊಂಡು ಭೂಮಿಗೆ ಬಂದು ಅನುಭವಿಸುವುದು. ಇರುತ್ತದೆ ಆ ಕಷ್ಟಗಳು ಬಂದಾಗ ಏನು ಹೇಳುತ್ತೀರಿ? ದೇವರು ನನ್ನಷ್ಟು ಕಷ್ಟಪಟ್ಟಿದ್ದಾನೆ ಎಂದು ಹೇಳಲಾಗುತ್ತದೆ. ಆದರೆ ಇಲ್ಲಿ ಯಾರೂ ಯಾರಿಗೂ ಕಷ್ಟ ಕೊಡುತ್ತಿಲ್ಲ. ಕಾರಣ, ಒಬ್ಬರ ಇಚ್ಛೆಯ ಪ್ರಕಾರ, ಒಬ್ಬರು ಮಾಡುವ ಕರ್ಮಗಳಲ್ಲಿ ಒಬ್ಬರು ಆರಿಸಿಕೊಳ್ಳುವ ಕರ್ಮಗಳು ಒಬ್ಬರಿಗೆ ನಿಗದಿಪಡಿಸಲಾಗಿದೆ. ಸ್ವಾಭಾವಿಕವಾಗಿ ಹೆಚ್ಚು ಬಳಲುತ್ತಿರುವವರು.

ದೇವರು ನನ್ನ ಬರಹವನ್ನು ಹೀಗೆ ಬರೆದಿದ್ದಾನೆ ಎಂದು ಬೇಸರಿಸಿಕೊಳ್ಳುತ್ತಾರೆ. ಅದಕ್ಕೇ ಪತ್ರಿಸರ್  ಹೇಳುತ್ತಾರೆ? "ನಿನ್ನ ವಾಸ್ತುಕೆ ನೀನೆ ಸೃಷ್ಟಿಕರ್ತ"ಅಂತಾರೆ. ಈಗ ನಿಮ್ಮ ಜೀವನದಲ್ಲಿ ಏನಾಗುತ್ತದೆ ಎಂದರೆ ಕಷ್ಟ, ಇಲ್ಲದಿದ್ದರೆ.

ಭೋಗಗಳು  ಬಂದಿದೆ. ಇಲ್ಲವಾದರೆ ಅಪಘಾತ, ಇಲ್ಲದಿದ್ದರೆ ವಿಪರೀತ ಕಾಯಿಲೆ, ಅಸಹನೀಯ ಕಾಯಿಲೆ, ಅಥವಾ ಇನ್ನೇನೋ ಸಂಭವಿಸಿದೆ. ಅವನು ಹುಚ್ಚನಂತೆ ಹುಟ್ಟಿದ್ದಾನೆ. ಇಲ್ಲದಿದ್ದರೆ ಬುದ್ಧಿಮಾಂದ್ಯನಾಗಿ ಹುಟ್ಟಿ ಸೆರೆಮನೆಗೆ ಬಿದ್ದು ಶತ್ರುಗಳ ಕೈಗೆ ಸಿಕ್ಕಿ ನರಕಯಾತನೆ ಅನುಭವಿಸಿದ. ಪೊಲೀಸರಿಂದ ಚಿತ್ರಹಿಂಸೆಗೆ ಒಳಗಾದ ಅವರು, ಮಹಿಳೆಯ ರೂಪದಲ್ಲಿ ಬ್ರೋಥಲ್ ಹೌಸ್‌ನಲ್ಲಿ ಸಿಕ್ಕಿಬಿದ್ದು ಅಲ್ಲಿ ನರಕಯಾತನೆ ಅನುಭವಿಸಿದರು. ಇನ್ನು ಕೆಲವರು ತಮ್ಮ ಪತಿ ಮತ್ತು ಕುಟುಂಬದಿಂದ ಕೌಟುಂಬಿಕ ಹಿಂಸೆ ಅನುಭವಿಸುತ್ತಾರೆ.

ಅವರು ವಿವಿಧ ರೀತಿಯಲ್ಲಿ ಹಿಂಸೆಯನ್ನು ಅನುಭವಿಸುತ್ತಾರೆ. ಅವರು ನರಳುತ್ತಿದ್ದರೆ ದೇವರು ನನ್ನನ್ನು ಯಾಕೆ ಹೀಗೆ ಮಾಡಿದ. ಅವನು ನನ್ನ ಜೀವನವನ್ನು ತುಂಬಾ ಹಾಳು ಮಾಡಿದನು. ನಾನೇನು ಮಾಡಿದೆ ಎಂದು ಅವರು ಚಿಂತಿತರಾಗಿದ್ದಾರೆ. ದೇವರನ್ನು ದೂಷಿಸಲಾಗುತ್ತದೆ. ದೇವರು ನಿಜವಾಗಿಯೂ ಇದ್ದಾನಾ? ಕರೆಯಲಾಗುತ್ತದೆ ಕಾಯಿಲೆ ಬಂದವನು, ಆ ಕಷ್ಟ ಬಂದವನು, ಇನ್ನೇನು ಕರೆಯುವುದು? ನಾನು ಸಾಕಷ್ಟು ಪೂಜೆ ಮತ್ತು ಪ್ರಾರ್ಥನೆಗಳನ್ನು ಮಾಡಿದ್ದೇನೆ. ಆದರೂ ನನಗೆ ಕಷ್ಟ ಎನ್ನುತ್ತಿದ್ದಾರೆ. ಆದರೆ ನೆನಪಿಡಿ. ಇವೆಲ್ಲವೂ ಅವರು ಹಿಂದೆ ಮಾಡಿದ ಕರ್ಮಗಳಿಂದ ಬಂದವು, ಅವರು ತಮ್ಮ ಸ್ವಂತ ಇಚ್ಛೆಯಂತೆ ಆಯ್ಕೆ ಮಾಡಿಕೊಂಡಿದ್ದಾರೆ, ಯಾರೂ ಅವರನ್ನು ಬಲವಂತವಾಗಿ ಹೇರಿಲ್ಲ.

ಆದುದರಿಂದ ರೋಗರುಜಿನಗಳಿರುವವರಷ್ಟೇ ಅಲ್ಲ, ಕಷ್ಟಗಳನ್ನು ಸಹಿಸಲಾರದವರನ್ನೂ ಅರ್ಥ ಮಾಡಿಕೊಳ್ಳಬೇಕು. ನಾನು ಈ ಜನ್ಮವನ್ನು ಆರಿಸಿಕೊಂಡಿದ್ದೇನೆ. ನಾನು ಈ ಕರ್ಮಗಳನ್ನು ಆರಿಸಿಕೊಂಡಿದ್ದೇನೆ. ನನ್ನ ಇಚ್ಛೆಯ ಪ್ರಕಾರ ನಾನು ಆರಿಸಿಕೊಂಡದ್ದು ಈ ಜೀವನ ಎಂದು ನೀವು ಅರ್ಥಮಾಡಿಕೊಂಡರೆ, ನೀವು ಅವುಗಳನ್ನು ಧೈರ್ಯದಿಂದ ಅನುಭವಿಸುತ್ತೀರಿ. ಇಲ್ಲವಾದರೆ 'ನನ್ನ ಜೀವನವೇನು' ಎಂದು ಅಳುತ್ತಾರೆ. ಆದ್ದರಿಂದ ನಾವು ನಿಜವಾಗಿಯೂ ಸೃಷ್ಟಿಕರ್ತರು ಎಂದು ತಿಳಿಯಬೇಕು.

ವಿವಿಧ ಜನರು ಮೇಲಿನ ಲೋಕಗಳಿಗೆ ಹೋಗುತ್ತಾರೆ. ಹೆಚ್ಚು ಪಾಪ ಮಾಡಿದವರು ಹೋಗುತ್ತಾರೆ, ಪಾಪ, ಪುಣ್ಯ ಮಾಡಿದವರೂ ಹೋಗುತ್ತಾರೆ. ಬರಿ ಪುಣ್ಯ ಮಾಡಿದವರೂ ಹೋದರು. ನೈಸರ್ಗಿಕವಾಗಿ ಅವರು ಭೂಮಿಗೆ ಹೋಗುವ ಮೊದಲು ಯೋಚಿಸುತ್ತಾರೆ. ಮತ್ತು ನಾನು ಈ ಎಲ್ಲಾ ಪಾಪಗಳನ್ನು ತೆಗೆದುಕೊಂಡು ಭೂಮಿಗೆ ಹೋದರೆ, ನನ್ನ ಜೀವನ ಏನಾಗುತ್ತದೆ? ಮತ್ತೆ ಹೋಗುವುದೇ? ನಿನಗೆ ಇಷ್ಟ ನಾ? ಹೋದರೆ ಏನಾಗುತ್ತದೆ? ಇಲ್ಲಿಯೇ ಉಳಿದರೆ ಏನಾಗುತ್ತದೆ? ಅದನ್ನು ಯೆಣಟಿಜಜಜಿಟಿಜಜೀಚಿಸು!

ಅಂತಿಮವಾಗಿ ನಾನು ಇಲ್ಲಿ ಎಷ್ಟು ದಿನ ಇರುತ್ತೇನೆ? ಆದ್ದರಿಂದ ಮುಂದುವರಿಯಿರಿ ಮತ್ತು ಈ ಬಾರಿ ಮಾಡಿ

ಮಾಡುತ್ತೇನೆ ಇಂತಹ ಕೆಲಸಗಳನ್ನು ಮಾಡುವುದರಿಂದ ತಪ್ಪಿತಸ್ಥನಾಗುತ್ತೇನೆ, ಆ ಪಾಪಗಳನ್ನು ಮಾಡುವುದಿಲ್ಲ, ನಾನು ಕೆಲವು ರೀತಿಯ ಕಷ್ಟವನ್ನು ಅನುಭವಿಸುತ್ತೇನೆ, ನಾನು ಆರಿಸಿಕೊಂಡ ಪಾಪಗಳನ್ನು ನಾನು ಅನುಭವಿಸುತ್ತೇನೆ. ಈಗ ಮಾಡದಿದ್ದರೆ ನನ್ನ ಭವಿಷ್ಯವೇ ಬದಲಾಗುತ್ತದೆ ಅಲ್ಲವೇ? ಎಂದು ಹೇಳುತ್ತಾ ಭೂಮಿಯ ಮೇಲೆ ಜನ್ಮವನ್ನು ತೆಗೆದುಕೊಳ್ಳಲು ನಿರ್ಧರಿಸುತ್ತಾಳೆ.

ಆದರೆ ಕೆಲವರು ಯೋಚಿಸುತ್ತಾರೆ! ಎಲ್ಲವನ್ನೂ ತೆಗೆದುಕೊಂಡರೆ ನಾನು ಮತ್ತೆ ನರಳಬೇಕೇ? ಜಗಳ ಇಲ್ಲಿಯೇ ಉಳಿದರೆ ಪೈಪೋಟಿ ಎಂದುಕೊಂಡು ಅಲ್ಲೇ ಇರಲು ಬಯಸುತ್ತಾರೆ.

ಇನ್ನು ಕೆಲವರು ಸಹಾಯ ಮಾಡಲು ಸಾಧ್ಯವಿಲ್ಲ, ನಾವು ಇಲ್ಲಿ ಏನು ಮಾಡಬಹುದು? ಎಷ್ಟು ವರ್ಷಗಳು ಇರುತ್ತದೆ ಎಂದು ಹೇಳುವ ಮೂಲಕ ಕೆಲವು ಕರ್ಮಗಳನ್ನು ಆಯ್ದುಕೊಳ್ಳುತ್ತಾರೆ. ಹೆಚ್ಚು ಪಾಪಗಳನ್ನು ಮಾಡುವವರು ಪಾಪಗಳನ್ನು ಮಾತ್ರ ಆರಿಸಿಕೊಳ್ಳುತ್ತಾರೆ. ಅವರು ಅನುಭವಿಸಲು ಕರ್ಮವನ್ನು ಆರಿಸಿಕೊಂಡಾಗಲೆಲ್ಲಾ! ಹೀಗೆ ಆಯ್ದುಕೊಂಡ ಕರ್ಮಗಳನ್ನು ಪ್ರಾರಬ್ಧ ಕರ್ಮಗಳೆನ್ನುತ್ತಾರೆ. ನಂತರ ಅಲ್ಲಿರುವ ಅಂತಹ ಗುರುಗಳು ಈ ಕರ್ಮಗಳಿಂದ ತಮ್ಮ ನರ ದೇಹವನ್ನು ಸಿದ್ಧಪಡಿಸುತ್ತಾರೆ. ನರಮಂಡಲದ ದೇಹವು ಕಣ್ಣಿಗೆ ಗೋಚರಿಸುವುದಿಲ್ಲ. ಅನೇಕ ಪಾಪಗಳಿದ್ದರೆ, ನಾಡಿಮಂಡಲ ದೇಹವು ಅಶುದ್ಧವಾಗಿದೆ. ಪುಣ್ಯ ಕಾರ್ಯಗಳು ಹೆಚ್ಚಾದರೆ ನರಮಂಡಲದ ದೇಹ ಶುದ್ಧವಾಗುತ್ತದೆ.

ಆಧ್ಯಾತ್ಮಿಕ ರಿಯಾಲಿಟಿ ವೀಡಿಯೊದಲ್ಲಿ ನಮಗೆ ತೋರಿಸಿರುವುದು ಇದನ್ನೇ. ಧ್ಯಾನ ಮಾಡುವಾಗ ಆಲೋಚನೆಗಳು ನಿಂತಾಗ, ಮೇಲಿನಿಂದ ಕಾಸ್ಮಿಕ್ ಶಕ್ತಿಯು ಬಂದಾಗ, ಈ ನಾಡಿನ ಮಂಡಲದ ದೇಹದಲ್ಲಿನ ಎಲ್ಲಾ ಕಲ್ಮಶಗಳು ಶುದ್ಧವಾಗುತ್ತವೆ ಎಂದು ನಮಗೆ ತೋರಿಸುತ್ತದೆ.

ಮೇಲಾಗಿ ಆ ಯಜಮಾನರು ತಾವು ತೆಗೆದುಕೊಂಡ ಈ ಕರ್ಮಗಳನ್ನು ಇನ್ನೇನು ಅನುಭವಿಸಲು ಬಯಸುತ್ತಾರೆ? ಯಾವುದೇ ತಾಯಿಯ ಗರ್ಭದಲ್ಲಿ ರೂಪುಗೊಳ್ಳುವ ಮಗುವಿಗೆ ವೇದಿಯನ್ನು ಪರಿಚಯಿಸಿದರೆ, ಅದು ಈ ಎಲ್ಲಾ ಕರ್ಮಗಳನ್ನು ಅನುಭವಿಸಬಹುದು ಎಂದು ನೋಡಬಹುದು. ಬಡವನಾಗಿ ಹುಟ್ಟಬೇಕೆ? ಬಡವನ ತಾಯಿಗೆ ಗರ್ಭ ಬೇಕು. ತಾನು ಆರಿಸಿಕೊಳ್ಳುವ ಕರ್ಮಗಳನ್ನು ಅವಲಂಬಿಸಿ

ಶ್ರೀಮಂತನಾಗಿ ಹುಟ್ಟಬೇಕಾದರೆ ಶ್ರೀಮಂತ ತಾಯಿಯ ಗರ್ಭವನ್ನು ಹುಡುಕುತ್ತಾನೆ. ಸುಂದರವಾಗಿ ಹುಟ್ಟುವುದು ಎಂದರೆ ಸುಂದರ ಹೆತ್ತವರನ್ನು ಹೊಂದಿರುವುದು. ಅಂತಹ ಗರ್ಭಧಾರಣೆಗಾಗಿ ನೋಡಿ. ಸುಂದರವಾಗಿ ಹುಟ್ಟಬೇಕೆ? ಅಂತಹ ಜನರು ಸುಂದರ ತಾಯಿಯ ಗರ್ಭವನ್ನು ಹುಡುಕುತ್ತಾರೆ.

ತನ್ನ ಬದುಕನ್ನು ತಿದ್ದಿಕೊಳ್ಳುತ್ತೇನೆ, ಹಾಗೆ ತಪ್ಪುಗಳನ್ನು ಮಾಡುವುದಿಲ್ಲ, ಆ ಪಾಪಗಳನ್ನು ಮಾಡುವುದಿಲ್ಲ, ಯಾವುದೋ ಒಂದು ರೀತಿಯಲ್ಲಿ ಕಷ್ಟವಾದರೂ ನನ್ನ ಪಾಪ ಕರ್ಮಗಳನ್ನು ಅನುಭವಿಸುತ್ತೇನೆ. ಇನ್ನು ಮುಂದೆ ನಾನೇನೂ ಮಾಡದಿದ್ದರೆ ನನ್ನ ಭವಿಷ್ಯವೇ ಬದಲಾಗುತ್ತದೆ ಅಲ್ಲವೇ? ಭೂಮಿ ನಿನ್ನದು

ಅವರು ಅದನ್ನು ತೆಗೆದುಕೊಳ್ಳಲು ನಿರ್ಧರಿಸುತ್ತಾರೆ. ಆದರೆ ಕೆಲವರು ಯೋಚಿಸುತ್ತಾರೆ! ಅನ್ನ ತೆಗೆದುಕೊಂಡರೆ ಮತ್ತೆ ನರಳಬೇಕಲ್ಲವೇ? ಅವರಿಗೆ ಸಿಗುವ ಗೌರವ ಇಲ್ಲಿಯೇ ಉಳಿದರೆ, ಅವರು ಯೋಚಿಸುವ ಸ್ಪರ್ಧೆಯಲ್ಲಿ ಉಳಿಯಲು ಬಯಸುತ್ತಾರೆ.

ಇನ್ನು ಕೆಲವರು ಸಹಾಯ ಮಾಡಲು ಸಾಧ್ಯವಿಲ್ಲ, ನಾವು ಇಲ್ಲಿ ಏನು ಮಾಡಬಹುದು? ಅವರು ಎಷ್ಟು ವರ್ಷ ಎಂದು ಹೇಳುತ್ತಾರೆ ಮತ್ತು ಕೆಲವನ್ನು ಆಯ್ಕೆ ಮಾಡುತ್ತಾರೆ. ಹೆಚ್ಚು ಪಾಪಗಳನ್ನು ಮಾಡುವವರು ಪಾಪಗಳನ್ನು ಆರಿಸಿಕೊಳ್ಳುತ್ತಾರೆ. ನೀರನ್ನು ಅನುಭವಿಸಲು ನೀವು ಆಚರಣೆಗಳನ್ನು ಆರಿಸಿದಾಗಲೆಲ್ಲಾ! ಹೀಗೆ ಆಯ್ದುಕೊಂಡ ಕರ್ಮಗಳನ್ನು ಪ್ರಾರಬ್ಧ ಕರ್ಮಗಳೆನ್ನುತ್ತಾರೆ. ಆಗ ಅಲ್ಲಿನ ಮೇಷ್ಟ್ರುಗಳು ಈ ಕರ್ಮಗಳಿಂದ ತಮ್ಮ ನಾಡಿನ ಮಂಡಲ ದೇಹವನ್ನು ಸಿದ್ಧಪಡಿಸುತ್ತಾರೆ. ನರಮಂಡಲದ ದೇಹವು ಕಣ್ಣಿಗೆ ಗೋಚರಿಸುವುದಿಲ್ಲ. ಪಾಪಗಳು ಜಾಸ್ತಿಯಾದರೆ ನಾಡಿಮಂಡಲ ಶರೀರವೇ ಲಿಂಗ. ಪುಣ್ಯ ಕಾರ್ಯಗಳು ಹೆಚ್ಚಾದರೆ ನರಮಂಡಲದ ದೇಹ ಶುದ್ಧವಾಗುತ್ತದೆ.

ಸ್ಪಿರಾಮನಲ್ ರಿಯಾಲಿಟಿ ವೀಡಿಯೊದಲ್ಲಿ ನಮಗೆ ತೋರಿಸಿರುವುದು ಇದನ್ನೇ. ಧ್ಯಾನ ಮಾಡುವಾಗ ಆಲೋಚನೆಗಳು ನಿಂತಾಗ, ಮೇಲಿನಿಂದ ಕಾಸ್ಮಿಕ್ ಶಕ್ತಿಯು ಬಂದಾಗ, ಈ ನಾಡಿನ ಮಂಡಲದ ದೇಹದಲ್ಲಿನ ಎಲ್ಲಾ ಕಲ್ಮಶಗಳು ಶುದ್ಧವಾಗುತ್ತವೆ ಎಂದು ನಮಗೆ ತೋರಿಸುತ್ತದೆ.

ಮೇಲಾಗಿ ಆ ಯಜಮಾನರು ತಾವು ತೆಗೆದುಕೊಂಡ ಈ ಕರ್ಮಗಳನ್ನು ಇನ್ನೇನು ಅನುಭವಿಸಲು ಬಯಸುತ್ತಾರೆ? ಯಾವುದೇ ತಾಯಿಯ ಗರ್ಭದಲ್ಲಿರುವ ಮಗುವಿಗೆ ಅವುಗಳನ್ನು ಪರಿಚಯಿಸಿದರೆ, ಅವರು ಈ ಎಲ್ಲಾ ಕರ್ಮಗಳನ್ನು ಅನುಭವಿಸಲು ಸಾಧ್ಯವಾಗುತ್ತದೆ ಎಂದು ನೋಡಬಹುದು. ಅವರು ಬಡವರಾಗಿ ಹುಟ್ಟಿದ್ದಾರೆಯೇ? ಬಡವನ ತಾಯಿ ಗರ್ಭಿಣಿಯಾಗಬೇಕು. ಅವರವರ ಕರ್ಮಗಳಿಗನುಸಾರವಾಗಿ ಶ್ರೀಮಂತರಾಗಿ ಹುಟ್ಟಬೇಕಾದರೆ ಅವರು ಸುಸ್ಥಿತಿಯಲ್ಲಿರುವ ತಾಯಿಯ ಗರ್ಭವನ್ನು ಹುಡುಕುತ್ತಾರೆ. ಸುಂದರವಾಗಿ ಹುಟ್ಟುವುದು ಎಂದರೆ ಸುಂದರವಾಗಿರುವ ಹೆತ್ತವರನ್ನು ಹೊಂದಿರುವುದು. ಅಂತಹ ಗರ್ಭಧಾರಣೆಗಾಗಿ ನೋಡಿ. ಸುಂದರವಾಗಿ ಹುಟ್ಟಬೇಕೆ? ಅಂತಹ ಸುಂದರ ತಾಯಿಯ ಗರ್ಭವನ್ನು ಹುಡುಕುತ್ತಾರೆ.

ಆದ್ದರಿಂದ ಯಾವ ಕರ್ಮಗಳನ್ನು ಆರಿಸಲಾಗುತ್ತದೆ! ಅದರಂತೆ ಹೆಣ್ಣಿನ ಹಾಗೆ, ಗಂಡಿನ ಹಾಗೆ, ಯಾವ ಜಾತಿ, ಯಾವ ಧರ್ಮ, ಯಾವ ಪ್ರದೇಶ, ಯಾವ ದೇಶ ಎನ್ನುವುದನ್ನು ಆಯ್ದುಕೊಂಡ ಕರ್ಮಗಳು ನಿರ್ಧರಿಸುತ್ತವೆ.

ಹಿಂದಿನ ಜನ್ಮದಲ್ಲಿ ಪುರುಷನಾಗಿ ಹುಟ್ಟಿದ್ದನ್ನು ನೋಡಿ. ಅವನು ತನ್ನ ಹೆಂಡತಿಯನ್ನು ತುಂಬಾ ತೊಂದರೆಗೊಳಿಸಿದನು. ಈಗ ನೀವು ತೊಂದರೆದಾಯಕ ಜನ್ಮವನ್ನು ತೆಗೆದುಕೊಳ್ಳಬೇಕಾಗುತ್ತದೆ. ಅಂದರೆ ಹೆಣ್ಣಾಗಿ ಅನುಗುಣವಾದ ನೋವುಗಳನ್ನು ಅನುಭವಿಸಬೇಕಾಗುತ್ತದೆ. ಅದಕ್ಕೂ ಮೊದಲು ಅವಳು ಮಹಿಳೆಯಾಗಿದ್ದಳು ಮತ್ತು ಪತಿಯನ್ನು ನೋಯಿಸಿದ್ದಳು. ಈಗ ಅದರ ಪ್ರಕಾರ. ಮತ್ತೆ ಅಂತಹ ಜನ್ಮ ಬರುತ್ತದೆ.

ಹಾಗೆ ಅನುಭವಿಸಬೇಕಾದ ಕರ್ಮಗಳನ್ನು ನಿರ್ಧರಿಸಿದ ನಂತರ ಅಲ್ಲಿನ ಗುರುಗಳು ಆ ಕರ್ಮಗಳನ್ನು ಅನುಭವಿಸಲು ಸೂಕ್ತವಾದ ತಾಯಿಯ ಗರ್ಭವನ್ನು ಹುಡುಕುತ್ತಾರೆ. ಆದರೆ ತಕ್ಷಣವೇ ದೂರಕುವುದಿಲ್ಲ ಅಲ್ಲವೇ? ಆದ್ದರಿಂದ ಅದನ್ನು ಎದುರುನೋಡುತ್ತಾರೆ.

ಕಾಯಲು ಸಾಧ್ಯವಾಗದ ಕಾರಣ ಕೆಲವರು ಆತಂಕಗೊಂಡಿದ್ದರು. ಅಂದರೆ, ಅಂತಹ ಗರ್ಭಧಾರಣೆಯು 500 ವರ್ಷಗಳ ನಂತರ ಅಥವಾ 1000 ವರ್ಷಗಳ ನಂತರ ಕಂಡುಬರದಿದ್ದರೆ ಏನು? ಸ್ವಲ್ಪ ಹೊಂದಾಣಿಕೆ ಮಾಡಿಕೊಳ್ಳಿ. ನನಗೆ ಕೋಟಿಗಳು ಅಗತ್ಯವಿಲ್ಲ. ಲಕ್ಷಾಗಳಿರುವ ತಾಯಿ ಗರ್ಭವಿದ್ದಾರೆ  ನೋಡಿ ಎನ್ನುತ್ತಾರೆ. ಹಾಗೆಯೇ ಸುಂದರವಾಗಿ ಹುಟ್ಟಬೇಕು. ಆದರೆ ಗರ್ಭಧಾರಣೆ ಕಂಡುಬಂದಿಲ್ಲ. ಆಗ ಅವರು ಹೇಳುವುದೇನೆಂದರೆ ನನಗೆ ಸೌಂದರ್ಯ ಬೇಡ, ಏನು ಬೇಕಾದರೂ ಸರಿ. ಹೀಗೆ

ಹೊಂದಾಣಿಕೆಮಾಡಿಕೋಳ್ಳುತ್ತಾರೆ. ಅಲ್ಲದೆ ಕುಟುಂಬ, ಜಾತಿ, ಧರ್ಮ, ಪ್ರದೇಶ ಮತ್ತು ದೇಶ ಎಲ್ಲಾವನ್ನೂ ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ಆದರೆ ನಂತರ ಅವರು ಬಾದೆಗಳನ್ನು ಅನುಭವಿಸುತ್ತಾರೆ. ಆದರೆ ಎಲ್ಲವೂ ಅವರವರ ಇಚ್ಛೆಯಂತೆಯೇ ನಡೆಯುತ್ತದೆ.

_ನೋಡಿ, ಮದುವೆ ಸಂಬಂಧಗಳ ವಿಚಾರಕ್ಕೆ ಬಂದರೆ ಅದು ಹೆಣ್ಣೇ ಆಗಿರಲಿ, ಪುರುಷನೇ ಆಗಿರಲಿ, ಮೊದಲು ಹಲವು ಆಸೆಗಳಿರುತ್ತವೆ. ಪತಿ ತುಂಬಾ ಸುಂದರವಾಗಿರಬೇಕು, ಬಹಳಷ್ಟು ಹಣವನ್ನು ಹೊಂದಿರಬೇಕು ಮತ್ತು ಉತ್ತಮ ಗುಣಗಳನ್ನು ಹೊಂದಿರಬೇಕು ಎಂದು ಮಹಿಳೆ ನೋಡುತ್ತಾಳೆ. ಅಲ್ಲದೆ, ಮಹಿಳೆ ಸುಂದರವಾಗಿರಬೇಕು. ಅವಳು ಅಪ್ಸರೆಯಂತೆ ಇರಬೇಕೆಂದು ಬಯಸುತ್ತಾನೆ. ಅವನು ಬಹುಶ ನೀಗ್ರೋತರ ಇರುತ್ತಾನೆ; ಅವನಿಗೆ ಐಶ್ವರ್ಯ ರೈ ಬೇಕು. ಆ ರೀತಿಯ ಆಸೆಗಳು . ಒಳ್ಳೆಯ ವರದಕ್ಷಿಣೆ ಬೇಕು, ಒಳ್ಳೆಯ ಸ್ಥಾನಮಾನ ಬೇಕು.. ಹೀಗೆಲ್ಲ ಯೋಚಿಸುತ್ತಾನೆ. ಆದರೆ ಅಂತಹ ಸಂಬಂಧ ಸಿಗದಿದ್ದರೆ ಏನ್ ಮಾಡ್ತಾನೆ ಅಂದ್ರೆ ಒಂದೊಂದೇ ಆಸೆಗಳನ್ನು ಕಮ್ಮಿ ಮಾಡ್ತಾ ಎಲ್ಲಾದಲ್ಲೂ ಅಡ್ಜಸ್ಟ್ ಮಾಡಿಕೊಳ್ಳುತ್ತಾ ಪರ್ವಾಗಿಲ್ಲ ಅಂತ. ಇವರು ಯಾವ ಸ್ಥಾಯಿಗೆ ಬರ್ತಾರೆ ಅಂದ್ರೆ ಹೆಂಡ್ತಿ ಸಿಕ್ಕಿದ್ರೆ ಸಾಕು ಅಂತ ಅವನು, ಗಂಡ ಸಿಕ್ಕಿದರೆ ಸಾಕು ಅಂತ ಇವಳು ಹೇಳುತ್ತಾಳೆ. ಈ ಮೇಲಿನ ಲೋಕಗಳಲ್ಲಿಯೂ ಹಾಗೆಯೇ! ಇದಕ್ಕೆ ಸೂಕ್ತವಾಗಿದೆ. ಅಡ್ಜಸ್ಟ್ಮೆಂಟ್ ಮಾಡಿಕೊಂಡು ಕೆಳಗೆ ಬರುತ್ತಾರೆ. ಭೂಲೋಕಕ್ಕೆ ಬಂದರೆ ಇಂಥ ಜನ್ಮ ಬಂದಿತೆಂದು ಮತ್ತೆ ದುಃಖಪಡುತ್ತಾರೆ.

ಆದರೆ ಹೇಗಾದರೂ, ಮೇಲಿನ ಎಲ್ಲವೂ ಅವರ ಆಯ್ಕೆಯಾಗಿದೆ. ಅವರು ಎಷ್ಟು ವರ್ಷಗಳ ಕಾಲ ಮತ್ತು ಎಷ್ಟು ವರ್ಷ ಬೇಕಾದರೂ ಕಾಯುತ್ತಲೇ ಇರುತ್ತಾರೆ. ಎಷ್ಟು ಸಾವಿರ ವರ್ಷಗಳು ನಿಲ್ಲಿಸಿದರೂ ಅವರ ಅಭ್ಯಂತರವಿಲ್ಲ. ಅಲ್ಲಿ ಕೂಡ ಅವರ ಇಷ್ಟವೇ.

ಹಾಗೆ ಮೂರು ವಿಧದ ಜನರಿದ್ದಾರೆ. ಹೆಚ್ಚಾಗಿ ಪಾಪ ಕರ್ಮಗಳಿಂದ ಭೂಮಿಗೆ ಬಂದವರು ಮತ್ತು ಪಾಪ ಮತ್ತು ಪುಣ್ಯಗಳನ್ನು ಪಡೆದವರೂ ಇದ್ದಾರೆ. ಹೆಚ್ಚು ಪುಣ್ಯ ಪಡೆದವರೂ ಇದ್ದಾರೆ. ಸಹಜವಾಗಿ ಹಾಗೆ ಭೂಮಿಗೆ ಬಂದ ನಂತರ, ನೀವು ಗಮನಿಸಿದರೆ, ವಿವಿಧ ರೀತಿಯ ಜನರು ಕಾಣಿಸಿಕೊಳ್ಳುತ್ತಾರೆ. ಕೆಲವರು ತುಂಬಾ ಒಳ್ಳೆಯವರು. ಕಷ್ಟಗಳು ಬರುತ್ತವೆ, ಸಹಿಸಲಾಗದ ತೊಂದರೆಗಳು ಸಹ. ಇದು ಅವರ ಹಿಂದಿನ ಪಾಪಗಳ ಕಾರಣವೇ?

ಹಾಗೆಯೇ ಕೆಲವು ಜೀವಗಳನ್ನು ಗಮನಿಸಿದರೆ ಕೆಲವು ಕಷ್ಟಗಳು ಬರುತ್ತವೆ. ಕೆಲವು ಸಂತೋಷಗಳಿವೆ. ಕಾರಣ ಪಾಪ–ಪುಣ್ಯಗಳೆರಡೂ ಪ್ರಾಪ್ತವಾಗಿವೆ.

ಕೆಲವು ಜನರೂ ಇದ್ದಾರೆ. ಅವರು ಎಲ್ಲಾ ಅರ್ಹತೆಗಳನ್ನು ಪಡೆದರು. ಅವರ ಜೀವನವು ಬಹಳ ವೈಭವಯುತವಾಗಿದೆ, ಯಾವುದೇ ಕಷ್ಟವಿಲ್ಲ. ಆರ್ಥಿಕವಾಗಿ... ಆಗ್ಲಿ ಮತ್ತೆ ಬೇರೆ ತರದಾಗಲ್ಲಿ,ಎಲ್ಲವೂ ಚೆನ್ನಾಗಿದೆ. ಆ ಹೆಮ್ಮೆಯಿಂದಲೇ ಅವರು ತಪ್ಪುಗಳನ್ನು ಮತ್ತು ಪಾಪಗಳನ್ನು ಮಾಡುತ್ತಾರೆ. ಈ ವಿಧವಾಗಿ ಎಷ್ಟು ಪಾಪಗಳನ್ನು ಮಾಡುತ್ತಿದ್ದಾರೆ? ಇವನ ಬಳಿ ಅಷ್ಟೊಂದು ಹಣವಿದೆ ಎಂದು ಶಾಪವನ್ನೂ  ಹಾಕುತ್ತಿರುತ್ತಾರೆ ಕೂಡ.

ಇದಕ್ಕೆ ಮುಖ್ಯ ಕಾರಣ, ಈಗ ವಿಧವೆ ಒಳ್ಳೆಯ ಕೆಲಸ ಮಾಡುತ್ತಿದ್ದರೂ, ಹಿಂದೆ ಮಾಡಿದ ಪುಣ್ಯಕರ್ಮಗಳೇ ಕಾರಣ!

ಹಾಗಾದರೆ ನಾವು ಯಾಕೆ ಇಲ್ಲಿದ್ದೇವೆ ಎಂದು ತಿಳಿಯಿರಿ. ಏಕೆಂದರೆ ನಾವು ಮೇಲಿನ ಲೋಕದಲ್ಲಿ ಇದನ್ನು ನಿರ್ಧರಿಸಿದ್ದೇವೆ.

## ಕಲಿತುಕೊಳ್ಳುವ ಜನ್ಮಗಳು – ಕಲಿಸುವ ಜನ್ಮಗಳು

ನೋಡಿ ಜನಾಲೋಕದ ಮೇಲೆ ಬಹಳ ಉನ್ನತ ಲೋಕಗಳಿವೆ. ಅವು ಬಹಳ ಉನ್ನತ ಲೋಕಗಳು. ಅವು ಮಹಾಲೋಕ, ತಪೋಲೋಕ, ಸತ್ಯಲೋಕ ಎಂದು ತಿಳಿದುಕೊಂಡಿದ್ದೇವೆ.

ಸಹಜವಾಗಿ ನಮಗೆ ಬರುವ ಸಂದೇಹವೇನೆಂದರೆ? ಎಲ್ಲರೂ ಜನಾಲೋಕಕ್ಕೆ ಹೋಗಿ, ಮತ್ತೆ ಹಿಂತಿರುಗಿ ಬರುತ್ತಾರೆ. ಹಾಗಾದರೆ ಆ ಮೇಲಿನ ಲೋಕಗಳಿಗೆ ಹೇಗೆ ಹೋಗುತ್ತಾರೆ? ಯಾವಾಗ ಹೋಗುತ್ತಾರೆ? ವಾಸ್ತವವಾಗಿ ಆ ಮೇಲಿನ ಲೋಕಗಳ ಶ್ರೇಷ್ಠತೆ ಏನು? ಎಂಬ ವಿಷಯಗಳ ಮೇಲೆ ಅರಿವು ಉಂಟಾಗಬೇಕು ಇಲ್ಲದಿದ್ದರೆ ಏನು ಪ್ರಯೋಜನವಿಲ್ಲ.

ಪಾಪಗಳನ್ನು ಮಾಡುವವರು, ಪುಣ್ಯಗಳನ್ನು ಮಾಡುವವರು ಭುವರ್ ಲೋಕ, ಸುವರ್ ಲೋಕಕ್ಕೆ ಹೋಗಿ, ಅಲ್ಲಿಂದ ಜನಾಲೋಕಕ್ಕೆ ಹೋಗಿ ಹಿಂತಿರುಗಿ ಬರುತ್ತಿರುತ್ತಾರೆ. ಹೀಗೆ ಎಷ್ಟು ಜನ್ಮಗಳು ತಿರುಗುತ್ತಾರೆ? ಅಂದರೆ ಕಡ್ಡಾಯವಾಗಿ 300 ರಿಂದ 350 ಜನ್ಮಗಳು ತಿರುಗುತ್ತಾರೆ. ಏಕೆಂದರೆ? ತಮೋಗುಣದಲ್ಲಿ ಇರುವವರು, ರಾಜಗುಣದಲ್ಲಿ ಇರುವವರು ತಪ್ಪುಗಳನ್ನು, ಪಾಪಗಳನ್ನು ಮಾಡುತ್ತಾರೆ. ಏನಾದರೂ ಅಲ್ಪಸ್ವಲ್ಪ ಪುಣ್ಯಗಳನ್ನು ಮಾಡಿದರೆ ಮಾಡಬಹುದು.

ತಮೋಗುಣದಲ್ಲಿ 100 ರಿಂದ 150 ಜನ್ಮಗಳು ತೆಗೆದುಕೊಳ್ಳುತ್ತದೆಯೆಂದು, ರಜೋಗುಣದಲ್ಲಿ ಇನ್ನೊಂದು 100 ರಿಂದ 150 ಜನ್ಮಗಳು ತೆಗೆದುಕೊಳ್ಳುತ್ತದೆಯೆಂದು ಪತ್ರೀಜಿಯವರು ಹೇಳಿದ್ದಾರೆ. ಸಾತ್ವಿಕ ಗುಣಕ್ಕೆ ಬರುವುದರೊಳಗೆ ಒಟ್ಟಾರೆ 300 ಕ್ಕೂ ಹೆಚ್ಚು ಜನ್ಮಗಳು ಬೇಕಾಗುತ್ತವೆ. ಈ ಸಾತ್ವಿಕ ಗುಣದೊಳಗೆ ಬರದ ಹೊರತು ಪುಣ್ಯಗಳನ್ನು, ಪುಣ್ಯಕರ್ಮಗಳನ್ನು ಮಾಡುವುದಿಲ್ಲ.

ಈ ತಮೋಗುಣದಲ್ಲಿ ಇರುವವರು, ರಾಜಗುಣದಲ್ಲಿ ಇರುವವರು ಸಾಯುವುದು... ಆ ಮೇಲಿನ ಲೋಕಗಳಿಗೆ ಹೋಗುವುದು... ಮತ್ತೇ ಜನಾ ಲೋಕಕ್ಕೆ ಹೋಗುವುದು... ಪುನಹ ಭೂಮಿಯ ಮೇಲೆ ಬರುವುದು... ಇದೇ ನಡೆಯುತ್ತಾ ಇರುತ್ತದೆ. ಕೊನೆಗೆ ಸಾತ್ವಿಕ ಗುಣದೊಳಗೆ ಬಂದರು ಪ್ರಾರಂಭದ ಹಂತದಲ್ಲಿ ಪುಣ್ಯಗಳನ್ನೇ ಮಾಡುತ್ತಾರೆ, ಯಾವುದೇ

ಪಾಪಗಳನ್ನು ಮಾಡುವುದಿಲ್ಲ. ಆದರೆ ಎಷ್ಟೇ ಪುಣ್ಯ ಕಾರ್ಯಗಳನ್ನು ಮಾಡಿದರೂ, ಏನೇ ಮಾಡಿದರು ಅವರು ಸಹ ಆ ಸುವರ್ಲೋಕ ಅಂದರೆ ಸ್ವರ್ಗ ಲೋಕವನ್ನು ಸೇರಿ, ಅಲ್ಲಿಂದ ಜನಾಲೋಕಕ್ಕೆ ಹೋಗಿ ಮರಳಿ ಭೂಮಿಯ ಮೇಲೆ ಜನ್ಮ ತೆಗೆದುಕೊಳ್ಳುತ್ತಾರೆ. ಹೀಗೆ ಇನ್ನೊಂದು 50 ಜನ್ಮಗಳು ಕಳೆಯುತ್ತವೆ. ಸುಮಾರು 350 ಜನ್ಮಗಳು ಈ ರೋಟೇಶನ್ ನಲ್ಲಿಯೇ ಇರುತ್ತಾರೆ ಅವರು. ಹುಟ್ಟುವುದು, ಏನೇನೋ ಮಾಡುವುದು, ಸಾಯುವುದು, ಅನುಭವಗಳನ್ನು ಹೊಂದುವುದು, ಜನಾಲೋಕಕ್ಕೆ ಹೋಗಿ ಮತ್ತೆ ಭೂಮಿಯ ಮೇಲೆ ಬರುವುದು ನಡೆಯುತ್ತಿರುತ್ತದೆ. ಇಷ್ಟು ಜನ್ಮಗಳಲ್ಲಿ ಸಹ ವಾಸ್ತವವಾಗಿ ಜನಾಲೋಕವನ್ನು ದಾಟಿ ಹೋಗುವುದಿಲ್ಲ. ಇದನ್ನಾಧರಿಸಿ ಜನಾಲೋಕವನ್ನು ದಾಟಿ ಹೋದವನು ಎಷ್ಟು ಶ್ರೇಷ್ಠನೆಂದು ನೀವು ಅರ್ಥಮಾಡಿಕೊಳ್ಳಿ.

ಈಗ ಪತ್ರೀಜಿಯವರ ಪರಿಚಯವಾದ ನಂತರ, ನಾವು ಭೀಮವರಂ ಕ್ಲಾಸ್ ಗಳನ್ನು, ಈ ಜೂಮ್ ಕ್ಲಾಸ್ ಗಳನ್ನು ಕೇಳಿಸಿಕೊಳ್ಳುತ್ತಾ ಆಧ್ಯಾತ್ಮಿಕ ತ್ರಿರತ್ನಗಳನ್ನು ಪಾಲಿಸುತ್ತಿದ್ದರೆ? ಜ್ಞಾನವನ್ನು ಹೊಂದಿ ಅರ್ಹತೆಯನ್ನು ಸಂಪಾದಿಸಿಕೊಳ್ಳಬಹುದು.

ಆದ್ದರಿಂದ ಜನಾಲೋಕವನ್ನು ದಾಟಬೇಕು, ಆಗಲೇ ನೀವು ಶ್ರೇಷ್ಠರು, ಬಹಳಷ್ಟು ಶ್ರೇಷ್ಠರು. ಭೂಮಿಯ ಮೇಲೆ ನೀವು ಏನು ಸಾಧಿಸಬೇಕೋ ಅದನ್ನು ಸಾಧಿಸಿದವರಂತೆಯೇ ಲೆಕ್ಕ. ಭೂಮಿಯ ಮೇಲೆ ಬಹಳಷ್ಟು ಉತ್ತಮವಾದ ಕೆಲಸಗಳನ್ನು ಮಾಡಿದರೇ, ನೀವು ಉತ್ತಮರಾದಂತೆ ಅಲ್ಲ, ಜನಾ ಲೋಕವನ್ನು ದಾಟಿದರೇನೇ ನೀವು ಉತ್ತಮರು. ಕಾರಣ ಜನಾಲೋಕವನ್ನು ದಾಟಿದ ನಂತರ ಮಹಾಲೋಕ, ತಪೋಲೋಕ, ಸತ್ಯಲೋಕಗಳು ಇವೆ. ಅವು ಬಹಳ, ಬಹಳ ಉನ್ನತ ಲೋಕಗಳು. ಅಲ್ಲಿರುವವರೆಲ್ಲಾ ಬಹಳ ಬಹಳ ಶ್ರೇಷ್ಠರು. ಅವರು ಸಾಮಾನ್ಯರಲ್ಲ. ಮಹಾತ್ಮರೆನ್ನಿ, ತಪೋಧನರೆನ್ನಿ. ದೇವರು, ದೈವಗಳೆನ್ನಿ, ಯಾರನ್ನಾದರೆ ಶ್ರೇಷ್ಠರೆಂದು ಹೇಳಿಕೊಳ್ಳುತ್ತಿದ್ದೇವೆಯೋ! ಅವರೆಲ್ಲಾ ಆ ಲೋಕಗಳಲ್ಲಿ ಇರುವವರು. ಅಂತಹ ಲೋಕಗಳಿಗೆ ನಾವು ಸೇರಿಕೊಳ್ಳಲು ಸಾಧ್ಯವಾದರೆ ನಾವು ಸಹ ಶ್ರೇಷ್ಠರೇ.

ನೀವು ಮುಖ್ಯವಾಗಿ ತಿಳಿದುಕೊಳ್ಳಬೇಕಾದದ್ದು ಏನೆಂದರೆ? ಜನಾಲೋಕದ ಕೆಳಗೆ ಇರುವ ಲೋಕಗಳನ್ನು ಸೇರಿಕೊಳ್ಳುವವರೆಲ್ಲಾ ಕಲಿತುಕೊಳ್ಳುವವರು. ಅಂತಹವರ ಜನ್ಮಗಳೆಲ್ಲವೂ ಕಲಿತುಕೊಳ್ಳುವ ಜನ್ಮಗಳು. ಆದರೆ ಜನಾಲೋಕದ ಮೇಲೆ ಇರುವ ಲೋಕಗಳನ್ನು ಸೇರಿಕೊಳ್ಳುವವರೆಲ್ಲಾ ಕಲಿಸುವವರು. ಅಂತಹವರ ಜನ್ಮಗಳೆಲ್ಲವೂ ಕಲಿಸುವ ಜನ್ಮಗಳು.

ಆದ್ದರಿಂದ ಯಾವಾಗಲೂ ಇಲ್ಲಿಯೇ ಬುಗುರಿಯಂತೆ ತಿರುಗಿದರೆ ಯಾವುದೇ ಪ್ರಯೋಜನವಿಲ್ಲ. ಒಂದನ್ನು ನೆನಪಿನಲ್ಲಿಡಿ ತಮೋಗುಣದಲ್ಲಿ ದೇಹಸ್ಥಿತಿಯಲ್ಲಿ ಇರುತ್ತಾರೆ. ಅಂದರೆ ದೇಹಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತಾರೆ, ಒಬ್ಬ ಕುಂಭಕರ್ಣನಂತೆ. ಅಂದರೆ ಖಾನಾ, ಪೀನಾ, ಸೋನಾ ಬಿಟ್ಟರೆ ಇನ್ನೊಂದು ಕೆಲಸ ಇರುವುದಿಲ್ಲ. ಅಕ್ಕಪಕ್ಕದವರ ಗಲಾಟೆಯು ಸಹ ಇರುವುದಿಲ್ಲ. ಯಾವಾಗಲೂ ದೇಹದ ಲಾಭಗಳಿಗಾಗಿ ನೋಡುತ್ತಿರುತ್ತಾರೆ, ನಾನು ದೇಹವೆಂಬ ಭಾವನೆಯಲ್ಲಿ ಇರುತ್ತಾರೆ. ನಾನು ಸುಖ ಪಡಬೇಕು, ನಾನು ಅನುಭವಿಸಬೇಕು, ನಾನು ಎಂಜಾಯ್ ಮಾಡಬೇಕು ಎಂದುಕೊಳ್ಳುತ್ತಾ? ಯಾವುದನ್ನು ತಿನ್ನಬೇಕೋ, ಯಾವುದನ್ನು ತಿನ್ನಬಾರದೋ ಸಹ ತಿಳಿದಿಲ್ಲ. ಬೇಡವಾದವುಗಳನ್ನು ತಿನ್ನುತ್ತಾ ಇರುತ್ತಾರೆ, ಅವರಿಗೆ ಯಾವುದು ರುಚಿ ಎನಿಸಿದರೆ ಅದನ್ನು, ಕೋಳಿ ಕಾಣಿಸಿದರೆ ಕೋಳಿ, ಮೇಕೆ ಕಾಣಿಸಿದರೆ ಮೇಕೆ ಎಲ್ಲವನ್ನೂ ತಿನ್ನುತ್ತಿರುತ್ತಾರೆ. ಯಾವಾಗಲೂ ತನ್ನ ಆರೋಗ್ಯ ನನ್ನು ನೋಡಿಕೊಳ್ಳುತ್ತಾ ಇರುತ್ತಾರೆ. ಯಾವಾಗಲೂ ದೇಹಸ್ಥಿತಿ. ಹಾಗೆ ತಮೋ ಗುಣದಲ್ಲಿ ಯಾರಿಗಾದರೂ 100 ರಿಂದ 150 ಜನ್ಮಗಳು ತೆಗೆದುಕೊಳ್ಳುತ್ತವೆ.

ನಂತರ ನಿಧಾನವಾಗಿ ಅವರಲ್ಲಿ ಬದಲಾವಣೆ ಬಂದು ಆ ತಮೋಗುಣದಿಂದ ರಜೋಗುಣಕ್ಕೆ ಬರುತ್ತಾರೆ. ಇಲ್ಲಿಗೆ ಬಂದವರದ್ದು ಮನೋಸ್ಥಿತಿ. ನಾನು ಪ್ರಸಿಡೆಂಟ್, ನಾನು ಎಂ.ಎಲ್.ಎ. ನಾನು ಕಲೆಕ್ಟರ್, ನಾನು ಪುರುಷ, ನಾನು ಸ್ತ್ರೀ, ನಾನು ನಾನು ಈ ಮತ, ನಾನು ಈ ಕುಲ ಎಂದು ಹೇಳುತ್ತಿರುತ್ತಾರೆ.

ನಾನು ಎಲ್ಲರಿಗಿಂತಲೂ ಶ್ರೇಷ್ಠನಾಗಿ ಇರಬೇಕು, ಎಲ್ಲರೂ ನನ್ನ ಮಾತನ್ನೇ ಕೇಳಬೇಕು ಎನ್ನುತ್ತಾರೆ. ಇವೆಲ್ಲವೂ ರಜೋಗುಣದ ಲಕ್ಷಣಗಳು, ಮನೋಸ್ಥಿತಿಯಲ್ಲಿ ಇರುವವರು. ಬಯಕೆಗಳಿಗೆ, ಹಣಕ್ಕೆ ಪ್ರಾಮುಖ್ಯತೆ ನೀಡುವರು. ಎಲ್ಲರಿಗಿಂತಲೂ ಉತ್ತಮವಾಗಿ ಸಂಪಾದಿಸಿ ಶ್ರೇಷ್ಠನೆನಿಸಿಕೊಳ್ಳಬೇಕು, ಎಲ್ಲರನ್ನೂ ನಾನು ಡಾಮಿನೇಟ್ ಮಾಡಬೇಕು, ಎಲ್ಲರನ್ನೂ ನನ್ನ ಅಧೀನದಲ್ಲಿ ಇಟ್ಟುಕೊಳ್ಳಬೇಕು ರಾವಣಾಸುರನಂತೆ. ಇದು ರಜೋಗುಣದ ಲಕ್ಷಣ. ಇಂತಹ ಜನ್ಮಗಳನ್ನು 150 ರವರೆಗೆ ತೆಗೆದುಕೊಳ್ಳುತ್ತಾರೆ.

ಇಲ್ಲಿಯವರೆಗೂ ಇವರೆಲ್ಲಾ ದೇಹ, ಮನಸ್ಸು ಈ ಗೊಂದಲದಲ್ಲಿಯೇ ಇರುತ್ತಾರೆ. ಆದ್ದರಿಂದ ಯಾವಾಗಲೂ ಆ ಭುವರ್ ಲೋಕಕ್ಕೆ ಹೋಗಿ ಅಲ್ಲಿಂದ ಪುನಹ ಜನಾಲೋಕಕ್ಕೆ ಹೋಗಿ, ಮತ್ತೇ ಹಿಂತಿರುಗಿ ಬರುತ್ತಿರುತ್ತಾರೆ. ಹಾಗೆ 150 ಜನ್ಮಗಳು ಕಳೆದ

ನಂತರ ಅಂದರೆ 300 ಜನ್ಮಗಳು ಆದ ನಂತರ ಅದರಿಂದ ಹೊರಬಂದು ಸಾತ್ವಿಕ ಗುಣಕ್ಕೆ ಬರುತ್ತಾರೆ.

ಪತ್ರೀಜಿಯವರು ಏನು ಹೇಳುತ್ತಾರೆಂದರೆ? ಹಾಗೆ ಕಡ್ಡಾಯವಾಗಿ ತೆಗೆದುಕೊಳ್ಳಬೇಕೆಂದಿಲ್ಲ, ಅವರವರ ಶ್ರಮವನ್ನಾಧರಿಸಿ ಇರುತ್ತದೆ ಎನ್ನುತ್ತಾರೆ.

ಸಾತ್ವಿಕ ಗುಣದಲ್ಲಿ ಮನಸ್ಸು ಶುದ್ಧವಾಗುತ್ತದೆ, ಒಳ್ಳೆಯದಾಗಿ ಬದಲಾಗುತ್ತದೆ. ಆದ್ದರಿಂದ ಯಾವುದೇ ತಪ್ಪುಗಳನ್ನು ಮಾಡುವುದಿಲ್ಲ, ಯಾವುದೇ ಪಾಪಗಳನ್ನು ಮಾಡುವುದಿಲ್ಲ. ಸಾಧ್ಯವಾದಷ್ಟು ಒಳ್ಳೆಯ ಕೆಲಸಗಳನ್ನು ಮಾಡುತ್ತಾರೆ, ಲೋಕಕಲ್ಯಾಣಕರವಾದ ಕೆಲಸಗಳನ್ನು ಮಾಡುತ್ತಾರೆ. ಅಂದರೆ ಪುಣ್ಯಕಾರ್ಯಗಳನ್ನು ಮಾಡುತ್ತಾರೆ. ಈ ಸ್ಥಿತಿಗೆ ಬಂದ ನಂತರ ಇವರು ಸಹ ಏನು ಹೇಳುತ್ತಾರೆಂದರೆ?

ಹಾಗೆ ಒಳ್ಳೆಯ ಕೆಲಸಗಳನ್ನು ಮಾಡುತ್ತಾ, ನಾನು ಬಹಳಷ್ಟು ಶ್ರೇಷ್ಠವಾದ ಕೆಲಸ ಮಾಡುತ್ತಿದ್ದೇನೆ, ಬಹಳಷ್ಟು ಜನರಿಗೆ ಸೇವೆ ಮಾಡುತ್ತಿದ್ದೇನೆ ಎಂದು ಭಾವಿಸುತ್ತಿರುತ್ತಾರೆ. ಇವರು ಬುವರ್ ಲೋಕಕ್ಕೆ ಹೋಗುವುದಿಲ್ಲ ಆದರೆ ಎಲ್ಲಾ ಒಳ್ಳೆಯ ಕೆಲಸಗಳನ್ನು ಮಾಡುವುದರಿಂದ ಸುವರ್ಲೋಕ ಅಂದರೆ ಸ್ವರ್ಗ ಲೋಕವನ್ನು ಸೇರುತ್ತಾರೆ. ಆ ಸ್ವರ್ಗಲೋಕವನ್ನು ಸೇರುವುದರಿಂದ ಅಲ್ಲಿ ಆ ಭೋಗಗಳನ್ನು ಅನುಭವಿಸುತ್ತಾರೆ. ಆ ಸುವರ್ಲೋಕ ತುಂಬಾ ದೊಡ್ಡದು, ತುಂಬಾ ಅದ್ಭುತವಾಗಿರುತ್ತದೆ. ಭಗವದ್ಗೀತೆಯಲ್ಲಿಯೂ ಸಹ ಇದನ್ನೇ ಹೇಳಲಾಗಿದೆ.

**ಶ್ಲೋ : ತೇ ತಂ ಭುಕ್ತ್ವಾ ಸ್ವರ್ಗ ಲೋಕಂ ವಿಶಾಲಮ್**
**ಕ್ಷೀಣೇ ಪುಣ್ಯೇ ಮರ್ತ್ಯಲೋಕ ವಿಶನ್ತಿ ।**
**ಏವಂ ತ್ರಯೀ ಧರ್ಮ ಮನು ಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭಂತೇ॥ (ಭ. ಗೀ. 9–12)**

ತಾ:–ಇವರು ಮಾಡಿಕೊಂಡ ಪುಣ್ಯಕ್ಕೆ ತಕ್ಕಂತೆ ವಿಶಾಲವಾದ ಆ ಸುವರ್ಲೋಕಕ್ಕೆ ಹೋಗಿ, ಅಲ್ಲಿ ಭೋಗಗಳನ್ನು ಅನುಭವಿಸಿ ಅವು ಮುಗಿದು ಹೋದ ನಂತರ ಪುನಃ ಭೂಲೋಕಕ್ಕೆ ಬರುತ್ತಾರೆ. ಈ ಮೂರು ರೀತಿಯ ಗುಣಗಳಲ್ಲಿ ಇರುವವರು ಸಂಸಾರ ಚಕ್ರದಲ್ಲಿ ತಿರುಗುತ್ತಿರುತ್ತಾರೆ. ಇದನ್ನಾದರಿಸಿ ಪುಣ್ಯ ಕಾರ್ಯಗಳನ್ನು ಮಾಡುವವರಿಗೂ ಸಹ ಆ ಜನಾಲೋಕವನ್ನು ದಾಟುವ ಅರ್ಹತೆ ಇಲ್ಲ.

ನೆನಪಿನಲ್ಲಿಡಿ ನಮಗೆ ಪಂಡಿತರು ಹೇಳುತ್ತಾರೆ, ಪುಣ್ಯ ಕಾರ್ಯಗಳನ್ನು ಮಾಡಿ ಮೋಕ್ಷವನ್ನು ಹೊಂದುವಿರಿ ಎಂದು. ಆದರೆ ವಾಸ್ತವವಾಗಿ ಜನಲೋಕವನ್ನೇ ದಾಟಿಲ್ಲ, ಇನ್ನು ಮೋಕ್ಷ ಎಲ್ಲಿಂದ ಬರುತ್ತದೆ? ಮೋಕ್ಷವನ್ನು ಹೊಂದಬೇಕೆಂದರೆ ಸತ್ಯ ಲೋಕವನ್ನು ಸೇರಬೇಕು. ಬಹಳಷ್ಟು ಜನರಿಗೆ ಇದು ಅರ್ಥವಾಗುವುದಿಲ್ಲ, ನಾನು ಪುಣ್ಯಕಾರ್ಯಗಳನ್ನು ಮಾಡುತ್ತಿದ್ದೇನೆ ಎನ್ನುತ್ತಾರೆ. ವಾಸ್ತವವಾಗಿ ಪುಣ್ಯಕಾರ್ಯಗಳೇನಾದರೂ ಶ್ರೇಷ್ಠವಾದಂತಹವೇ? ಅದಕ್ಕೆ ಪತ್ರೀಜಿಯವರು ನಿಮಗೆ ಪಾಪಗಳು ಬೇಡ, ಪುಣ್ಯಗಳು ಬೇಡ ಎರಡನ್ನೂ ಬಿಟ್ಟುಬಿಡಿ, ಆತ್ಮ ಕರ್ಮಗಳು ಅಂದರೆ ಮುಕ್ತಿಕರ್ಮಗಳನ್ನು ಮಾಡಿ... ಅವು ನಿಮ್ಮನ್ನು ಮೋಕ್ಷಕ್ಕೆ ಸೇರಿಸಬಲ್ಲವು ಎನ್ನುತ್ತಾರೆ. ನಾನು ಪ್ರಾರಂಭದಲ್ಲಿ ಬಹಳಷ್ಟು ಅನುಮಾನಪಟ್ಟೆನು, ಪುಣ್ಯಕಾರ್ಯಗಳನ್ನು ಬೇಡವೆನ್ನುತ್ತಾರೆ, ಹಾಗಾದರೆ ಒಳ್ಳೆಯ ಕೆಲಸಗಳನ್ನು ಮಾಡದಿದ್ದರೆ ಹೇಗೆ? ಎಂದು ನಾನು ಸ್ವಲ್ಪ ಸಂದೇಹಪಟ್ಟೆನು.

ಆದರೆ ನಂತರ ಅರ್ಥವಾಯಿತು. ಏಕೆಂದರೆ? ಯಾರೂ ಭೂಮಿಯ ಮೇಲೆ ಶಾಶ್ವತವಾಗಿ ಇರುವುದಿಲ್ಲ, ಕೆಲವು ದಿನಗಳಿಗೆ ಭೂಮಿಯ ಮೇಲೆ ಶರೀರವನ್ನು ಬಿಟ್ಟುಬಿಡುತ್ತಾರೆ, ಸ್ತ್ರೀಯಾದರೂ, ಪುರುಷನಾದರೂ ಮಾಡಿದ ಕರ್ಮಗಳಿಗೆ ತಕ್ಕ ಲೋಕಕ್ಕೇ ಹೋಗುತ್ತಾರೆ. ಬಹಳಷ್ಟು ಪುಣ್ಯಕಾರ್ಯಗಳನ್ನು ಮಾಡಿದವರು ಯಾವುದೋ ಶ್ರೇಷ್ಠ ಲೋಕಕ್ಕೆ ಹೊರಟು ಹೋದೆನು ಎಂದುಕೊಳ್ಳುತ್ತಾರೆ. ಆದರೆ ಆ ಸುವರ್ಲೋಕಕ್ಕೆ ಹೋದ ನಂತರವೂ ಸಹ ಜನಾ ಲೋಕಕ್ಕೇ ಬರುತ್ತಾರೆ. ಅಲ್ಲಿ ಕೌನ್ಸಿಲಿಂಗ್ ಗಳನ್ನು ಮಾಡುವವರು ಅಂದರೆ ಮೇಲಿನ ಮೂರು ಲೋಕಗಳಲ್ಲಿ ಇರುವವರು. ಈ ಸುವರ್ ಲೋಕದಿಂದ ಬಂದವರಿಗೆ ಕೌನ್ಸಿಲಿಂಗ್ ಕೊಡುತ್ತಾರೆ.

ಅವರು ಏನೆಂದು ಹೇಳುತ್ತಾರೆಂದರೆ? ನೀನು ಯಾವುದೋ ಶ್ರೇಷ್ಠ ಕೆಲಸಗಳನ್ನು ಮಾಡಿ, ಯಾವುದೋ ಉನ್ನತ ಸ್ಥಿತಿಗೆ ಹೊರಟು ಹೋದೆನೆಂದು ಫೀಲ್ ಆಗುತ್ತಿರುವೆ, ಆದರೆ ಅವುಗಳಿಂದ ಊರ್ಧ್ವಲೋಕಗಳಿಗೆ ಸೇರಲಾರೆ. ನೀನು ದಾನ ಮಾಡಿರುವ ಸೇವೆ ಮಾಡಿರುವೆ ಆದರೆ ಅವುಗಳಿಂದ ನೀನು ಪುನಃ ಭೂಮಿ ಮೇಲೆ ಹೋದಾಗ ಮಾಡಿದವುಗಳಿಗೆ ಅನುಸಾರವಾಗಿ ಭೋಗಗಳನ್ನು ಅನುಭವಿಸುವೆ, ಅದಕ್ಕಿಂತಾ ಬೇರೇನೂ ಇರುವುದಿಲ್ಲ ಎಂದು ಹೇಳುತ್ತಾರೆ.

ಆದರೆ ಮೇಲೆ ಇನ್ನೂ ಬಹಳಷ್ಟು ಲೋಕಗಳಿವೆ. ನೀನು ಆ ಲೋಕಗಳಿಗೆ ಸೇರಬೇಕು. ಈಗ ನಮ್ಮನ್ನು ನೋಡುತ್ತಿರುವೆಯಲ್ಲವೇ, ನಾವು ಆ ಲೋಕಗಳಲ್ಲಿ ಇರುವವರೇ! ನಮ್ಮಂತೆ ಆ ಲೋಕಕ್ಕೆ ಹೋಗಬೇಕೆಂದರೆ ಏನು ಮಾಡಬೇಕೆಂದು ನಿಮಗೆ ಬೋಧಿಸುತ್ತಿದ್ದೇವೆ. ಕಾರಣ ನೀನು ಸಹ ನಮ್ಮಂತೆ ಆಗಬೇಕೆಂದೇ! ನೀನು ಬಹಳಷ್ಟು ಪುಣ್ಯ ಸಂಪಾದಿಸಿಕೊಂಡೆನು ಎಂದುಕೊಳ್ಳುತ್ತಿರುವೆ, ಆದರೆ ಪುನಃ ಭೂಮಿ ಮೇಲೆ ಹೋಗಬೇಕಾದದ್ದೇ ಅಲ್ಲವೇ! ಆದರೆ ಆ ಮೇಲಿನ ಲೋಕಗಳಿಗೆ ಹೋದವರೇ ಶ್ರೇಷ್ಠರು, ನಮ್ಮಂತೆ ಅಭಿವೃದ್ಧಿ ಹೊಂದಿದವರೇ ಶ್ರೇಷ್ಠರು. ಆದ್ದರಿಂದ ನಮ್ಮಂತೆಯೇ ನೀವು ಬೆಳೆಯಬೇಕು, ಅಂದರೆ ಮೇಲಿನ ಲೋಕಗಳಿಗೆ ಸೇರುವ ಪ್ರಯತ್ನ ಮಾಡಬೇಕು ಎಂದು ಹೇಳುತ್ತಾರೆ. ನೋಡಿ ನೀವು ಕಲಿತುಕೊಳ್ಳುತ್ತಿರುವಿರಿ, ನಾವು ಕಲಿಸುತ್ತಿದ್ದೇವೆ. ನಿನಗೆ ಏನೂ ತಿಳಿಯದು, ನಮಗೆ ಬಹಳಷ್ಟು ತಿಳಿದಿದೆ ಎಂದು ಹೇಳುತ್ತಾರೆ.

ಹಾಗಾದರೆ ಅಲ್ಲಿಗೆ ಸೇರಬೇಕೆಂದರೆ? ನೀನು ಯಾವಾಗಲೂ ದೇಹ, ದೇಹ ಎನ್ನುತ್ತಾ ನಾನು, ನಾನು ಎನ್ನುತ್ತಾ ಕುಳಿತುಕೊಂಡರೆ ಏನೂ ಪ್ರಯೋಜನವಿಲ್ಲ. ನೀನು ಯಾವಾಗಲೂ ದೇಹ ಎಂಬ ಭಾವನೆಯಿಂದಲೇ ಜೀವಿಸಿದೆ, ಶರೀರಕ್ಕಾಗಿ ಅವಸ್ತೆ ಪಟ್ಟಿದ್ದೀಯ, ದೇಹದ ಲಾಭಗಳನ್ನೇ ನೋಡಿಕೊಂಡಿದ್ದೀಯ. ನೀನು ದೇಹದ ಲಾಭಗಳನ್ನು ನೋಡಿಕೊಂಡಷ್ಟು ಸಮಯ, ಜನಾಲೋಕದವರೆಗೆ ಮಾತ್ರ ಹೋಗಬಲ್ಲೆಯೇ ಹೊರತು ಜನಾಲೋಕವನ್ನು ದಾಟುವುದಿಲ್ಲ.

ಆದ್ದರಿಂದ ನಾನು ಆತ್ಮ ಎಂಬ ಅರಿವು ಇರಬೇಕು. ಈ ತಿಳುವಳಿಕೆಯೇ ಇಲ್ಲದಿದ್ದರೆ ನೀನು ಎಂತಹ ಪರಿಸ್ಥಿತಿಗಳಲ್ಲಿಯೂ ಜನಾಲೋಕವನ್ನು ದಾಟಲು ಸಾಧ್ಯವಿಲ್ಲ. ಏಕೆಂದರೆ? ಭೂಮಿಯ ಮೇಲೆ ಬಹಳಷ್ಟು ಜನ ಕೋಟಿಗಟ್ಟಲೆ ಹಣ ಸಂಪಾದಿಸಿ ನಾನು ಬಹಳ ಸಂಪಾದನೆ ಮಾಡಿದ್ದೇನೆ ಎಂದುಕೊಳ್ಳುತ್ತಾರೆ. ಆದರೆ ಕೋಟಿಗಟ್ಟಲೆ ಸಂಪಾದಿಸಿದರೂ ಅವನ್ನೆಲ್ಲಾ ಭೂಮಿಯ ಮೇಲೆಯೇ ಎಷ್ಟು ಸಂಪಾದನೆ ಮಾಡಿದರು ಶರೀರವನ್ನು ಬಿಟ್ಟ ನಂತರ ಭುವರ್ ಲೋಕಕ್ಕೆ ಹೋಗಬೇಕಾದದ್ದೇ. ಏಕೆಂದರೆ? ಆ ಕೋಟಿಗಟ್ಟಲೆ ಹಣವನ್ನು ಸಂಪಾದಿಸುವುದಕ್ಕೆ ಬಹಳಷ್ಟು ಪಾಪಗಳನ್ನು ಮಾಡುತ್ತಾರೆ. ಹಾಗಾದರೆ ಭುವರ್ ಲೋಕವಲ್ಲದೇ ಸುವರ್ಲೋಕ ಬರುತ್ತದೆಯೇ? ಎಂದು ಹೇಳುತ್ತಾರೆ.

ಇನ್ನು ಕೆಲವರು ಸಿ.ಎಂ. ಆಗುತ್ತಾರೆ, ಪ್ರೈಮ್ ಮಿನಿಸ್ಟರ್ ಆಗುತ್ತಾರೆ ನನಗಿಂತಲೂ ಹೈ ಲೆವೆಲ್ ನವರು ಯಾರಿದ್ದಾರೆ? ಎಂದು ಫೀಲ್ ಆಗುತ್ತಿರುತ್ತಾರೆ, ಅಹಂಕಾರ ಪಡುತ್ತಾರೆ, ಗರ್ವ ಪಡುತ್ತಾರೆ, ಮಾಡಬಾರದ ಕೆಲಸಗಳನ್ನು ಮಾಡುತ್ತಾರೆ. ಇಷ್ಟು ತಪ್ಪುಗಳು, ಪಾಪಗಳನ್ನು ಮಾಡಿದವರಿಗೆ ಸುವರ್ ಲೋಕಕ್ಕೆ ಹೋಗುವ ಅರ್ಹತೆ ಸಹ ಇರುವುದಿಲ್ಲ.

ಅವರು ಆ ಭುವರ್ ಲೋಕದಲ್ಲಿ ಇದ್ದು ಪುನಹ ಭೂಮಿಯ ಮೇಲೆ ಬರುತ್ತಾರೆ. ಅದಕ್ಕಿಂತ ಮುಂಚೆ ಸಿಎಂ ಆದರು ಈಗ ಮಾಡಿದ ಎಲ್ಲಾ ಪಾಪಗಳಿಗೆ ತಕ್ಕ ಜನ್ಮವನ್ನು ತೆಗೆದುಕೊಳ್ಳಬೇಕಾಗುತ್ತದೆ. ಒಬ್ಬ ಬಡವನಾಗಿಯೋ! ನಿರ್ಗತಿಕನಾಗಿಯೋ! ಇಲ್ಲದಿದ್ದರೆ ಯಾವ ಕಷ್ಟಗಳನ್ನು ಇತರರಿಗೆ ನೀಡಿರುವನೋ! ಅಂತಹ ಕಷ್ಟಗಳೆಲ್ಲವನ್ನೂ ಅನುಭವಿಸಬೇಕಾದಂತಹ ಜನ್ಮವನ್ನು ತೆಗೆದುಕೊಳ್ಳಬೇಕಾಗಿ ಬರುತ್ತದೆ. ಹಾಗಾದರೆ ಅಂತಹ ಶ್ರೇಷ್ಠವ್ಯಕ್ತಿ ಏನಾದನು? ತಿಳಿದುಕೊಂಡರೆ ಆಶ್ಚರ್ಯವೆನಿಸುತ್ತದೆ.

ಬಹಳಷ್ಟು ಜನ ಏನೆಂದುಕೊಳ್ಳುತ್ತಾರೆಂದರೆ? ಇಷ್ಟು ದೊಡ್ಡ ಸ್ಥಾನವನ್ನು ಸಂಪಾದಿಸಿಕೊಂಡು ಇನ್ನು ನಾನು ಭೂಮಿಯ ಮೇಲೆ ಮಾಡಬೇಕಾದದ್ದು ಏನಿದೆ? ಎನ್ನುತ್ತಾರೆ. ಎಷ್ಟು ಫೀಲ್ ಆಗುತ್ತಾರೋ! ಅವರು ಯೋಚಿಸುತ್ತಾರೆ, ನಾನು ಮಾಡಬೇಕಾಗಿರುವುದಕ್ಕಿಂತಲೂ ಹೆಚ್ಚಿನದನ್ನು ಮಾಡಿದ್ದೇನೆ ಎಂದುಕೊಳ್ಳುತ್ತಾರೆ. ಇನ್ನೊಬ್ಬ 10 ಬಿಲ್ಡಿಂಗ್ ಗಳನ್ನೋ, 20 ಬಿಲ್ಡಿಂಗ್ ಗಳನ್ನೋ ಕಟ್ಟಿಸುತ್ತಾನೆ. ಹೀಗೆ ಕಟ್ಟಿಸಲು ಯಾರಿಗೆ ಸಾಧ್ಯ? ನನ್ನ ಮನೆ ನೋಡಲು ಪ್ಯಾಲೇಸ್ ನಂತೆ ಇದೆ? ಎನ್ನುತ್ತಾನೆ. ಇಷ್ಟು ದೊಡ್ಡ ಮನೆಯನ್ನು ಯಾರು ಕಟ್ಟಿಸಬಲ್ಲರು? ಎಂದು ಫೀಲ್ ಆಗುತ್ತಾನೆ.

ಆದರೆ ಎಷ್ಟು ಬಿಲ್ಡಿಂಗ್ ಗಳನ್ನು ಕಟ್ಟಿಸಿದರೂ, ಪ್ಯಾಲೆಸ್ ಗಳನ್ನು ಕಟ್ಟಿಸಿದರೂ ಕೊನೆಗೆ ಭುವರ್ ಲೋಕಕ್ಕೇ ಹೋಗುತ್ತಾನೆ. ನೆನಪಿನಲ್ಲಿಡಿ ಅವನಿಗೆ ಸುವರ್ ಲೋಕ ಪ್ರಾಪ್ತಿ ಸಹ ಇರುವುದಿಲ್ಲ. ಆದರೆ ಅವನು ಅದನ್ನೇ ಶ್ರೇಷ್ಠ ಎಂದುಕೊಳ್ಳುತ್ತಾನೆ. ಆದರೆ ಭೂಮಿಯ ಮೇಲೆ ಅಂತಹವರನ್ನು ನೋಡಿ ಏನೆಂದುಕೊಳ್ಳುತ್ತಾರೆಂದರೆ? ಅಬ್ಬಾ ಅವನು ಎಷ್ಟು ಅದೃಷ್ಟವಂತನೋ! ಬಹಳಷ್ಟು ಸಂಪಾದಿಸಿದ್ದಾನೆ! ನಾವೇ ದುರಾದೃಷ್ಟವಂತರು, ನಮ್ಮ ಹತ್ತಿರ ಏನಿದೆ? ಎಂದುಕೊಳ್ಳುತ್ತಾರೆ.

ಆದರೆ ನಿಮ್ಮ ಬಳಿ ಏನಿದ್ದರೂ, ಏನೂ ಇಲ್ಲದಿದ್ದರೂ... ಘನತೆ ಇದ್ದರೂ, ಘನತೆ ಇಲ್ಲದಿದ್ದರೂ... ಒಳ್ಳೆಯ ಉದ್ಯೋಗ ಇದ್ದರೂ, ಇಲ್ಲದಿದ್ದರೂ ನೀವು ಧ್ಯಾನ ಮಾಡಿ, ಜ್ಞಾನವನ್ನು ಸಂಪಾದಿಸಿ, ಪತ್ರಿಯವರು ಹೇಳಿದಂತೆ ಆ ಪುಸ್ತಕಗಳನ್ನು ಓದಿ, ನೀವು

ಜ್ಞಾನವನ್ನು ಸಂಪಾದಿಸಿಕೊಂಡು ನೀವು ಯಾವ ಕೆಲಸಗಳನ್ನು ಮಾಡಬಾರದು ಎಂದು ತಿಳಿದುಕೊಂಡು, ಯಾವ ಕೆಲಸಗಳನ್ನು ಮಾಡಬೇಕು ಎಂದು ತಿಳಿದುಕೊಂಡು, ಮಾಡಬೇಕಾದ ಕೆಲಸಗಳನ್ನು ಮಾಡುತ್ತಾ, ಮಾಡಬಾರದ ಕೆಲಸಗಳನ್ನು ಮಾಡದಂತೆ ಇದ್ದರೆ! ಅದೇರೀತಿ ಯಾವ ವಿಷಯಗಳಿಗೆ ಪ್ರಾಮುಖ್ಯತೆ ಕೊಡಬೇಕು ಎಂದು ತಿಳಿದುಕೊಂಡು, ಯಾವ ವಿಷಯಗಳಿಗೆಪ್ರಾಮುಖ್ಯತೆ ಕೊಡಬಾರದೆಂದು ತಿಳಿದುಕೊಂಡು, ಆ ರೀತಿಯಾಗಿ ಜೀವಿಸಿದರೆ ಸುವರ್ ಲೋಕವನ್ನೇ ಅಲ್ಲ, ಜನಾಲೋಕವನ್ನು ಸಹ ದಾಟಬಹುದು.

ಆದ್ದರಿಂದ ಪ್ರಾಪಂಚಿಕ ವಿಷಯಗಳ ಬಗ್ಗೆ ಆಸಕ್ತಿ ಉಳ್ಳವರು ಜನಾಲೋಕದವರೆಗೂ ಹೋಗಿ ಹಿಂತಿರುಗಿ ಬರುತ್ತಾರೆ. ಆದರೆ ಆತ್ಮದ ಬಗ್ಗೆ ಆಸಕ್ತಿ ಉಳ್ಳವರೇ ಜನಾಲೋಕವನ್ನು ದಾಟುವ ಅರ್ಹತೆಯನ್ನು ಹೊಂದಿರುತ್ತಾರೆ. ಆದ್ದರಿಂದ ಯಾರಿಗಾದರೂ "ವಿಷಯ ವಿರಕ್ತಿ – ಆತ್ಮ ಆಸಕ್ತಿ" ಇರಬೇಕೆಂದು ಹಿರಿಯರು ಹೇಳುತ್ತಾರೆ.

ಆದ್ದರಿಂದ ಕನಿಷ್ಠ ಪಕ್ಷ 50 ಪರ್ಸೆಂಟ್ ಆದರೂ ಆತ್ಮದ ಬಗ್ಗೆ ಆಸಕ್ತಿ ಇದ್ದರೆ, ಆತ್ಮಕ್ಕೆ ಸಂಬಂಧಿಸಿದ ಕೆಲಸಗಳನ್ನು, ಸಾಧನೆಗಳನ್ನು ಮಾಡಿ, ಆತ್ಮಕ್ಕೆ ಸಂಬಂಧಿಸಿದ ಜ್ಞಾನವನ್ನು ಸಂಪಾದಿಸಿಕೊಂಡರೆ? ಜನಾ ಲೋಕವನ್ನು ದಾಟುವ ಅವಕಾಶವಿದೆ.

ಆದ್ದರಿಂದ ಸುಮ್ಮನೆ ಭೂಮಿಯ ಮೇಲೆ ಬರುವುದು, ಜೀವನವನ್ನು ನಡೆಸುವುದು ಕೊನೆಗೆ ಶರೀರವನ್ನು ಬಿಡುವುದು ದೊಡ್ಡ ಕೆಲಸವೇನು ಅಲ್ಲ. ಯಾವುದು ಏನಾದರೂ ಶರೀರವನ್ನು ಬಿಟ್ಟ ನಂತರ ಜನಾಲೋಕವನ್ನು ದಾಟಿದರೇ ಭೂಮಿಯ ಮೇಲೆ ಬಹಳಷ್ಟು ಸಾಧಿಸಿದಂತೆ ಅಷ್ಟೇಅಲ್ಲ ಬಹಳ ಶ್ರೇಷ್ಠವಾದವರೆಂದೇ ಹೇಳಬಹುದು.

ಒಂದು ರೀತಿಯಲ್ಲಿ 350 ಜನ್ಮಗಳನ್ನು ದಾಟದ ಹೊರತು ಅದನ್ನು ಸಾಧಿಸಲಾರರು. ನೀವು ಅದನ್ನು ಸಾಧಿಸಿದರೆ ಕೋಟ್ಯಾಂತರ ಜನರಿಗಿಂತಲೂ ಬಹಳಷ್ಟು ಶ್ರೇಷ್ಠ ರೆಂದು ಹೇಳಬಹುದು. ನೀವು ಸ್ತ್ರೀ ಆಗಬಹುದು, ಪುರುಷನಾಗಬಹುದು, ಹಣವಿಲ್ಲದವರು ಆಗಬಹುದು, ಸ್ಥಾನಮಾನಗಳು ಇಲ್ಲದಿರಬಹುದು, ಉನ್ನತವಾದ ಉದ್ಯೋಗ ಇಲ್ಲದಿರಬಹುದು, ಆದರೆ ನೀವು ಶ್ರೇಷ್ಠರೇ.

ಏಕೆಂದರೆ? ಭೂಮಿಯ ಮೇಲಿನ ಶ್ರೇಷ್ಠತೆ ಶ್ರೇಷ್ಠತೆಯಲ್ಲ, ಮೇಲೆ ಹೋದಾಗ, ಅಲ್ಲಿ ಶ್ರೇಷ್ಠನಾದವನೇ ನಿಜವಾದ ಶ್ರೇಷ್ಠವ್ಯಕ್ತಿ. ಅದಕ್ಕೆ ಭೂಮಿಯ ಮೇಲೆ ಎಷ್ಟು ಶ್ರೇಷ್ಠ ವ್ಯಕ್ತಿಯಾದರೂ ಮೇಲಿನ ಲೋಕಗಳಲ್ಲಿ ಶ್ರೇಷ್ಠ ವ್ಯಕ್ತಿಗಳ ಹತ್ತಿರ ತರಬೇತಿ

ತೆಗೆದುಕೊಳ್ಳಬೇಕು. ನಾವು ಟ್ರೈನಿಂಗ್ ಪಡೆಯುವವರಂತೆ ಅಲ್ಲದೇ, ಟ್ರೈನಿಂಗ್ ನೀಡುವವರ ಸ್ಥಿತಿಗೆ ಬೆಳೆಯಬೇಕು. ಇವೆಲ್ಲಾ ಹೇಗೆ ತಿಳಿಯುತ್ತವೆಯೆಂದರೆ ಮರಣಿಸಿದ ನಂತರ ನಡೆಯುವಂತಹವನ್ನು ಬದುಕಿರುವಾಗಲೇ ತಿಳಿದುಕೊಂಡಾಗ.

ಸಹಜವಾಗಿ ಸಾತ್ವಿಕ ಗುಣದೊಳಗೆ ಬಂದಾಗ ಮೂರು ಸ್ಥಿತಿಗಳು ಇರುತ್ತವೆ. ಅವು ಯಾವುವೆಂದರೆ? ಸಾತ್ವಿಕ ಅಂದರೆ ಶುದ್ಧತ್ವ ಅಂದರೆ ಮನಸ್ಸು ಶುದ್ಧವಾಗಬೇಕು. ನಂತರದ ಸ್ಥಿತಿ ಪರಿಶುದ್ಧತ್ವ ಅಂದರೆ ಚೆನ್ನಾಗಿ ಶುದ್ಧವಾಗಬೇಕು. ಹಾಗೆಯೇ ನಂತರದ ಸ್ಥಿತಿ ಮಹಾಪರಿ ಶುದ್ಧತ್ವ ಅಂದರೆ ಬಹಳ ಬಹಳ ಶುದ್ದಿ ಆಗಬೇಕು. ಇದನ್ನೇ ಪತ್ರೀಜಿಯವರು 'ಶುದ್ಧ ಸಾತ್ವಿಕ' ಎಂದಿದ್ದಾರೆ. ಇವರು ಭೂಮಿಯ ಮೇಲೆ ಶ್ರೇಷ್ಠವಾದ ಕಾರ್ಯಗಳನ್ನು ಮಾಡುತ್ತಾರೆ, ಸೇವೆಗಳನ್ನು ಮಾಡುತ್ತಾರೆ, ಮಹಾತ್ಮರೆಂದು ಕರೆಯಲ್ಪಡುತ್ತಾರೆ. ಇವರು ಮಾತ್ರ ಜನಾಲೋಕವನ್ನು ದಾಟಿ ಮಹಾಲೋಕವನ್ನು ಸೇರುತ್ತಾರೆ.

ನಮಗೆ ನೀಡಲ್ಪಟ್ಟ ಅವಕಾಶದಿಂದ ಭೂಮಿ ಮೇಲೆ ಬಂದಿದ್ದೇವೆ. ಮತ್ತೇ ಮೇಲಿನ ಲೋಕಗಳಿಗೆ ಹೋಗುತ್ತೇವೆ. ಅಲ್ಲಿ ಲಾಭವನ್ನು ಹೊಂದಬೇಕೆಂದರೆ ಇಲ್ಲಿ ಸಾಧನೆ ಹೆಚ್ಚಾಗಿರಬೇಕು, ಮನಸ್ಸನ್ನು ಚೆನ್ನಾಗಿ ಶುದ್ಧ ಮಾಡಿಕೊಳ್ಳಬೇಕು. ಮನಸ್ಸು ಶುದ್ಧವಾಗುತ್ತಾ ಹೋದಂತೆ ನೀವು ಮಾಡುವ ಕೆಲಸಗಳು ಬದಲಾಗುತ್ತವೆ, ನಿಮ್ಮ ಪ್ರಾಮುಖ್ಯತೆಗಳು ಬದಲಾಗುತ್ತವೆ, ನಿಮ್ಮ ಪ್ರವರ್ತನೆ ಬದಲಾಗುತ್ತದೆ, ಎಲ್ಲವೂ ಬದಲಾಗುತ್ತವೆ.

ಆದ್ದರಿಂದ 'ಶ್ವಾಸದ ಮೇಲೆ ಗಮನ ಧ್ಯಾನ'ವನ್ನು ಮಾಡಬೇಕು, ಸಾತ್ವಿಕವಾದ ಸಸ್ಯಹಾರವನ್ನು ತೆಗೆದುಕೊಳ್ಳಬೇಕು. ಹಾಗೆಯೇ ಭೀಮವರಂನ ಮೂರು ದಿನಗಳ ಕ್ಲಾಸುಗಳಿಗೆ ಬರುವುದರಿಂದ, ಇಂತಹ ಜೂಮ್ ಗಳಿಂದ ಬಹಳಷ್ಟು ಕಲಿತುಕೊಳ್ಳುತ್ತೇವೆ, ಮನಸ್ಸನ್ನು ಶುದ್ಧ ಮಾಡಿಕೊಳ್ಳುತ್ತೇವೆ.

ತಿಳಿದುಕೊಳ್ಳಿ ದೇಹಕ್ಕೆ ಪ್ರಾಮುಖ್ಯತೆ ನೀಡುವವನು ಅಜ್ಞಾನಿ, ಆತ್ಮಕ್ಕೆ ಪ್ರಾಮುಖ್ಯತೆಯನ್ನು ನೀಡುವವನು ಜ್ಞಾನಿ. ಆತ್ಮಕ್ಕೆ ಪ್ರಾಮುಖ್ಯತೆಯನ್ನು ನೀಡಿದವನು ಧ್ಯಾನಸಾಧನೆಯನ್ನು ಚೆನ್ನಾಗಿ ಹೆಚ್ಚಿಸಿಕೊಳ್ಳುತ್ತಾನೆ, ತೀವ್ರವಾಗಿ ಮಾಡುತ್ತಾನೆ. ಆದ್ದರಿಂದ ನೆನಪಿಟ್ಟುಕೊಳ್ಳಿ ಆತ್ಮಕ್ಕೆ ಪ್ರಾಮುಖ್ಯತೆಯನ್ನು ನೀಡುವವನಿಗೆ ಎಲ್ಲಾ ಲಾಭಗಳು ಇವೆ, ದೇಹಕ್ಕೇ ಪ್ರಾಮುಖ್ಯತೆ ಕೊಡುವವನಿಗೆ ದೇಹ ಲಾಭದ ಹೊರತು, ಉಳಿದ ಲಾಭಗಳು ಇರುವುದಿಲ್ಲ.

## ಜನಾಲೋಕವನ್ನು ದಾಟಬೇಕೆಂದರೆ ಏನು ಮಾಡಬೇಕು?

ಜನಾಲೋಕವನ್ನು ತಲುಪಿದವರಿಗೆ ಕೌನ್ಸಿಲಿಂಗ್ ಗಳು ನಡೆಯುತ್ತವೆ ಎಂದು ತಿಳಿದುಕೊಂಡೆವು. ಆ ಕೌನ್ಸಿಲಿಂಗ್ ಗಳು ನಡೆಯುವಾಗ ಅವರಿಗೆ ಚೆನ್ನಾಗಿ ಅರ್ಥವಾಗುತ್ತದೆ. ಏಕೆಂದರೆ? ಆ ಕೌನ್ಸಿಲಿಂಗ್ ಗಳನ್ನು ಮಾಡುವ ಮಾಸ್ಟರ್ಸ್ ಯಾರು ಎಂದರೆ? ಮಹಾಲೋಕ, ತಪೋಲೋಕ, ಸತ್ಯಲೋಕಗಳಲ್ಲಿ ಇರುವಂತಹ ಮಾಸ್ಟರ್ಸ್. ಅವರು ಬಂದು ಅವರಿಗೆ ಎಲ್ಲವನ್ನೂ ಹೇಳುತ್ತಿರುತ್ತಾರೆ. ಮಗು... ನೀನು ಭೂಮಿ ಮೇಲೆ ಹೋಗಿ ಯಾವಾಗಲೂ ಆ ಕೋಳಿಯ ಮೇಲೆ, ಮೇಕೆಯ ಮೇಲೆ, ಆ ಹಂದಿಯ ಮೇಲೆ ದೃಷ್ಟಿ ಇರಿಸಿದ್ದೆಯೇ ಹೊರತು ಬೇರೇ ಇನ್ನೇನನ್ನೂ ಆಲೋಚಿಸಲಿಲ್ಲ?

ಭೂಮಿಯ ಮೇಲೆ ಇದ್ದಷ್ಟು ಸಮಯ ದೇಹವೇ ನಾನು ಎಂದು ಭಾವಿಸಿದೆ. ಆದರೆ ನೀನು ಎಂದು ಭಾವಿಸಿದ ಆ ದೇಹ ಈಗ ಇದೆಯಾ? ಅಂದರೆ ಇಲ್ಲ ಅಲ್ಲವೇ? ಈಗ ಇರುವುದು ಆತ್ಮವೇ ಅಲ್ಲವೇ? ಆತ್ಮವಾಗಿಯೇ ಈ ಲೋಕಕ್ಕೆ ಬಂದಿರುವೆ, ಅಂದರೆ ನೀನು ಆತ್ಮವೇ ಅಲ್ಲವೇ? ಆ ವಿಷಯವನ್ನು ಕನಿಷ್ಠಪಕ್ಷ ಒಮ್ಮೆಯಾದರೂ ಆಲೋಚಿಸಿರುವೆಯಾ? ಎಂದು ಕೇಳುತ್ತಾರೆ.

ಆ ಮಾಸ್ಟರ್ ಇನ್ನೂ ಏನು ಹೇಳುತ್ತಾರೆಂದರೆ? ನೀನು ಹಲವಾರು ಜನ್ಮಗಳಿಂದ ಇಲ್ಲಿಗೆ ಬರುತ್ತಿರುವೆ ಮತ್ತು ಹೋಗುತ್ತಿರುವೆ. ಇದೇನಿನ್ನ ಕೆಲಸ ಎಂದುಕೊಳ್ಳುತ್ತಿದ್ದೀಯಾ? ನೀನು ಇನ್ನೂ ಬಹಳಷ್ಟು ವಿಷಯಗಳನ್ನು ತಿಳಿದುಕೊಳ್ಳಬೇಕು. ಈ ಲೋಕಕ್ಕಿಂತ ಮೇಲೆ ಇನ್ನು ಹಲವಾರು ಉನ್ನತವಾದ ಲೋಕಗಳು ಇವೆ. ಆ ಲೋಕಗಳಿಂದ ಬಂದಿರುವವರೇ ನಾವು. ನಾವು ನಿನಗೆ ಇಷ್ಟೊಂದು ಬೋಧಿಸುತ್ತಿದ್ದೇವೆ ಎಂದರೆ? ನಾವು ಆ ಸ್ಥಿತಿಗೆ ಬೆಳೆದಿದ್ದೇವೆ. ನಾವು ಬಹಳಷ್ಟು ಜ್ಞಾನವನ್ನು ಸಂಪಾದಿಸಿಕೊಂಡಿದ್ದೇವೆ, ಭೂಮಿಯ ಮೇಲೆ ಅನೇಕ ಮಹತ್ಕಾರ್ಯಗಳನ್ನು ಮಾಡಿದ್ದೇವೆ. ಆ ಮೇಲಿನ ಲೋಕಗಳ ಬಗ್ಗೆ ನಿನಗೆ ಗೊತ್ತಿಲ್ಲ, ನೀನು ತಿಳಿದುಕೊಳ್ಳುತ್ತಿಲ್ಲ. ಆದ್ದರಿಂದ ಈಗ ನೀನು ಇರುವ ಲೋಕವನ್ನಲ್ಲ, ಇನ್ನೂ ಉನ್ನತವಾದ ಲೋಕಗಳಿಗೆ ತಲುಪುವ ಪ್ರಯತ್ನ ಮಾಡಬೇಕು. ಇಲ್ಲಿಗೇ ನೀನು ಹಲವಾರು ಜನ್ಮಗಳನ್ನು ತೆಗೆದುಕೊಂಡಿರುವೆ. ನೀನು ಭೂಲೋಕಕ್ಕೆ ಹೋಗುತ್ತಿರುವೆ ಮತ್ತೇ ಅದೇರೀತಿ ಹಿಂತಿರುಗುತ್ತಿರುವೆ. ವಾಸ್ತವವಾಗಿ ಹೀಗೆ ಹೋಗಿ ಬರುವುದು

ಏತಕ್ಕಾಗಿ? ಇನ್ನೂ ಉನ್ನತ ಸ್ಥಿತಿಗೆ ಸೇರಬೇಕು, ಶ್ರೇಷ್ಠನಾಗಿ ಬೆಳೆಯಬೇಕು, ಶ್ರೇಷ್ಠ ವ್ಯಕ್ತಿಯಾಗಬೇಕು.

ಈಗ ನೀನಿರುವ ಈ ಜನಾ ಲೋಕಕ್ಕಿಂತಲೂ ಉನ್ನತ ಲೋಕಗಳಿಗೆ ತಲುಪುವ ಪ್ರಯತ್ನವನ್ನು ಮಾಡಬೇಕು ಎಂದು ಹೇಳುತ್ತಾರೆ. ಅಷ್ಟೇ ಅಲ್ಲ ಹಾಗೆ ಬೆಳೆಯಬೇಕೆಂದರೆ? ಭೂಮಿಯ ಮೇಲೆ ಏನು ಮಾಡಬೇಕೆಂದು ವಿವರವಾಗಿ ಹೇಳುತ್ತಾರೆ. ಮುಖ್ಯವಾಗಿ ಧ್ಯಾನ ಸಾಧನೆ ಮಾಡಬೇಕು, ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು ಎಂದು ತಿಳಿಸಿ ಇನ್ನೂ ಹಲವಾರು ವಿಷಯಗಳನ್ನು ಹೇಳುತ್ತಾರೆ. ಆಗ ಆ ವ್ಯಕ್ತಿ ಭೂಮಿ ಮೇಲೆ ಹೋಗಲು ನಿರ್ಧರಿಸುತ್ತಾನೆ.

ಆಗ ಅವರನ್ನು ಕೇಳುತ್ತಾನೆ, ಹಾಗಾದರೆ ನಾನು ಈಗ ಭೂಮಿಗೆ ಹೋಗಲು ಏನು ಮಾಡಬೇಕು? ಎನ್ನುತ್ತಾನೆ. ಆಗ ಅವರು ನೀನು ಭೂಮಿಗೆ ಹೋಗಬೇಕೆಂದರೆ? ಇದಕ್ಕಿಂತ ಮುಂಚೆ ನೀನು ಮಾಡಿದ ಕೆಲವು ಕರ್ಮಗಳನ್ನು ಅನುಭವಿಸಬೇಕು ಎಂದು ಹೇಳಿ ಅವನನ್ನು ಆಕಾಶ ರೆಕಾರ್ಡ್ಸ್ ಕೋಣೆಯೊಳಗೆ ಕಳುಹಿಸುತ್ತಾರೆ.

ಆ ಕೋಣೆಯಲ್ಲಿ ಅವನು ಹಿಂದೆ ತಾನು ಮಾಡಿದ ಕರ್ಮಗಳನ್ನೆಲ್ಲಾ ಸಿನಿಮಾ ನೋಡಿದಂತೆ ನೋಡಿಕೊಳ್ಳುತ್ತಾನೆ. ಆಗ ಅವನು ಆಶ್ಚರ್ಯಪಡುತ್ತಾನೆ! ನಾನು ಇಷ್ಟೊಂದು ಪಾಪಗಳನ್ನು ಮಾಡಿದ್ದೇನೆಯೇ? ಮತ್ತು ಇವೆಲ್ಲವನ್ನು ಭೂಮಿ ಮೇಲೆ ತೆಗೆದುಕೊಂಡು ಹೋದರೆ ಎಷ್ಟು ಕಷ್ಟಗಳನ್ನು ಅನುಭವಿಸಬೇಕು? ಹೇಗೆ? ಎಂದು ಅನುಮಾನ ಪಡುತ್ತಾನೆ. ಸರಿ ಈ ಬಾರಿಯಾದರೂ ಪಾಪಗಳನ್ನು ಮಾಡದಂತೆ, ಧ್ಯಾನ ಮಾಡಿ ಜ್ಞಾನ ಸಂಪಾದಿಸಿಕೊಳ್ಳುತ್ತೇನೆ ಎಂದು ನಿರ್ಧರಿಸುತ್ತಾನೆ.

ಆಗ ಕೆಲವು ಕರ್ಮಗಳನ್ನು ಆರಿಸಿಕೊಳ್ಳುತ್ತಾನೆ. ಭೂಮಿ ಮೇಲೆ ಬರುತ್ತಾನೆ. ಬಂದ ನಂತರ ಮೇಲಿನ ಲೋಕಗಳಲ್ಲಿ ಅಂದುಕೊಂಡಂತಹವುಗಳನ್ನು, ನಿರ್ಧರಿಸಿಕೊಂಡದ್ದನ್ನೆಲ್ಲಾ ಮರೆತುಬಿಡುತ್ತಾನೆ. ಮತ್ತೆ ಯಥಾಸ್ಥಿತಿಯೇ! ಹಿಂದಿನ ಅಭ್ಯಾಸಗಳು, ವಾಸನೆಗಳನ್ನು ಆಧರಿಸಿ ಪುನಃ ಅವೇ ಕೆಲಸಗಳನ್ನು ಮಾಡುತ್ತಾನೆ, ಅವೇ ಪಾಪಗಳನ್ನು ಮಾಡುತ್ತಾನೆ. ಅದಕ್ಕೆ ಪೂರಕವಾಗಿ ಅವನ ಸುತ್ತಲೂ ಇರುವ ಸಮಾಜ, ಕುಟುಂಬದ ಪ್ರಭಾವವೂ ಸಹ ಅಧಿಕವಾಗಿರುತ್ತದೆ. ಅವರೆಲ್ಲರನ್ನೂ ನೋಡುತ್ತಾ, ಅವರಂತೆಯೇ ವರ್ತಿಸುತ್ತಾನೆ. ತಪ್ಪುಗಳನ್ನು, ಪಾಪಗಳನ್ನು ಮಾಡುತ್ತಿರುತ್ತಾನೆ. ಜೀವ ಹಿಂಸೆ ಮಾಡುತ್ತಾನೆ, ಮಾಂಸವನ್ನು ಸೇವಿಸುತ್ತಾನೆ.

ಅಷ್ಟೇ ಅಲ್ಲ ಈ ದೇಹ ನಾನು ಎಂದುಕೊಳ್ಳುತ್ತಾ ಇರುತ್ತಾನೆ, ಮತ್ತೇ ದೇಹಕ್ಕೋಸ್ಕರವೇ ಬಹಳ ಅವಸ್ಥೆಗಳನ್ನು ಪಡುತ್ತಾನೆ. ಸದಾ ದೇಹ ಸೌಖ್ಯ, ದೇಹ ಸೌಂದರ್ಯ, ದೇಹ ಆರೋಗ್ಯ, ದೇಹ ಅಲಂಕಾರಗಳಿಗೆ ಪ್ರಾಮುಖ್ಯತೆ ನೀಡುತ್ತಾನೆ. ದೇಹ ಸುಖಕ್ಕೋಸ್ಕರ ತಿನ್ನಬಾರದವುಗಳನ್ನು ತಿನ್ನುತ್ತಾನೆ. ಅವನ ಕೋರಿಕೆಗಳನ್ನು ಈಡೇರಿಸಿಕೊಳ್ಳಲು ಮಾಡಬಾರದ ಕೆಲಸಗಳನ್ನು ಮಾಡುತ್ತಾನೆ. ಹೀಗೆ ಮಾಡಬಾರದ ಕೆಲಸಗಳು, ಪಾಪಗಳನ್ನು ಮಾಡಿ ಮತ್ತೇ ಮೇಲಕ್ಕೆ ಹೋಗುತ್ತಾನೆ.

ಮತ್ತೇ ಅಲ್ಲಿ ಯಥಾಸ್ಥಿತಿಯೇ! ಇದನ್ನೇ ಶಂಕರಾಚಾರ್ಯರು 'ಪುನರಪಿ ಜನನಂ, ಪುನರಪಿ ಮರಣಂ' ಎಂದಿದ್ದಾರೆ. ಇದು ಮೇಲೆ ಸಂಭವಿಸುವಂತಹದ್ದು. ಹಾಗಾದರೆ ಈಗ ನಾವು ಇದನ್ನೆಲ್ಲಾ ಏಕೆ ತಿಳಿದುಕೊಳ್ಳಬೇಕು? ಪತ್ರಿಯವರು ಏಕೆ ತಿಳಿದುಕೊಳ್ಳಬೇಕು ಎನ್ನುತ್ತಾರೆ?

ಅಂದರೆ ಅಲ್ಲಿ ಎಂತಹ ಕೌನ್ಸಿಲಿಂಗ್ ಗಳು ನಡೆಯುತ್ತವೆಯೋ! ಭೂಮಿಯ ಮೇಲೆ ಸಹ ಅಂತಹ ಕೌನ್ಸಿಲಿಂಗ್ ಗಳೇ ಈಗ ನಮಗೆ ನಡೆಯುತ್ತಿವೆ. ಈಗ ಪತ್ರಿಯವರ ಮೂಲಕ ಅನೇಕ ಜನರು ಈ ವಿಷಯಗಳನ್ನೆಲ್ಲಾ ತಿಳಿದುಕೊಂಡು, ಮತ್ತೇ ಈ ವಿಷಯಗಳನ್ನೆಲ್ಲಾ ಎಲ್ಲರಿಗೂ ಹೇಳುತ್ತಿದ್ದಾರೆ. ಈಗ ಒಂದು ರೀತಿಯಲ್ಲಿ ನಾವು ಮಾಡುತ್ತಿರುವುದೆಲ್ಲಾ ಕೌನ್ಸಿಲಿಂಗೇ!

ನಾವು ಏನು ಹೇಳುತ್ತಿದ್ದೇವೆ ಎಂದರೆ? ನೀನು ಈಗ ಏನು ಮಾಡುತ್ತಿರುವೆಯೋ ಅದನ್ನಲ್ಲ, ನೀನು ಏನು ಮಾಡಬೇಕು ಎಂಬುದನ್ನು ತಿಳಿದುಕೋ! ಅದಕ್ಕೆ ತಕ್ಕಂತೆ ಪ್ರವರ್ತಿಸು, ಅಂತಹ ಕೆಲಸಗಳನ್ನೇ ಮಾಡು ಎಂದು ಹೇಳುತ್ತಿದ್ದೇವೆ, ಅದೇ ರೀತಿ ಏನು ಮಾಡಬಾರದು ಎಂಬುದನ್ನು ಸಹ ಹೇಳುತ್ತಿದ್ದೇವೆ.

ಆದ್ದರಿಂದ ತಿಳಿದುಕೊಳ್ಳಿ! ಮೇಲಿನ ಲೋಕಗಳಿಗೆ ಹೋದ ನಂತರ, ಎಷ್ಟು ತಿಳಿದುಕೊಂಡರೂ ಧ್ಯಾನ ಮಾಡಲು ಶರೀರ ಇರುವುದಿಲ್ಲ, ಜ್ಞಾನವನ್ನು ಸಂಪಾದಿಸಿ ಕೊಳ್ಳಲು ಸಾಧ್ಯವಿರುವುದಿಲ್ಲ. ತಿಳಿದುಕೊಂಡಂತಹವುಗಳನ್ನು ಅನುಭವ ಹೊಂದುವ ಅವಕಾಶವಿರುವುದಿಲ್ಲ. ಆದರೆ ಭೂಮಿ ಮೇಲೆ ಬಂದ ನಂತರ ತಿಳಿದುಕೊಂಡರೆ ಧ್ಯಾನ ಮಾಡುವ ಅವಕಾಶವಿರುತ್ತದೆ. ಕಾರಣ ಭೂಮಿಯ ಮೇಲೆ ಶರೀರ ಇರುತ್ತದೆ, ಶರೀರದೊಂದಿಗೆ ಧ್ಯಾನ ಮಾಡಬಹುದು, ಜ್ಞಾನದಿಂದ ಕೂಡಿದ ಪುಸ್ತಕಗಳನ್ನು ಓದಬಹುದು, ಜ್ಞಾನಿಗಳೊಂದಿಗೆ ಸಾಂಗತ್ಯ ಮಾಡಬಹುದು. ಅಪಾರವಾದ ಜ್ಞಾನವನ್ನು ಹೊಂದಬಹುದು, ಹೊಂದಬೇಕಾದ ಅನುಭವಗಳನ್ನು ಹೊಂದಬಹುದು.

ವಿಚಿತ್ರವೇನೆಂದರೆ? ಮೇಲಿನ ಲೋಕಗಳಲ್ಲಿ ಅಂದುಕೊಂಡದ್ದು ಇಲ್ಲಿ ಜ್ಞಾಪಕ ಇರುವುದಿಲ್ಲ. ಎಲ್ಲವನ್ನೂ ಮರೆತುಬಿಡುತ್ತೇವೆ. ಆದರೆ ಪತ್ರಿಯವರಂತಹ ಗುರುಗಳ ಮೂಲಕ ಇಲ್ಲಿ ನಾವು ಏನು ಮಾಡಬಾರದು! ಏನು ಮಾಡಬಾರದು! ಎಂದು ತಿಳಿದುಕೊಳ್ಳುತ್ತೇವೆ. ಅವರ ಬೋಧನೆಗಳನ್ನು ಅನುಸರಿಸಿ ನಾವು ಮಾಡಬಾರದವುಗಳನ್ನು ಬಿಟ್ಟು, ಮಾಡಬೇಕಾದವುಗಳನ್ನು ಮಾಡಿದಾಗ! ಮತ್ತೇ ಮೇಲಕ್ಕೆ ಹೋದ ನಂತರ, ಮೇಲಿನ ಲೋಕದ ಮಾಸ್ಟರ್ಸ್ ನಮ್ಮನ್ನು ತ್ತಾರೆ, ತುಂಬಾ ಒಳ್ಳೆಯ ಕೆಲಸಗಳನ್ನು ಮಾಡಿ ಬಂದಿರುವೆ ಮಗು, ಬಹಳ ಕಷ್ಟ ಪಟ್ಟಿರುವೆ, ತುಂಬಾ ಶ್ರಮ ಪಟ್ಟಿದ್ದೀಯ ಎಂದು ಹೊಗಳುತ್ತಾರೆ.

ನೀನು ಏನು ಮಾಡಬೇಕೋ ಅವೆಲ್ಲವನ್ನು ಭೂಮಿಯ ಮೇಲೆ ಮಾಡಿ ಬಂದಿರುವೆ, ತುಂಬಾ ಅದೃಷ್ಟವಂತ ನೀನು ಇನ್ನಷ್ಟು ಉನ್ನತ ಲೋಕಗಳಿಗೆ ಸೇರಿಕೊಳ್ಳುವೆ ಎಂದು ಹೇಳುತ್ತಾರೆ. ಆದ್ದರಿಂದ ನೆನಪಿಟ್ಟುಕೊಳ್ಳಿ! ಯಾವಾಗಲೂ ಜನಾ ಲೋಕದವರೆಗೆ ಹೋಗಿ ಹಿಂತಿರುಗಿ ಬರುವುದಲ್ಲ. ಜನಾ ಲೋಕವನ್ನು ದಾಟುವ ಪ್ರಯತ್ನ ಮಾಡಬೇಕು. ಆಗ ಅವನು ಶ್ರೇಷ್ಠನಾಗುತ್ತಾನೆ. ಭೂಮಿಯ ಮೇಲೆ ಬಂದವನು ಸದಾ ಜನಾ ಲೋಕಕ್ಕೆ ಆಟೋಮೇಟಿಕ್ ಆಗಿ ಹೋಗುತ್ತಾನೆ, ಅದೇನು ವಿಶೇಷವಾದದ್ದಲ್ಲ. ಬೇಕಾದದ್ದು ಜನಾಲೋಕವನ್ನು ದಾಟುವುದು, ಆಗಲೇ ಅವನು ಶ್ರೇಷ್ಠವ್ಯಕ್ತಿ ಎಂದು ಹೇಳುತ್ತಾರೆ.

ನೀವು ಸ್ತ್ರೀಯಾದರೂ ಸರಿ, ಪುರುಷನಾದರೂ ಸರಿ, ಹಣವಿದ್ದರೂ ಸರಿ, ಇಲ್ಲದಿದ್ದರೂ ಸರಿ, ಯಾವ ಕುಲವಾದರೂ ಸರಿ, ಯಾವ ಮತವಾದರೂ ಸರಿ, ಯಾರಾದರೂ ಸರಿ ನೆನಪಿನಲ್ಲಿಡಿ ನಾನು ಆತ್ಮ, ಈ ದೇಹ ನಾನಲ್ಲ ಎಂಬ ಅರಿವಿನಿಂದ ಇರಬೇಕು. ಅಷ್ಟೇ ಅಲ್ಲ ನಾನು ಸಾಮಾನ್ಯವಾದ ಕುಟುಂಬ, ಸಾಮಾನ್ಯವಾದ ಕುಲ, ಈ ಮತ ಇವೆಲ್ಲವನ್ನೂ ಬಿಟ್ಟುಬಿಡಿ. ನೀವು ಆತ್ಮ. ಪ್ರತಿಯೊಬ್ಬರೂ ನೀವು ಕಪ್ಪಗಿದ್ದೀರಾ, ಬೆಳ್ಳಗಿದ್ದೀರಾ, ಸುಂದರವಾಗಿದ್ದೀರಾ, ಸುಂದರವಾಗಿಲ್ಲವೇ, ಮುದುಕರೇ, ಯವ್ವನದಲ್ಲಿರುವವರೇ ಇವೆಲ್ಲವೂ ಯಾರಿಗೆ ಬೇಕು. ಯಾರಾದರೂ ಸರಿಯೇ ನಾನು ಆತ್ಮ ಎಂದು ನಿತ್ಯವೂ ನೆನಪಿಟ್ಟುಕೊಳ್ಳಬೇಕು.

ನಾನು ಅದಕ್ಕಾಗಿಯೇ ನಿಮಗೆ ಚೆನ್ನಾಗಿ ಕಾಣಿಸುವ ಜಾಗದಲ್ಲಿ ಬರೆಯಲು ಹೇಳುತ್ತಿದ್ದೇನೆ. "ನಾನು ಆತ್ಮ"ಎಂಬುದು ಯಾವಾಗಲೂ ಕಾಣಿಸುತ್ತಿರಬೇಕು. ಕಾರಣ ನಾವು ಮಾಯೆಯಲ್ಲಿ ಮುಳುಗಿ, ಮರೆತು ಹೋಗುತ್ತೇವೆ. ಆದರೆ ಪ್ರತಿದಿನ ಹಾಗೆ

ಓದಿಕೊಳ್ಳುತ್ತಾ ನಾವು ಪುನಃ ನೆನಪು ಮಾಡಿಕೊಳ್ಳುತ್ತಿರಬೇಕು. ಏಕೆಂದರೆ? ನಾನು ದೇಹ ಎಂದುಕೊಂಡರೆ ಮಾಡುವ ಕೆಲಸಗಳು ಒಂದು ರೀತಿಯಲ್ಲಿ ಇರುತ್ತವೆ. ನಾನು ಆತ್ಮ ಎಂದು ಕೊಂಡರೆ ಮಾಡಬೇಕಾದ ಕೆಲಸಗಳು ಇನ್ನೊಂದು ರೀತಿಯಲ್ಲಿ ಇರುತ್ತವೆ. ಈಗ ಈ ಸಬ್ಜೆಕ್ಟ್ ನಾವು ಕೇಳಿರುವುದರಿಂದ ಇದನ್ನು ನೀವು ಚೆನ್ನಾಗಿ ಜೀರ್ಣ ಮಾಡಿಕೊಳ್ಳಬೇಕು. ಇಲ್ಲಿಯವರೆಗೂ ತಿಳಿದುಕೊಂಡತಹವೆಲ್ಲಾ ಒಂದು ರೀತಿಯಾದರೇ, ಈಗ ನಾವು ತಿಳಿದುಕೊಳ್ಳುವಂತಹವೆಲ್ಲ ಇನ್ನೊಂದು ರೀತಿ. ಅದಕ್ಕಾಗಿ ಇಷ್ಟು ವಿವರವಾಗಿ ಹೇಳುತ್ತಿದ್ದೇನೆ. ಇದೆಲ್ಲಾ ಏತಕ್ಕಾಗಿ ಎಂದರೆ ನೀವು ಜನ ಲೋಕವನ್ನು ದಾಟುವುದಕ್ಕಾಗಿಯೇ.

ಏಕೆಂದರೆ? "ಲೈಫ್ ಆಫ್ಟರ್ ಡೆತ್" ಎಂದರೆ ಹಲವಾರು ವಿಷಯಗಳು ಇವೆ! ಬಹಳಷ್ಟು ಆಲೋಚಿಸಬೇಕು! ಬಹಳಷ್ಟು ತಿಳಿದುಕೊಳ್ಳಬೇಕು! ಸುಮ್ಮನೆ ಸತ್ತು ಹೋದ ನಂತರ ಮೇಲಕ್ಕೆ ಹೋಗುತ್ತೇವೆ, ಯಾವುದೋ ಲೋಕಕ್ಕೆ ಹೋಗುತ್ತೇವೆ, ಅಲ್ಲಿ ಕೆಲವು ದಿನಗಳು ಇರುತ್ತೇವೆ, ಪುನಹ ಭೂಮಿ ಮೇಲೆ ಬರುತ್ತೇವೆ ಎಂದು ಅಂದುಕೊಂಡರೆ? ಏನು ಪ್ರಯೋಜನವಿಲ್ಲ. ಆದ್ದರಿಂದ ಖಡ್ಡಾಯವಾಗಿ ಇವುಗಳ ಬಗ್ಗೆ ಆಲೋಚಿಸಿ. ಭೂಮಿ ಮೇಲೆ ಸ್ತ್ರಿಯಾದರೂ ಸರಿ! ಪುರುಷನಾದರೂ ಸರಿ! ಶರೀರ ಬಿಟ್ಟರೆ ಎಲ್ಲರೂ ಆತ್ಮಗಳೇ! ಯಾರಾದರೂ ಸರಿ ಶರೀರ ಇರುವವರೆಗೆ ಮಾತ್ರ ಸ್ತ್ರೀಯಾದರು, ಪುರುಷನಾದರು. ಅಷ್ಟೇ ಅಲ್ಲ ಈ ಕುಲ, ಆ ಕುಲ... ಈ ಮತ, ಆ ಮತ... ಈ ದೇಶ, ಆ ದೇಶ... ಇವೆಲ್ಲವೂ ಈ ಶರೀರ ಇರುವವರೆಗೂ ಅಷ್ಟೇ. ಆದ್ದರಿಂದ ಶರೀರದ ಬಗ್ಗೆ ಆಲೋಚಿಸಬಾರದು, ನಾವು ಆತ್ಮಗಳಾಗಿರುವುದರಿಂದ ಆತ್ಮದ ಬಗ್ಗೆ ಆಲೋಚಿಸಬೇಕು. ನಮ್ಮದು ಭೂಲೋಕವಲ್ಲ. ಭೂಮಿ ಎಂಬುದು ನಮಗೆ ಪರಲೋಕ. ಪರಲೋಕಗಳೇ ನಮ್ಮ ಸ್ವಂತ ಲೋಕಗಳು. ಆತ್ಮಗಳಾದ ನಾವು ಇರುವುದು ಇಲ್ಲಿ ಅಲ್ಲ, ಪರಲೋಕಗಳಲ್ಲಿಯೇ.

ನಾವು ಭೂಲೋಕದಿಂದ ಅಲ್ಲಿಗೆ ಹೋಗುವುದಿಲ್ಲ, ಮೇಲಿನ ಲೋಕಗಳಿಂದ ಇಲ್ಲಿಗೆ ಬಂದಿದ್ದೇವೆ. ಆದ್ದರಿಂದ ಮೊದಲು ಇದನ್ನು ತಿಳಿಯಬೇಕು. ಏಕೆಂದರೆ? ಪ್ರತಿಯೊಬ್ಬರು ಕೆಲವು ಅನುಭವಗಳನ್ನು ಹೊಂದಲು, ಅವುಗಳ ಮೂಲಕ ಕೆಲವು ಪಾಠಗಳನ್ನು ಕಲಿತುಕೊಳ್ಳಲು, ಧ್ಯಾನ ಸಾಧನ ಮಾಡಲು, ಸ್ವಲ್ಪ ಜ್ಞಾನವನ್ನು ಸಂಪಾದಿಸಿಕೊಳ್ಳಲು, ಇಲ್ಲಿಗೆ ಅಂದರೆ ಭೂಮಿ ಮೇಲೆ ಬಂದಿದ್ದೇವೆ ಅಷ್ಟೇ ಹೊರತು. ಭೂಮಿಯನ್ನು ನಮ್ಮ

ಸ್ವಂತ ಜಾಗ ಅಲ್ಲ. ಅದೇರೀತಿ ಇಲ್ಲಿ ನಮ್ಮ ಬಳಿ ಇರುವಂತಹವೆಲ್ಲಾ ನಮ್ಮ ಸ್ವಂತವಲ್ಲ, ಇಲ್ಲಿರುವವರೆಲ್ಲಾ ನಮ್ಮವರಲ್ಲ. ಇವೆಲ್ಲವೂ ಇಲ್ಲಿ ಇರುವವರೆಗೆ ಮಾತ್ರ. ಯಾವಾಗ ನಾವು ಶರೀರವನ್ನು ಬಿಡುತ್ತೇವೆಯೋ! ಭೂಮಿಯ ಮೇಲೆ ಇರುವ ಯಾವುದರೊಂದಿಗೂ ಸಹ ಸಂಬಂಧ ಇರುವುದಿಲ್ಲ, ಎಲ್ಲವನ್ನು ಬಿಟ್ಟು ಮೇಲಕ್ಕೆ ಹೊರಟು ಹೋಗಬೇಕು. ಈ ವಿಷಯವನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಳ್ಳಬೇಕು.

ಆದ್ದರಿಂದ ಪರಲೋಕವೇ ನಮ್ಮ ಸ್ವಂತ ಲೋಕ. ಅಲ್ಲಿ ನಮ್ಮ ಬೆಳವಣಿಗೆ, ಪ್ರಗತಿ, ಶ್ರೇಷ್ಠತೆ ಎಲ್ಲವೂ ಇರುತ್ತವೆ. ಆದ್ದರಿಂದ ಭೂಮಿಯ ಮೇಲೆ ಇರುವ ಶ್ರೇಷ್ಠತೆ, ಶ್ರೇಷ್ಠತೆಯಲ್ಲ. ಏಕೆಂದರೆ? ಭೂಮಿಯ ಮೇಲೆ ಸಿ.ಎಂ. ಆದರೂ ಶ್ರೇಷ್ಠ ವ್ಯಕ್ತಿ ಆದಂತೆ ಅಲ್ಲ. ಏಕೆಂದರೆ? ಭೂಮಿಯ ಮೇಲೆ ಎಷ್ಟು ದಿನಗಳು ಇರುತ್ತಾರೆ? ಆಲೋಚಿಸಿ! ಎಷ್ಟು ಜನ ಸಿ.ಎಂ. (ಮುಖ್ಯಮಂತ್ರಿ)ಗಳು ಹೊರಟು ಹೋಗಿಲ್ಲ? ಪಿ.ಎಂ. (ಪ್ರಧಾನಮಂತ್ರಿ) ಗಳು ಹೊರಟುಹೋಗಿಲ್ಲ? ಆದ್ದರಿಂದ ಸಿ.ಎಂ. ಆದರೂ ಪಿ.ಎಮ್. ಆದರೂ ಶ್ರೇಷ್ಠವಲ್ಲ. ಕಾರಣ ಆ ಭೋಗ ಕೆಲವು ದಿನಗಳು ಮಾತ್ರ. ಅದನ್ನು ನೋಡಿ ಕೊಂಡು ಬೀಗುವುದೇನೂ ಇಲ್ಲ. ಮೇಲಿನ ಲೋಕಗಳಲ್ಲಿ ಹೊಂದಿದ ಹಿರಿಮೆಯೇ ಶಾಶ್ವತ. ಅದನ್ನು ಹೊಂದಬೇಕು. ನಾನು ಒಂದೇ ಹೇಳುತ್ತಿದ್ದೇನೆ ಕೊನೆಗೆ ನೀವು ಸ್ವರ್ಗಲೋಕಕ್ಕೆ ಹೋದರೂ ದೊಡ್ಡ ಪ್ರಯೋಜನವೇನು ಇಲ್ಲ.

ನಮಗೆ ಪಂಡಿತರು ಪುಣ್ಯ ಮಾಡಿ ಸ್ವರ್ಗಕ್ಕೆ ಹೋಗಬೇಕು ಎನ್ನುತ್ತಾರೆ. ಆದರೆ ಸ್ವರ್ಗ ಎಂಬುದು ಜನಾಲೋಕಕ್ಕಿಂತ ಕೆಳಗಿರುವ ಲೋಕ! ಆದ್ದರಿಂದ ಸ್ವರ್ಗಲೋಕವನ್ನು ಸಹ ದಾಟಬೇಕು. ಜನಾಲೋಕಕ್ಕಿಂತ ಮೇಲಿರುವ ಒಂದು ಲೋಕಕ್ಕೆ  ಸೇರಿಕೊಂಡರೂ ನೀನು ಶ್ರೇಷ್ಠನೇ! ಏಕೆಂದರೆ? ಮೊದಲಿಗೆ ಸತ್ಯಲೋಕದವರೆಗೂ ಹೋಗುವ ಅವಶ್ಯಕತೆ ಇಲ್ಲ, ಜನಾಲೋಕವನ್ನು ದಾಟಿ ಮಹಾಲೋಕಕ್ಕೆ ಸೇರಿಕೊಂಡರೂ ನೀವು ಭೂಮಿಯ ಮೇಲೆ ಬಹಳ ಶ್ರಮಪಟ್ಟಂತೆಯೇ! ಬಹಳ ಕಷ್ಟ ಪಟ್ಟಂತೆಯೇ! ಬಹಳ ಸಾಧಿಸಿದಂತೆಯೇ! ಆದ್ದರಿಂದ ಭೂಮಿಯ ಮೇಲೆ ಮಾಡುವ ಶ್ರಮದಿಂದಲೇ ಆ ಜನಾ ಲೋಕವನ್ನು ದಾಟುವ ಸ್ಥಿತಿಯನ್ನು ಯಾರಾದರೂ ಸಂಪಾದಿಸಬಹುದು.

ಏನೇ ಆದರೂ ಜನಾಲೋಕವನ್ನು ದಾಟಿದರೆ ಮಾತ್ರ ಎಲ್ಲರೂ ಬಯಸುವ ಮೋಕ್ಷ ಎಂಬುದು ಸಿದ್ಧಿಸುವುದಿಲ್ಲ, ಆ ಸ್ಥಿತಿ ಬರುವುದಿಲ್ಲ. ಏಕೆಂದರೆ? ಸತ್ಯ ಲೋಕಕ್ಕೆ ಹೋದರೆ ಮಾತ್ರ ಮೋಕ್ಷ ಸಿಗುತ್ತದೆ. ಇದನ್ನೇ ಭಗವದ್ಗೀತೆಯಲ್ಲಿಯೂ ಸಹ ಹೇಳಲಾಗಿದೆ.

**ಶ್ಲೋ : ಅಬ್ರಹ್ಮ ಭುವನಾಲ್ಲೋಕಾ: ಪುನರಾವರ್ತಿನೋ–ರ್ಜುನ।**

**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ॥ (ಭ. ಗೀ.–8–16)**

ತಾ:–ಅರ್ಜುನಾ! ಬ್ರಹ್ಮಲೋಕ ಅಂದರೆ ತಪೋಲೋಕವನ್ನು ಸೇರಿದರೂ ಪುನಃ ಭೂಲೋಕದಲ್ಲಿ ಜನಿಸಬೇಕಾದದ್ದೇ ಆದರೆ ನಾನಿರುವ ಸತ್ಯಲೋಕವನ್ನು ಸೇರಿದರೆ ಅವರು ಭೂಮಿಯ ಮೇಲೆ ಪುನಃ ಜನಿಸಬೇಕಾದ ಅಗತ್ಯವಿಲ್ಲ.

ಬಹಳಷ್ಟು ಜನ ಧ್ಯಾನಕ್ಕೆ ಬಂದ ತಕ್ಷಣವೇ, ಕೆಲವು ದಿನಗಳು ಧ್ಯಾನ ಮಾಡಿ ಮೂರನೇ ಕಣ್ಣು ಉತ್ತೇಜನಗೊಂಡಿತೆಂದು, ಉತ್ತೇಜನಗೊಳ್ಳುವುದೇನೋ ಎಂದುಕೊಳ್ಳುತ್ತಾರೆ. ಆದರೆ ಮೂರನೇ ಕಣ್ಣು ಅಂದರೆ ಅಷ್ಟು ಸುಲಭವೇ? ಏನೋ ಕೆಲವು ದೃಶ್ಯಗಳು ಕಂಡ ತಕ್ಷಣವೇ "ಥರ್ಡ್ ಐ ಮಾಸ್ಟರ್" ಆಗಿದ್ದೇನೆ ಎಂದುಕೊಳ್ಳುತ್ತಾರೆ. ಆದರೆ ಅದಕ್ಕೆ ಎಷ್ಟು ಕಷ್ಟಪಡಬೇಕು? ಎಷ್ಟು ಶ್ರಮ ಪಡಬೇಕು? ಎಷ್ಟು ಅಭಿವೃದ್ಧಿ ಹೊಂದಬೇಕು? ಮೂರನೇ ಕಣ್ಣು ಎಂದರೆ ಅಷ್ಟು ಸುಲಭವೇ? ತಮಾಷೆಯೇ? ಆದ್ದರಿಂದ ಈಗ ನಾವು ಜನಾಲೋಕವನ್ನು ದಾಟಬೇಕೆಂದರೆ ಏನು ಮಾಡಬೇಕೆಂದು ತಿಳಿದುಕೊಳ್ಳೋಣ.

ಬಹಳಷ್ಟು ಜನ ಏನು ಯೋಚಿಸುತ್ತಾರೆಂದರೆ? ಧ್ಯಾನವೆಂದರೆ ತಪಸ್ಸು ಅಲ್ಲವೇ? ಹಾಗಾದರೆ ನಾವು ತಪಸ್ಸು ಮಾಡುತ್ತಿರುವಂತೆಯೇ ಅಲ್ಲವೇ? ಆದ್ದರಿಂದ ತಪೋಲೋಕಗಳಿಗೆ ಹೊರಟು ಹೋಗುತ್ತೇವೆಯೇನೋ ಎಂದು ಕೊಳ್ಳುತ್ತಾರೆ. ಆದರೆ ತಿಳಿದುಕೊಳ್ಳಿ! ನೀವು ಸುಮ್ಮನೆ ಧ್ಯಾನಕ್ಕೆ ಬಂದರೆ, ಧ್ಯಾನ ಮಾಡುತ್ತಿದ್ದರೆ ತಪೋಲೋಕ ಪ್ರಾಪ್ತಿಯಾಗುವುದಿಲ್ಲ. ಕಾರಣ... ಧ್ಯಾನ ಮಾಡುವವರಲ್ಲಿ ಶೇಕಡ 90ರಷ್ಟು ಅಂದರೆ ಬಹಳಷ್ಟು ಜನ ದೇಹದ ಲಾಭಗಳು ಅಂದರೆ ರೋಗಗಳಿಗೋಸ್ಕರ, ಕೋರಿಕೆಗಳಿಗೋಸ್ಕರ, ಅನುಭವಗಳಿಗೋಸ್ಕರ ಮಾಡುತ್ತಿದ್ದಾರೆ, ಇವುಗಳೇ ಶ್ರೇಷ್ಠವಾದವುಗಳೆಂದು ಭಾವಿಸುತ್ತಿದ್ದಾರೆ. ಬಹಳಷ್ಟು ಅಭಿವೃದ್ಧಿ ಹೊಂದಿದ್ದೇವೆ ಎಂದುಕೊಳ್ಳುತ್ತಾ ಅವುಗಳಿಗೋಸ್ಕರವೇ ಮಾಡುತ್ತಿದ್ದಾರೆ. ಬಹಳಷ್ಟು ಜನರಿಗೆ ಹಲವಾರು ಕೋರಿಕೆಗಳು ಇರುತ್ತವೆ. ಧ್ಯಾನ ಮಾಡಿದರೆ ಆ ಲಾಭಗಳು ಬರುತ್ತವೆ, ಬಯಕೆಗಳು ಈಡೇರುತ್ತವೆ, ಕಷ್ಟಗಳು ಹೋಗುತ್ತವೆ ಎನ್ನುವಂತಹ ಭಾವನೆಯಿಂದ ಮಾಡುತ್ತಿರುತ್ತಾರೆ. ಅಷ್ಟೇ ಹೊರತು ಯಾವುದೇ ಕೋರಿಕೆ ಇಲ್ಲದಂತೆ ಧ್ಯಾನವನ್ನು ಮಾಡುವುದಿಲ್ಲ. ಆದ್ದರಿಂದ ಈ ಬಯಕೆಗಳಿಂದ ಧ್ಯಾನ ಮಾಡಿದರೆ ಯಾವುದೇ ಪ್ರಯೋಜನವಿಲ್ಲ, ಕಾರಣ ಅವರು ಜನಾಲೋಕವನ್ನು ದಾಟುವುದಿಲ್ಲ.

ಕಾರಣ ಅವರು ಆತ್ಮದ ಲಾಭಕ್ಕೋಸ್ಕರ ಧ್ಯಾನ ಮಾಡಲಿಲ್ಲ. ಯಾವಾಗಲೂ ಬಯಕೆಗಳು, ಸಂಕಲ್ಪಗಳೊಂದಿಗೆ ಧ್ಯಾನ ಮಾಡುತ್ತಾರೆ. ಮಾಸ್ಟರ್ಸ್ ಸಹ ಆ ಸಲಹೆಗಳನ್ನೇ ನೀಡುತ್ತಿರುತ್ತಾರೆ. ಏನು ಹೇಳುತ್ತಾರೆಂದರೆ? ಸಂಕಲ್ಪಗಳನ್ನು ಇಟ್ಟುಕೊಂಡು ಧ್ಯಾನ ಮಾಡು... ನಿನ್ನ ಸಮಸ್ಯೆಗಳು ಹೋಗುತ್ತವೆ, ನಿನ್ನ ಕಷ್ಟಗಳು ಪರಿಹಾರವಾಗುತ್ತವೆ, ರೋಗಗಳು ವಾಸಿಯಾಗುತ್ತವೆ ಎನ್ನುತ್ತಾರೆ.

ಆಲೋಚಿಸಿ "ಆತ್ಮವಾದ ನೀನು ಬಂದಿರುವುದು ಏತಕ್ಕಾಗಿ? ದೇಹದ ಲಾಭಗಳಿಗೋಸ್ಕರವೇ? ಆತ್ಮದ ಉನ್ನತಿಗಾಗಿಯೇ? ಸದಾ ದೇಹದ ಲಾಭಗಳಿಗೋಸ್ಕರ ಧ್ಯಾನ ಮಾಡಿದರೆ? ಆತ್ಮ ಉನ್ನತ ಲೋಕಗಳಿಗೆ ಹೇಗೆ ಹೋಗುತ್ತದೆ? ಜನಾ ಲೋಕವನ್ನು ಹೇಗೆ ದಾಟುತ್ತದೆ? ಯಾವಾಗಲೂ ದೇಹಕ್ಕೋಸ್ಕರವೇ ಕೆಳಗೆ, ಮೇಲೆ ಬೀಳುತ್ತಿದ್ದರೆ ಆತ್ಮ ಉನ್ನತ ಲೋಕಗಳಿಗೆ ಹೇಗೆ ಹೋಗುತ್ತದೆ? ವಾಸ್ತವವಾಗಿ ಆತ್ಮಕ್ಕಾಗಿ ನೀನು ಏನು ಮಾಡುತ್ತಿರುವೆ ಎಂದು ಆಲೋಚಿಸುತ್ತಿಲ್ಲವಲ್ಲ? ಯಾವಾಗಲೂ ದೇಹವೇನಾ? ಆತ್ಮದ ಬಗ್ಗೆ ಆಲೋಚಿಸಿ." ಧ್ಯಾನ ಮಾಡಿ. ಜ್ಞಾನವನ್ನು ನೀಡುವ ಪುಸ್ತಕಗಳನ್ನು ಓದಿ, ಜ್ಞಾನಿಗಳೊಂದಿಗೆ ಸಾಂಗತ್ಯ (ಸಹವಾಸ) ಮಾಡಿ, ಧ್ಯಾನ ಮಾರ್ಗದಲ್ಲಿ ಸೇವೆಗಳನ್ನು ಮಾಡಿ. ಜ್ಞಾನವನ್ನು ಸಂಪಾದಿಸಿಕೊಳ್ಳಿ. ಪತ್ರಿಯವರು ಹೇಳುತ್ತಾರಲ್ಲವೇ? "ಧ್ಯಾನದಿಂದಲೇ ಜ್ಞಾನ" ಎಂದು. ಆಗ ಆತ್ಮಗಳಾದ ನಿಮಗೆ ಉನ್ನತ ಲೋಕ ಪ್ರಾಪ್ತಿಯಾಗುತ್ತದೆ, ಜನಾ ಲೋಕವನ್ನು ದಾಟಲು ಸಾಧ್ಯವಾಗುತ್ತದೆ.

ಆದರೆ ಕೆಲವರು ಮಾಸ್ಟರ್ಸ್ ಏನು ಹೇಳುತ್ತಾರೆಂದರೆ? ರೋಗಗಳು ಕಡಿಮೆಯಾಗದ ಹೊರತು ಆತ್ಮದ ಬಗ್ಗೆ ಏಕೆ ಯೋಚಿಸಬೇಕು? ಎಂದು ಹೇಳುತ್ತಾರೆ. ಆದರೆ ಆಲೋಚಿಸಿ! ಭೂಮಿಯ ಮೇಲಿರುವ ಮಾನವರೆಲ್ಲರೂ ರೋಗಗಳಿಂದ ಧ್ಯಾನವನ್ನು ಸಹ ಮಾಡಲಾರದ ಸ್ಥಿತಿಯಲ್ಲಿ ಇದ್ದಾರೆಯೇ? ಜನಾ ಲೋಕವನ್ನು ದಾಟಬೇಕೆಂದು, ಮೋಕ್ಷವನ್ನು ಹೊಂದಬೇಕೆಂಬ ಆಕಾಂಕ್ಷೆಯಿಂದ ಇರುವವರು ಭೂಮಿಯ ಮೇಲೆ ಇಲ್ಲವೇ? ಅಂದರೆ ಏಕೆ ಇರುವುದಿಲ್ಲ? ಇರುತ್ತಾರೆ, ಅವರಿಗೋಸ್ಕರವೇ ನಾವು ಇದನೆಲ್ಲಾ ಹೇಳುತ್ತಿರುವುದು.

ಇನ್ನು ಕೆಲವರು ಮಾಸ್ಟರ್ಸ್ ಏನು ಹೇಳುತ್ತಾರೆಂದರೆ? ರೋಗಗಳು ಕಡಿಮೆಯಾಗುತ್ತವೆ ಎಂದು ನಾವು ಹೇಳದೇ ಇದ್ದರೆ ಹೊಸಬರು ಹೇಗೆ ಬರುತ್ತಾರೆ? ರೋಗಗಳಿಗೋಸ್ಕರವೇ ಅಲ್ಲವೇ ಯಾರಾದರೂ ಧ್ಯಾನಕ್ಕೆ ಬರುವುದು ಎನ್ನುತ್ತಾರೆ.

ಆದರೆ ಧ್ಯಾನಕ್ಕೆ ಬಂದು ಒಂದು ವರ್ಷವಾದರೂ, ಮೂರು ವರ್ಷಗಳಾದರೂ, ಐದು ವರ್ಷಗಳಾದರೂ ಇನ್ನೂ ದೇಹ, ರೋಗಗಳು ಎಂದು ಕುಳಿತುಕೊಂಡರೆ? ಆತ್ಮದ ಬಗ್ಗೆ ಯಾವಾಗ ಆಲೋಚಿಸುತ್ತಾರೆ? ಆತ್ಮಜ್ಞಾನವನ್ನು ಯಾವಾಗ ಸಂಪಾದಿಸಿಕೊಳ್ಳುತ್ತಾರೆ? ವಾಸ್ತವವಾಗಿ ಆತ್ಮಗಳಾದ ನೀವು ಭೂಮಿ ಮೇಲೆ ಏಕೆ ಬಂದಂತೆ? ದೇಹದ ರೋಗಗಳನ್ನು ಕಡಿಮೆ ಮಾಡಿಕೊಳ್ಳುವುದಕ್ಕಾಗಿಯೇ?

ಆಲೋಚಿಸಿ! ರೋಗಗಳು ಏಕೆ ಬಂದಿವೆ? ಆತ್ಮಜ್ಞಾನದ ಕೊರತೆಯಿಂದ ಅಲ್ಲವೇ? ಆದ್ದರಿಂದ ರೋಗಗಳು ಇರಬಾರದೆಂದರೆ? ಮೊದಲಿಗೆ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಬೇಕು, ಶ್ರಮ ಪಡಬೇಕು.

ಅದಕ್ಕಾಗಿಯೇ ನಾನು ಹೇಳುತ್ತಿದ್ದೇನೆ ಬಯಕೆಗಳಿಗಾಗಿ ಧ್ಯಾನ ಮಾಡುವವರು, ಸಂಕಲ್ಪಗಳನ್ನು ಇಟ್ಟುಕೊಂಡು ಧ್ಯಾನ ಮಾಡುವವರು ಯಾರಾದರೂ ಸರಿ ಜನಾ ಲೋಕವನ್ನು ದಾಟುವುದಿಲ್ಲ. ಆದರೆ ಯಾವಾಗ ನೀವು ನಾನು ಏನಾದರೂ ಸರಿ ಜನಾ ಲೋಕವನ್ನು ದಾಟಬೇಕು ಎಂದು ನಿರ್ಧರಿಸಿಕೊಳ್ಳುವಿರೋ! ಅಂತಹ ತೀವ್ರವಾದ ಹಂಬಲ, ಆಕಾಂಕ್ಷೆ ನಿಮ್ಮಲ್ಲಿ ಉಂಟಾಗುತ್ತದೆಯೋ! ಆಗ ಸ್ವಾರ್ಥ ಇಲ್ಲದಂತೆ ಕೋರಿಕೆಗಳು, ಸಂಕಲ್ಪಗಳು ಇಲ್ಲದಂತೆ ಶ್ವಾಸದ ಮೇಲೆ ಗಮನವರಿಸಿ ಧ್ಯಾನ ಮಾಡುತ್ತಾರೆ, ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೆ, ಆಗಲೇ ಜನಾಲೋಕವನ್ನು ದಾಟಬಲ್ಲವರಾಗುತ್ತಾರೆ.

ವಾಸ್ತವವಾಗಿ ಜನಾಲೋಕವಿದೆ ಎಂಬ ವಿಷಯವೇ ಬಹಳಷ್ಟು ಜನರಿಗೆ ಗೊತ್ತಿಲ್ಲ. ಆದರೆ ಬಹಳಷ್ಟು ಜನರಿಗೆ ಮೋಕ್ಷ ಹೊಂದಬೇಕೆಂಬ ಬಯಕೆ ಇರುತ್ತದೆ. ಆದರೆ ಮೋಕ್ಷದ ಅರ್ಥವೂ ಸಹ ತಿಳಿದಿರುವುದಿಲ್ಲ, ಆದರೆ ಆ ಪದವನ್ನು ಉಪಯೋಗಿಸುತ್ತಾ ಇರುತ್ತಾರೆ.

ಶಾಸ್ತ್ರಗಳಲ್ಲಿ ಒಂದು ವಾಕ್ಯವಿದೆ. ಏನೆಂದರೆ? "ಕಾಮಿಯಾಗದವನು ಮೋಕ್ಷಗಾಮಿ ಆಗುವುದಿಲ್ಲ". ಕಾಮೆ ಎಂದರೆ ಕಾಮ. ಕಾಮ ಎಂದರೆ ಬಯಕೆ. ಯಾವ ಬಯಕೆ? ನಾನು ಮೋಕ್ಷ ಹೊಂದಬೇಕು ಎಂಬ ಬಯಕೆ. ಕೋರಿಕೆ ಇಲ್ಲದವನು ಮೋಕ್ಷವನ್ನು ಹೊಂದಲಾರ ಎಂದರ್ಥ. ಸುಮ್ಮನೆ ಮೋಕ್ಷವನ್ನು ಹೊಂದಬೇಕು ಎಂದುಕೊಂಡರೆ ಸಾಲದು. ಅದನ್ನು ಹೊಂದಬೇಕೆಂಬ ತೀವ್ರವಾದ ಬಯಕೆ, ಕೋರಿಕೆ, ಛಲ, ಜಿಜ್ಞಾಸೆ, ಆಸಕ್ತಿ, ಹಂಬಲ ಇರಬೇಕು. ಅಷ್ಟು ಛಲ ಇರುವವನೇ ಅದನ್ನು ಸಾಧಿಸಬಲ್ಲನು.

ಪತ್ರಿಯವರು ಹೇಳುತ್ತಾರೆ "ಯದ್ಭಾವಂ ತದ್ಭವತಿ" ಎಂದು. ಅಂದರೆ "ನಿನ್ನ ಭಾವನೆ ಹೇಗಿರುತ್ತೆಯೋ? ನೀನು ಅದನ್ನೇ ಸಾಧಿಸುತ್ತೀಯಾ"ಎಂದು. ಪತ್ರಿಯವರು ಪರಿಚಯವಾದ ನಂತರ ನನಗೆ "ನಾನು ದೇಹವಲ್ಲ, ನಾನು ಆತ್ಮ" ಎಂದು ಅರ್ಥವಾಯಿತು. ಈ ಹಣ, ಸಂಪತ್ತು ಆತ್ಮವಾದ ನನಗೆ ಸ್ವಲ್ಪ ಉಪಯೋಗವಾಗುವುದಿಲ್ಲ, ಲಾಭವನ್ನು ತಂದು ಕೊಡುವುದಿಲ್ಲ, ಆತ್ಮದ ಉನ್ನತಿಯನ್ನು ಉಂಟು ಮಾಡುವುದಿಲ್ಲ, ನನಗೆ ಜ್ಞಾನವೇ ಬೇಕು ಎಂಬುದನ್ನು ತಿಳಿದುಕೊಂಡೆನು.

ಹೀಗೆ ನಾನು ಆತ್ಮ ಎಂಬ ವಿಷಯವನ್ನು ಅರ್ಥ ಮಾಡಿಕೊಂಡು ಎಲ್ಲವನ್ನೂ ತೊರೆದು ಈ ಸ್ಥಿತಿಗೆ ಸೇರಿಕೊಂಡೆನು. ಅದಕ್ಕಿಂತ ಮುಂಚೆ ಎಲ್ಲರಂತೆಯೇ ಇದ್ದೆನು. ಆದರೆ ನನ್ನಂತೆ ಯಾರಾದರೂ ಮಾಡಬಲ್ಲರು, ಸೇರಿಕೊಳ್ಳಬಲ್ಲರು.

ಇತ್ತೀಚೆಗೆ "ಕ.ಒ.ಅ"ಯಲ್ಲಿ ಪತ್ರಿಯವರು "ಯೂತ್ ಫಾರ್ ಟ್ರೂತ್" ಎಂದು ಯುವಕರೊಂದಿಗೆ ಇಂಟರ್ವ್ಯೂಗಳನ್ನು (ಸಂದರ್ಶನ) ಮಾಡಿದರು. ಅದರಲ್ಲಿ ಒಬ್ಬರು ಏನೆಂದು ಕೇಳಿದರೆಂದರೆ? ನಿಮ್ಮ ಸ್ಥಿತಿಗೆ ಬರಬೇಕೆಂದರೆ? ಎಷ್ಟು ಜನ್ಮಗಳನ್ನು ತೆಗೆದುಕೊಳ್ಳಬೇಕು? ಇಲ್ಲವೇ ಒಂದು ಜನ್ಮದಲ್ಲಿಯೇ ಸಾಧಿಸಬಹುದೇ? ಎಂದು ಕೇಳಿದರು. ಆಗ ಪತ್ರಿಯವರು ನೀನು ಪಡುವ ಶ್ರಮದ ಮೇಲೆ ಆಧಾರವಾಗಿರುತ್ತದೆ. ನೀನು ಅದಕ್ಕೆ ತಕ್ಕ ಶ್ರಮ ಪಡಬೇಕು. ನೋಡು ನಾನು ಹೇಗೆ ಮಾಡುತ್ತಿರುವೆನೋ? ನೀನು ಸಹ ಹಾಗೆ ಶ್ರಮ ಪಟ್ಟರೆ, ಈ ಜನ್ಮದಲ್ಲಿಯೇ ಸಾಧಿಸುವೆ. ನಿನ್ನಲ್ಲಿ ಅಷ್ಟು ಛಲ ಇಲ್ಲದೇ ಹೋದರೆ? ಕಡ್ಡಾಯವಾಗಿ ಬಹಳಷ್ಟು ಜನ್ಮಗಳು ಬೇಕಾಗುತ್ತದೆ ಎಂದು ಹೇಳುತ್ತಾ ಅವರು ಏನು ಹೇಳಿದರೆಂದರೆ? ನಾನು 50,000 ಪುಸ್ತಕಗಳನ್ನು ಓದಿದ್ದೇನೆ, ನೀವು ಎಷ್ಟು ಪುಸ್ತಕಗಳನ್ನು ಓದಿದ್ದೀರಾ ಎಂದು ತಿಳಿದುಕೊಳ್ಳಿ. ಅವರು ಇನ್ನೂ ಏನು ಹೇಳಿದ್ದಾರೆಂದರೆ? ನನ್ನ ಸಮಯವನ್ನು ಎಷ್ಟು ವೆಚ್ಚ ಮಾಡುತ್ತಿದ್ದೇನೆ? ನೀವು ನಿಮ್ಮ ಸಮಯವನ್ನು ಎಷ್ಟು ವೆಚ್ಚ ಮಾಡುತ್ತಿದ್ದೀರಿ? ಇದಕ್ಕೋಸ್ಕರ ನನ್ನಂತೆ ನೀವು ಶ್ರಮಪಟ್ಟರೆ ನನ್ನಂತೆ ಏಕೆ ಆಗುವುದಿಲ್ಲ? ತೀವ್ರವಾಗಿ ಶ್ರಮಪಟ್ಟರೆ ಈ ಜನ್ಮದಲ್ಲಿಯೇ ಆಗುತ್ತೀರಾ ಎಂದು ಹೇಳಿದರು.

ಅವರು ಇನ್ನೂ ನಾನು ಲಕ್ಷಾಂತರ ಜನರಿಗೆ ಧ್ಯಾನವನ್ನು ಹೇಳಿದ್ದೇನೆ. ನೀವು ಎಷ್ಟು ಜನರಿಗೆ ಹೇಳಿರುವಿರಿ ನೋಡಿಕೊಳ್ಳಿ ಎಂದು ಹೇಳಿದರು. ಆದರೆ ಬಹಳಷ್ಟು ಜನ ಯಾವಾಗಲೂ ಯಾವುದೋ ಒಂದು ಜೂಮ್ ಇಟ್ಟುಕೊಂಡು, 25 ಜನರಿಗೋ, 50

ಜನರಿಗೋ ಕೆಲವು ವರ್ಷಗಳಿಂದ ಹೇಳುತ್ತಿದ್ದಾರೆ. ಹಾಗೆ ಹೇಳಿದರೆ ಪತ್ರಿಯವರಂತೆ ಆಗುತ್ತಾರೆಯೇ? ಇವರಿಗೆ ಬುದ್ಧಿ ಇದೆಯೇ? ಬುದ್ಧಿ ಇಲ್ಲವೇ? ಕಾಲಕ್ಷೇಪಕ್ಕಾಗಿ ಅವರು ಬಂದು ಕುಳಿತುಕೊಳ್ಳುತ್ತಾರೆ, ಇವರಿಗೆ ಕಾಲಕ್ಷೇಪವಿಲ್ಲದೇ ಕೆಲವರನ್ನು ಕರೆದು ಕೋರಿಸುತ್ತಾರೆ. ಹಲವಾರು ವರ್ಷಗಳಿಂದ ಇವರೇನಾ, ಬೇರೆ ಯಾರೂ ಇಲ್ಲವೇ? ಆಲೋಚಿಸಿ? ಆದ್ದರಿಂದ ನೀವು ಜನಾ ಲೋಕವನ್ನು ದಾಟಬೇಕು ಎಂಬುದು ಅರ್ಥವಾದರೆ ಅದಕ್ಕೆ ತಕ್ಕ ಪರಿಶ್ರಮ ಪಡುತ್ತೀರಾ. ಆ ಊರ್ದ್ವಲೋಕಗಳನ್ನು ಸೇರುತ್ತೀರ. ಮೋಕ್ಷಸ್ಥಿತಿಯನ್ನು ಹೊಂದುವಿರಿ. ಅಂದರೆ ಸತ್ಯ ಲೋಕಕ್ಕೆ ಸೇರುವಿರಿ. ಆದ್ದರಿಂದ ಅದಕ್ಕೆ ಛಲ ಇರಬೇಕು. ಆದ್ದರಿಂದ ನೆನಪಿನಲ್ಲಿಡಿ, ಜನಾ ಲೋಕವನ್ನು ದಾಟಬೇಕೆಂದರೆ? ಬಹಳಷ್ಟು ಶ್ರಮ ಪಡಬೇಕು ಅಂದರೆ  ತೀವ್ರವಾದ ಸಾಧನೆ ಮಾಡಬೇಕು, ಹೀಗೆ ಕೆಲವು ತಿಂಗಳುಗಳು, ವರ್ಷಗಳು ಕಷ್ಟ ಪಟ್ಟರೆ ಸಾಧಿಸಬಹುದು. ಅದಕ್ಕೆ ಎರಡು ಗಂಟೆಗಳ ಧ್ಯಾನ ಸಾಕಾಗುವುದಿಲ್ಲ, ಇನ್ನು ಸಮಯವನ್ನು ಹೆಚ್ಚಿಸಿ ಎಂದು ನಾನು ಹೇಳಲು ಕಾರಣ. ನಾವು ಬೆಳೆಯಬೇಕು ಎಂದರೆ ಉನ್ನತ ಸ್ಥಿತಿಗೆ ಸೇರಬೇಕು. ಅಂದರೆ ಇನ್ನೂ ಬಹಳಷ್ಟು ಮನಸ್ಸು ಶುದ್ದಿಯಾಗಬೇಕು. ಧ್ಯಾನದೊಂದಿಗೆ ಆಹಾರ ನಿಯಮಗಳನ್ನು ಸಹ ಕಟ್ಟುನಿಟ್ಟಾಗಿ ಪಾಲಿಸಬೇಕು. ನಿಸ್ವಾರ್ಥವಾಗಿ ಜನರಿಗೆ ಸೇವೆ ಮಾಡಬೇಕು. ಅವರ ಬಗ್ಗೆ, ಅವರ ಬಗ್ಗೆ ಆಲೋಚಿಸಬಾರದು. ಎಲ್ಲರೂ ಚೆನ್ನಾಗಿರಬೇಕು, ಎಲ್ಲರೂ ಲಾಭವನ್ನು ಹೊಂದಬೇಕು ಎಂದು ಭಾವಿಸಬೇಕು. ಹಾಗೆ ಸೇವೆ ಮಾಡಿದವರಲ್ಲಿ ಗಾಂಧಿ ಮಹಾತ್ಮ, ಮದರ್ ತೆರೇಸಾ ಇಂತಹವರಷ್ಟೇ ಅಲ್ಲ, ಇನ್ನೂ ಅನೇಕರು ಇದ್ದಾರೆ. ಅವರ ತಮ್ಮ ಸ್ವಾರ್ಥವನ್ನು ಬಿಟ್ಟು, ತಮಗೋಸ್ಕರ ಅಲ್ಲದೇ ಪರರಿಗೋಸ್ಕರವೇ, ಪ್ರಪಂಚಕ್ಕಾಗಿಯೇ ಜೀವಿಸಿ ತಮ್ಮ ಜೀವನವನ್ನೆಲ್ಲ ಇತರರಿಗಾಗಿ ಮುಡುಪಾಗಿಟ್ಟರು. ಇಂತಹವರನ್ನು ಏನೆಂದು ಕರೆಯುತ್ತಾರೆಂದರೆ? ಮಹಾತ್ಮರು ಎನ್ನುತ್ತಾರೆ. ಇಂತಹವರು ಮಹಾ ಲೋಕವನ್ನು ಸೇರುವರು ಅಂದರೆ ಜನಾಲೋಕವನ್ನು ದಾಟುವರು. ಆದ್ದರಿಂದ ಯಾರು ಜನಾ ಲೋಕವನ್ನು ದಾಟಬಲ್ಲರು ಎಂದರೆ? ಗಾಂಧೀಜಿಯವರಂತೆ, ಮದರ್ ತೆರೆಸಾರಂತೆ, ತಮ್ಮ ಸ್ವಾರ್ಥವನ್ನು ಬಿಟ್ಟು ನನಗೋಸ್ಕರ ಅಲ್ಲದೇ ಪರರಿಗೋಸ್ಕರವೇ, ಪ್ರಪಂಚಕ್ಕೋಸ್ಕರವೇ ಜೀವಿಸಿ ತಮ್ಮ ಜೀವನವನ್ನೆಲ್ಲ ಇತರರಿಗೋಸ್ಕರ ಮುಡುಪಾಗಿಟ್ಟವರು ಮಹಾಲೋಕಕ್ಕೆ ಸೇರಿಕೊಳ್ಳುವರು.

ನೆನಪಿನಲ್ಲಿಡಿ ಇನ್ನೂ ಯಾರಾದರೂ ಸರಿ ಅಲ್ಲಿಯೇ ನಿಲ್ಲದೇ, ಮನಸ್ಸನ್ನು ಮಹಾಪರಿಶುದ್ಧಿ ಮಾಡಿಕೊಂಡರೆ? ಅಂತಹವರನ್ನು ಪತ್ರಿಯವರು ಏನೆಂದು ಕರೆಯುತ್ತಾರೆಂದರೆ? ಶುದ್ಧ ಸಾತ್ವಿಕದಲ್ಲಿ ಇರುವವರು ಎನ್ನುತ್ತಾರೆ. ಹೀಗೆ ಮಹಾಪರಿಶುದ್ಧಿ ಮಾಡಿಕೊಂಡವರು ನಿರುಗುಣಕ್ಕೆ ತುಂಬಾ ಹತ್ತಿರದಲ್ಲಿರುವವರೆಂದು ಪರಿಗಣಿಸಲಾಗುತ್ತದೆ.

ಆಗ ಅವರು ಮನಸ್ಸಿನ ಪ್ರಭಾವವನ್ನು ಪೂರ್ತಿಯಾಗಿ ಕಳೆದುಕೊಳ್ಳುತ್ತಾರೆ ಅಂದರೆ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಾರೆ. ಅಂದರೆ ಮನಸ್ಸು ಇದೆಯೇ? ಇಲ್ಲವೇ? ಎಂಬ ಸ್ಥಿತಿಗೆ ಬಂದಂತೆ, ಅದೇ ಶುದ್ಧ ಸಾತ್ವಿಕ. ನಮಗೆ ರಾಮಾಯಣದಲ್ಲಿ ಆಂಜನೇಯ ಸ್ವಾಮಿಯನ್ನು ಉದಾಹರಣೆಯಾಗಿ ಹೇಳುತ್ತಾರೆ. ಈ ಸ್ಥಿತಿಗೆ ಸೇರಿದವರಿಗೆ ಸಿದ್ದಿಗಳು, ಶಕ್ತಿಗಳು ಬರುತ್ತವೆ, ಇನ್ನೂ ಹಲವಾರು ಲಾಭಗಳು ಉಂಟಾಗುತ್ತವೆ. ಆಂಜನೇಯ ಸ್ವಾಮಿಗೆ ಬಹಳಷ್ಟು ಸಿದ್ದಿಗಳು ಇವೆ ಎಂದು ಹೇಳುತ್ತಾರೆ ಅಲ್ಲವೇ!

ಅಂತಹವರಿಗೆ ಮೂರನೆಯ ಕಣ್ಣು ಬರುತ್ತದೆ. ಇಂತಹವೆಲ್ಲಾ ಈ ಸ್ಥಿತಿಯಲ್ಲಿ ಬರುತ್ತವೆ, ಅಷ್ಟೇ ಹೊರತು ಧ್ಯಾನದಲ್ಲಿ ಕುಳಿತುಕೊಂಡ ತಕ್ಷಣವೇ ಬರುವುದಿಲ್ಲ. ನೋಡಿ ಆಂಜನೇಯ ಸ್ವಾಮಿ ಎರಡನೇ ವರ್ಷದ ವಯಸ್ಸಿನಿಂದಲೇ ಧ್ಯಾನ ಮಾಡಿದರು. ಅಂತಹವರಿಗೆ ಧ್ಯಾನವನ್ನು ಬಿಟ್ಟರೆ ಬೇರೊಂದರ ಯೋಚನೆ ಇರುವುದಿಲ್ಲ. ಅಂತಹವರು ಅಂತ್ಯವಿಲ್ಲದ ಹಂಬಲದಿಂದ ಧ್ಯಾನ ಮಾಡುತ್ತಿರುತ್ತಾರೆ, ಇದನ್ನೇ ತಪಸ್ಸು ಎನ್ನುತ್ತಾರೆ.

ಯಾರಾದರೇ ಈ ರೀತಿಯ ಸಾಧನೆ ಅಂದರೆ ತಪಸ್ಸನ್ನು ಮಾಡುತ್ತಾರೋ! ಅವರಿಗೆ ಯಾವುದೇ ಕೋರಿಕೆಗಳು ಇರುವುದಿಲ್ಲ, ಯಾವುದೇ ಸಂಕಲ್ಪಗಳು ಇರುವುದಿಲ್ಲ, ಯಾವುದೇ ಆಸೆಯಾಗಲೀ, ಯಾವುದೇ ಸ್ವಾರ್ಥವಾಗಲೀ ಏನೂ ಇರುವುದಿಲ್ಲ. ಅವರಿಗೆ ಧ್ಯಾನವೇ ಅಂದರೆ ತಪಸ್ಸೇ ಅವರ ಕೆಲಸ. ಆ ಹಂಬಲದಿಂದ ತೀವ್ರವಾದ ಸಾಧನೆಯನ್ನು ವರ್ಷಗಳಗಟ್ಟಲೆ ಮಾಡುತ್ತಾರೆ. ಅಂತಹವರು ಶರೀರವನ್ನು ಬಿಟ್ಟ ನಂತರ ತಪೋಲೋಕಗಳಿಗೆ ಹೋಗುತ್ತಾರೆ. ಶುದ್ಧ ಸಾತ್ವಿಕ ಸ್ಥಿತಿ ಅಂದರೆ ಮಹಾ ಪರಿಶುದ್ಧಸ್ಥಿತಿ. ಇವರು ಸತ್ಯ ಲೋಕವನ್ನು ಸೇರುವುದಿಲ್ಲ. ಆದರೆ ಸತ್ಯ ಲೋಕವನ್ನು ಸೇರಲು ಬಹಳ ಕಷ್ಟಪಟ್ಟರು. ಛಲದಿಂದ ಧ್ಯಾನ ಮಾಡಿದರು.

ನಾವು ಎಲ್ಲರಲ್ಲೂ ಅಂತಹ ಹಂಬಲವನ್ನು ಉಂಟು ಮಾಡುವುದಕ್ಕಾಗಿಯೇ ಭೀಮವರಂನಲ್ಲಿ ಮೂರು ದಿನಗಳ ಕ್ಲಾಸುಗಳನ್ನು ಇಡುತ್ತಿದ್ದೇವೆ. ಧ್ಯಾನವನ್ನು

ಯಾವುದೋ ಹರಕೆಯಂತೆ ಒಂದು ಗಂಟೆ ಕುಳಿತುಕೊಳ್ಳುವುದು, ಎದ್ದು ಹೋಗುವುದಲ್ಲ. ಭೀಮವರಂನಲ್ಲಿ 3–4 ಗಂಟೆಗಳು ಒಂದೇ ಸಿಟ್ಟಿಂಗ್ ನಲ್ಲಿ ಸುಲಭವಾಗಿ ಕುಳಿತುಕೊಳ್ಳುತ್ತಾರೆ. ಅಲ್ಲಿ ಸೈಲೆನ್ಸ್ ಮೆಡಿಟೇಶನ್ ಅಂದರೆ ಪತ್ರಿಯವರು ಹೇಳಿದ 'ಶ್ವಾಸದ ಮೇಲೆ ಗಮನ' ಧ್ಯಾನ ಅಂದರೆ ಸರಿಯಾದ ಧ್ಯಾನ ಮಾಡುತ್ತಾರೆ. ಆದ್ದರಿಂದ ಫಲಿತಾಂಶಗಳು ಉತ್ತಮವಾಗಿರುತ್ತವೆ.

ಬಹಳಷ್ಟು ಜನ ಗೈಡಿಂಗ್ (ಮಾರ್ಗದರ್ಶನ) ಮಾಡುತ್ತಿದ್ದಾರೆ. ಗೈಡಿಂಗ್ ನಲ್ಲಿ ಮನಸ್ಸು ಕೆಲಸ ಮಾಡುತ್ತದೆ. ಆದ್ದರಿಂದ ಆಲೋಚನಾ ರಹಿತ ಸ್ಥಿತಿ ಬರುವುದಿಲ್ಲ, ಅಂದರೆ ಧ್ಯಾನಸ್ಥಿತಿ ಬರುವುದಿಲ್ಲ, ಆದ್ದರಿಂದ ಶಕ್ತಿ ಬರುವುದಿಲ್ಲ. ಏಕೆಂದರೆ? ಆಲೋಚನಾ ರಹಿತ ಸ್ಥಿತಿ ಎಂದರೆ ಆಲೋಚನೆಗಳು ಇಲ್ಲದೇ ಇರುವುದು, ಅಂದರೆ ಮನಸ್ಸು ಕೆಲಸ ಮಾಡದ ಸ್ಥಿತಿ. ಆ ಸ್ಥಿತಿಯಲ್ಲಿಯೇ ಶಕ್ತಿ ಲಭಿಸುತ್ತದೆ. ಲಾಭವನ್ನು ಹೊಂದಬಲ್ಲರು. ಜ್ಞಾನವನ್ನು ಸಂಪಾದಿಸಿಕೊಳ್ಳಬಲ್ಲರು. ಆದರೆ ಗೈಡಿಂಗ್ ನಲ್ಲಿ ಮಾಸ್ಟರ್ ಮಾತುಗಳನ್ನು ಹೇಳುತ್ತಿರುತ್ತಾರೆ, ಧ್ಯಾನ ಮಾಡುವವರು ಮನಸ್ಸಿನಿಂದ ಕೇಳಿಸಿಕೊಳ್ಳುತ್ತಿರುತ್ತಾರೆ. ಅಂದರೆ ಮನಸ್ಸು ಕೆಲಸ ಮಾಡುತ್ತಿರುವಂತೆಯೇ ಅಲ್ಲವೇ? ಆದ್ದರಿಂದ ಅವರಿಗೆ ಎಷ್ಟುಹೊತ್ತು ಕುಳಿತುಕೊಂಡರು ಶಕ್ತಿ ಬರುವುದಿಲ್ಲ.

ಆದ್ದರಿಂದ ಪತ್ರೀಜಿ ಹೇಳಿದ 'ಶ್ವಾಸದ ಮೇಲೆ ಗಮನ' ಧ್ಯಾನ ಮಾಡಿದರೆ ನಮ್ಮ ಮನಸ್ಸನ್ನು ಪರಿಶುದ್ಧ ಮಾಡಿಕೊಳ್ಳುವುದಷ್ಟೇ ಅಲ್ಲ, ಮಹಾ ಪರಿಶುದ್ಧ ಮಾಡಿಕೊಳ್ಳುತ್ತೇವೆ. ಅಪಾರ ಶಕ್ತಿಯನ್ನು ಸಂಪಾದಿಸಿಕೊಂಡು ಜನಲೋಕವನ್ನು ದಾಟುತ್ತೇವೆ.

# ಜ್ಞಾನವನ್ನು ಸಂಪಾದಿಸಿಕೊಂಡರೆ?

ಪ್ರಪಂಚದಲ್ಲಿ ಎಲ್ಲರೂ ನಾನು ದೇಹ ಎಂಬಂತೆಯೇ ಜೀವಿಸುತ್ತಿದ್ದಾರೆ. ಆದರೆ ಸತ್ಯ ಏನೆಂದರೆ? ನಾವು ಆತ್ಮಗಳೇ ಹೊರತು ದೇಹಗಳಲ್ಲ. ಇಲ್ಲಿ ಅಂದರೆ ಭೂಮಿಯ ಮೇಲೆ ಸ್ವಲ್ಪ ಸಮಯವಷ್ಟೇ ಇದ್ದು ನಂತರ ಈ ದೇಹವನ್ನು ಬಿಡುತ್ತೇವೆ. ಆತ್ಮಗಳಾದ ನಮಗೆ ಬೇಕಾದದ್ದು ಜ್ಞಾನ. ಜ್ಞಾನವನ್ನು ಸಂಪಾದಿಸಿ ಕೊಳ್ಳುವುದಕ್ಕಾಗಿಯೇ ಈ ದೇಹವನ್ನು ತೆಗೆದುಕೊಂಡಿದ್ದೇವೆ.

ಈ ದೇಹದೊಂದಿಗೆ ಮಾಡುವ ಧ್ಯಾನ ಸಾಧನೆ, ಸ್ವಾಧ್ಯಾಯ, ಸಾಂಗತ್ಯ, ಸೇವೆಗಳಿಂದಲೇ ಆತ್ಮಗಳಾದ ನಾವು ಜ್ಞಾನವನ್ನು ಸಂಪಾದಿಸಿಕೊಂಡು ಮರಣಿಸಿದ ನಂತರ ಉನ್ನತ ಸ್ಥಿತಿಯನ್ನು ಹೊಂದುತ್ತೇವೆ, ಶ್ರೇಷ್ಠವಾದ ಲೋಕಗಳಿಗೆ ಸೇರುತ್ತೇವೆ. ಅಷ್ಟೇ ಹೊರತು ಭೂಮಿಯ ಮೇಲೆ ಮಾಡುವ ಕರ್ಮಕಾಂಡಗಳಿಂದ, ಕರ್ಮಕಾಂಡಗಳ ಸಮಯದಲ್ಲಿ ಮಾಡುವ ದಾನಗಳಿಂದ ಯಾವುದೇ ಪ್ರಯೋಜನವಿಲ್ಲ.

ಬಹಳಷ್ಟು ಜನ ಮರಣಿಸಿದ ನಂತರ, ಅವರ ಮಕ್ಕಳು ಮಾಡುವ ಕರ್ಮಕಾಂಡಗಳು ಊರ್ಧ್ವಲೋಕಗಳಿಗೆ ಸೇರಿಸುತ್ತವೆ ಎಂದು ನಂಬುತ್ತಾರೆ. ಆದ್ದರಿಂದ ಸತ್ತು ಹೋದ ನಂತರ ನಡೆಯುವುದರ ಬಗ್ಗೆ ಅಷ್ಟು ಆಲೋಚನೆ ಮಾಡುವುದಿಲ್ಲ. ಅದಕ್ಕಾಗಿ ಬಹಳಷ್ಟು ಜನ ಮಗ ಹುಟ್ಟಬೇಕು ಎನ್ನುತ್ತಾರೆ. ಏಕೆ? ಅಂದರೆ ಕೊಳ್ಳಿ(ದೇಹ ತ್ಯಾಗ ಮಾಡಿದ ಶರೀರಕ್ಕೆ ಅಗ್ನಿ ಸ್ಪರ್ಶ) ಇಡುವುದಕ್ಕಾಗಿ, ಅಂದರೆ ಕರ್ಮಕಾಂಡಗಳನ್ನು ಮಾಡುವುದಕ್ಕಾಗಿ.

ಆದರೆ ಗಂಡು ಮಗನಾದರೂ ಒಂದೇ, ಹೆಣ್ಣು ಮಗಳಾದರೂ ಆದರೂ ಒಂದೇ ಎಂದು ತಿಳಿದುಕೊಳ್ಳಬೇಕು. ಏಕೆಂದರೆ ಮಗ ಮಾಡುವ ಕರ್ಮಕಾಂಡಗಳಿಂದ ಸತ್ತು ಹೋದವರಿಗೆ ಯಾವುದೇ ಪ್ರಯೋಜನವಿಲ್ಲ ಎಂದು ತಿಳಿದುಕೊಳ್ಳಬೇಕು. ಅವರು ಬದುಕಿರುವಾಗ ಅವರು ಸ್ವತಃ ಮಾಡಿಕೊಳ್ಳುವ ಕರ್ಮಗಳನ್ನಾಧರಿಸಿಯೇ ಅವರು ಹೋಗುವ ಲೋಕಗಳು ಆಧಾರಪಟ್ಟಿರುತ್ತವೆ ಎಂದು ತಿಳಿದುಕೊಳ್ಳಬೇಕು.

ಹಾಗೆಯೇ ಕರ್ಮಕಾಂಡಗಳ ಸಮಯದಲ್ಲಿ ಗಂಡು ಮಕ್ಕಳು ಮಾಡುವ ದಾನಗಳ ಫಲಿತಾಂಶ ಏನಾದರೂ ಇದ್ದರೆ, ಅದು ಸಹ ಆ ಗಂಡು ಮಕ್ಕಳಿಗೆ ಸೇರುತ್ತದೆಯೇ

ಹೊರತು ಮರಣಿಸಿದವರಿಗೆ ಸೇರುವುದಿಲ್ಲವೆಂದು ತಿಳಿದುಕೊಳ್ಳಬೇಕು. ಕಬೀರ್ ಮಹಾನುಭಾವರು ಹೇಳಿದ್ದಾರೆ ಅಲ್ಲವೇ? "ಯಾವ ಕೈ ಕರ್ಮಗಳನ್ನು ಆಚರಿಸುತ್ತದೆಯೋ! ಆ ಕೈ ಮಾತ್ರ ಫಲಿತಾಂಶಗಳನ್ನು ಅನುಭವಿಸುತ್ತದೆ" ಎಂದು.

ನಾರದ ಮಹರ್ಷಿಗಳು ಸಹ ವಾಲ್ಮೀಕಿಯೊಂದಿಗೆ ಹೇಳಿದ್ದಾರೆ ಅಲ್ಲವೇ? ನೀನು ಮಾಡಿದ ಪಾಪಗಳಲ್ಲಿ ನಿನ್ನ ಹೆಂಡತಿ ಏನಾದರೂ ಭಾಗವನ್ನು ತೆಗೆದುಕೊಳ್ಳುವಳೇನೋ ಕೇಳು?" ಎಂದರು. ಆದರೆ ವಾಲ್ಮೀಕಿ ಕೇಳಿದಾಗ, ಆಕೆ ನಿನ್ನ ಪಾಪಗಳು ನನಗೆ ಸಂಬಂಧವಿಲ್ಲ ಎಂದಳು.

ಆದ್ದರಿಂದ ನಾವು ಬದುಕಿರುವಾಗಲೇ ಈ ಶರೀರದೊಂದಿಗೆ ನಾವು ಪಡುವ ಶ್ರಮದಿಂದ, ನಾವು ಮಾಡುವ ಸಾಧನೆಗಳಿಂದ, ನಾವು ಮಾಡುವ ಸೇವೆಗಳಿಂದ ಮಾತ್ರವೇ ನಾವು ಏನನ್ನಾದರೂ ಸಾಧಿಸಬಲ್ಲೆವು.

ಅಂದರೆ ಉನ್ನತ ಲೋಕಗಳು, ಊರ್ಧ್ವಲೋಕಗಳು, ಶ್ರೇಷ್ಠ ಲೋಕಗಳು ಇವೆಲ್ಲವೂ ನಾವು ಮಾಡಿಕೊಂಡಂತಹ ಕರ್ಮಗಳಿಂದಲೇ ನಮಗೆ ಲಭಿಸುತ್ತವೆ ಎಂದು ತಿಳಿದುಕೊಳ್ಳಬೇಕು. ಅಷ್ಟೇ ಹೊರತು ಯಾರೋ ಮಾಡುವ ಕೆಲಸಗಳಿಂದ ಯಾವುದೇ ಪ್ರಯೋಜನವಿಲ್ಲ ಎನ್ನುವ ವಿಷಯವನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳಬೇಕು. ಅದು ಸ್ತ್ರೀಯಾದರೂ ಸರಿ, ಪುರುಷನಾದರೂ ಸರಿ.

ನೀವು ರಮಣ ಮಹರ್ಷಿಯನ್ನು ನೋಡಿದರೆ ತಿಳಿಯುತ್ತದೆ, ಅವರು ಜನ್ಮ ತೆಗೆದುಕೊಂಡು ಅವರ ಜೀವನದಲ್ಲಿ ಎಷ್ಟು ಸಾಧಿಸಿದರು? ಅದೇರೀತಿ ಮುಮ್ಮಡಿವರಂ ಬಾಲಯೋಗಿ ಜನ್ಮ ತೆಗೆದುಕೊಂಡು ಎಷ್ಟು ಸಾಧನೆ ಮಾಡಿದರು. ಹೀಗೆ ಯಾವುದೇ ಶ್ರೇಷ್ಠ ವ್ಯಕ್ತಿಗಳನ್ನು ನೋಡಿದರೂ, ಚಿಕ್ಕ ವಯಸ್ಸಿನಿಂದಲೇ ಅವರ ಭವಿಷ್ಯತೆಗೋಸ್ಕರ ಬಹಳಷ್ಟು ಶ್ರಮಪಟ್ಟು ಅವರ ಜೀವನವನ್ನು ರೂಪಿಸಿಕೊಂಡರು, ಶ್ರೇಷ್ಠ ವ್ಯಕ್ತಿಗಳಾದರು, ಉನ್ನತ ಲೋಕಗಳಿಗೆ ಸೇರಿಕೊಂಡರು.

ಆದ್ದರಿಂದ ಇದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಈಗ ನಾವು ಭೂಮಿಯ ಮೇಲಿದ್ದೇವೆ, ದೇಹದೊಂದಿಗೆ ಇದ್ದೇವೆ. ಅಂದರೆ ನಾವು ದೇಹಧಾರಿಗಳೇ ಹೊರತು ದೇಹಗಳಲ್ಲ, ಅಂದರೆ ದೇಹವನ್ನು ಧರಿಸಿದವರು ಅಂದರೆ ದೇಹವನ್ನು ಧರಿಸಿರುವ 'ಆತ್ಮಗಳು'. ಯಾರಾದರೂ ಸರಿ ಮೊದಲು ಈ ವಿಷಯವನ್ನು ತಿಳಿದುಕೊಳ್ಳಬೇಕು. ಎಷ್ಟು ತಿಳಿದುಕೊಂಡರೆ? ಜೀವನದಲ್ಲಿ ಅಷ್ಟು ಲಾಭ ಹೊಂದುತ್ತಾರೆ.

ನೋಡಿ! ಪೋಷಕರು ಮಕ್ಕಳ ವಿದ್ಯಾಭ್ಯಾಸಕ್ಕೆ ಅಂದರೆ ಪ್ರಾಪಂಚಿಕ ವಿದ್ಯೆಗೆ ಎಷ್ಟು ಪ್ರಾಮುಖ್ಯತೆ ನೀಡುತ್ತಾರೆ. ಅಂದಾಜು 20–25 ವರ್ಷಗಳು ಅವರನ್ನು ಓದಿಸುತ್ತಾರೆ. ಹಾಗೆ ಅವರು ಉತ್ತಮವಾಗಿ ಅಧ್ಯಯನ ಮಾಡಿದರೆ ಮಾತ್ರ ಅವರು ಶ್ರೇಷ್ಠರೆಂದು

ಭಾವಿಸುತ್ತಾರೆ. ಆದರೆ ನೆನಪಿನಲ್ಲಿಡಿ ಚೆನ್ನಾಗಿ ಅಧ್ಯಯನ ಮಾಡಿದವನು ಶ್ರೇಷ್ಠನಲ್ಲ, ಉನ್ನತವಾದ ಜ್ಞಾನವನ್ನು ಹೊಂದಿದವನೇ ಶ್ರೇಷ್ಠವ್ಯಕ್ತಿ. ಹಾಗಾದರೆ ಇದು ಯಾವಾಗ ತಿಳಿಯುತ್ತದೆ? ಅಂದರೆ ಶರೀರವನ್ನು ಬಿಟ್ಟು ಮೇಲಿನ ಲೋಕಗಳಿಗೆ ಹೋದಾಗ ಅರ್ಥವಾಗುತ್ತದೆ.

ಇಲ್ಲಿ I.A.S. ಓದಿದರೂ, ಇಂಜಿನಿಯರ್ ಆದರೂ, ಟಾಪ್ ಯಾರ್ಂಕರ್ ಆಗಿದ್ದರು. ಅದರಿಂದ ಪ್ರಯೋಜನ ಏನು? ಭೂಮಿಯ ಮೇಲೆ ಇರುವವರೆಗೆ ಮಾತ್ರ. ಆದರೆ ಆಲೋಚಿಸಿ? ಇಷ್ಟು ವರ್ಷಗಳು ಅಧ್ಯಯನ ಮಾಡುತ್ತಿದ್ದಾರೆ? ಅಂದರೆ 20–25 ವರ್ಷಗಳ ಜೀವನವನ್ನು ವೆಚ್ಚ ಮಾಡುತ್ತಿದ್ದಾರೆ? ಅದರಲ್ಲಿ ಸ್ವಲ್ಪವಾದರೂ ಜ್ಞಾನಕ್ಕೋಸ್ಕರ, ಆತ್ಮಕ್ಕೋಸ್ಕರ ವಿನಿಯೋಗಿಸುತ್ತಿದ್ದಾರೆಯೇ? ಅಂದರೆ ಅದು ಸ್ವಲ್ಪವೂ ಕಾಣಿಸುವುದಿಲ್ಲ. ಅದಕ್ಕೆ ಮುಖ್ಯ ಕಾರಣ ಅವರ ಪೋಷಕರ ಅಜ್ಞಾನದಿಂದ, ಪೋಷಕರು ಮಕ್ಕಳಿಗೆ ಜ್ಞಾನದ ಬಗ್ಗೆ ಏನನ್ನು ಹೇಳಲಾರರು. ಆದ್ದರಿಂದ ಮಕ್ಕಳು ಏನನ್ನೂ ತಿಳಿದುಕೊಳ್ಳಲಾರದೇ ಹೋಗುತ್ತಿದ್ದಾರೆ. ಹೀಗೆ ತಲೆತಲಾಂತರಗಳಿಂದ ಇದೇ ರೀತಿ ನಡೆಯುತ್ತಲೇ ಬರುತ್ತಿದೆ. ಎಲ್ಲರೂ ಹುಟ್ಟುತ್ತಿದ್ದಾರೆ, ಅಜ್ಞಾನದಲ್ಲಿ ಜೀವಿಸುತ್ತಿದ್ದಾರೆ, ಕೊನೆಗೆ ನಿಷ್ಕ್ರಮಿಸುತ್ತಿದ್ದಾರೆ (ಹೊರಟು ಹೋಗುತ್ತಿದ್ದಾರೆ).

ಯಾವಾಗಲೂ ಇವರ ಆಲೋಚನೆ ಹೇಗಿರುತ್ತದೆಯೆಂದರೆ ಮರಣಿಸುವುದರೊಳಗೆ ಎಷ್ಟು ವೈಭವದಿಂದ ಜೀವಿಸಬೇಕು? ಎಷ್ಟು ಸುಖ ಪಡಬೇಕು? ಎಷ್ಟು ಚೆನ್ನಾಗಿ ಜೀವನವನ್ನು ಎಂಜಾಯ್ ಮಾಡಬೇಕು? ಎಂಬುದರ ಮೇಲೆ ದೃಷ್ಟಿ ಇಡುತ್ತಾರೆ. ಹಾಗಾದರೆ ಹೀಗೆ ಎಂಜಾಯ್ ಮಾಡಬೇಕೆಂದರೂ, ಜೀವನವನ್ನು ಅನುಭವಿಸಬೇಕು ಎಂದುಕೊಂಡರೂ, ಸುಖ ಪಡಬೇಕೆಂದುಕೊಂಡರೂ ಮುಖ್ಯವಾಗಿ ಬೇಕಾದದ್ದು ಹಣ. ಆದ್ದರಿಂದ 20 ರಿಂದ 25 ವರ್ಷಗಳು ಹಣ ಸಂಪಾದನೆಗೆ ಉಪಯೋಗವಾಗುವ ವಿದ್ಯಾಭ್ಯಾಸವನ್ನೇ ಮಾಡುತ್ತಾರೆ.

ಅದಕ್ಕೆ ಕ್ಷರ ವಿದ್ಯೆಯಲ್ಲ, ಅಕ್ಷರ ವಿದ್ಯೆಯನ್ನು ಅಭ್ಯಾಸ ಮಾಡಬೇಕೆಂದು ಹಿರಿಯರು ಹೇಳುತ್ತಾರೆ. ಕ್ಷರ ವಿದ್ಯೆ ಎಂದರೆ ನಶಿಸಿಹೋಗುವುದಕ್ಕೆ ಸಂಬಂಧಿಸಿದ ವಿದ್ಯೆ, ಅಕ್ಷರ ವಿದ್ಯೆ ಎಂದರೆ ನಶಿಸಿಹೋಗದ್ದಕ್ಕೆ ಸಂಬಂಧಿಸಿದ ವಿದ್ಯೆ.

ಬಹಳಷ್ಟು ಜನ ನಮ್ಮ ಮಗನಿಗೆ ಅಕ್ಷರಾಭ್ಯಾಸ ಮಾಡಿಸಿದೆವು ಎನ್ನುತ್ತಾರೆ. ನಿಜವಾಗಿಯೂ ಇವರು ಮಾಡಿಸಿದ್ದು ಅಕ್ಷರಾಭ್ಯಾಸ ಅಲ್ಲ ಕ್ಷರಾಭ್ಯಾಸ. ಇವರು ಏನನ್ನು ಕಲಿಸುತ್ತಿದ್ದಾರೆ, ಏನು ಹೇಳುತ್ತಿದ್ದಾರೆ ಎಂದರೆ ನಶಿಸಿಹೋಗುವ ಪ್ರಾಪಂಚಿಕ ವಿದ್ಯೆಯನ್ನು ಅಂದರೆ ನಶಿಸಿಹೋಗುವ ದೇಹಕ್ಕೆ ಸಂಬಂಧಿಸಿದ್ದು. ಕ್ಷರ ವಿದ್ಯೆಯಲ್ಲಿ ದೇಹದ ಮೇಲೆ ರಿಸರ್ಚ್ ಗಳನ್ನು ಮಾಡುವ ವಿದ್ಯೆಯನ್ನು ಅಭ್ಯಾಸ ಮಾಡುತ್ತಿದ್ದಾರೆ. ಆದರೆ ನಾಶವಿಲ್ಲದ ಆತ್ಮಕ್ಕೆ ಸಂಬಂಧಿಸಿದ ವಿದ್ಯೆಯನ್ನು ಅಭ್ಯಾಸ ಮಾಡುತ್ತಿಲ್ಲ.

ನಿಜವಾಗಿಯೂ ಯಾರಾದರೆ ಚಿಕ್ಕಂದಿನಿಂದ ಮಕ್ಕಳಿಗೆ ಆತ್ಮಜ್ಞಾನವನ್ನು ಕಲಿಸುತ್ತಾ, ಧ್ಯಾನವನ್ನು ಹೇಳಿಕೊಡುತ್ತಾ ಇರುತ್ತಾರೋ! ಅಂತಹ ಮಕ್ಕಳು ಅಕ್ಷರಾಭ್ಯಾಸವನ್ನು ಮಾಡಿಕೊಂಡವರಾಗುತ್ತಾರೆ. ಅಷ್ಟೇ ಹೊರತು ಸುಮ್ಮನೆ ನಾಲ್ಕು ಅಕ್ಷರಗಳನ್ನು ಬರೆದಷ್ಟು ಮಾತ್ರಕ್ಕೆ ಅವರಿಗೆ ಅಕ್ಷರಾಭ್ಯಾಸವಾದಂತೆ ಅಲ್ಲ. ಇದರ ಅರ್ಥವೇನೆಂದರೆ? ಯಾರು ಎಷ್ಟು ಜ್ಞಾನವನ್ನು ಸಂಪಾದಿಸುತ್ತಾರೋ! ಅವರು ಅಷ್ಟು ಶ್ರೇಷ್ಠ ವ್ಯಕ್ತಿಗಳಾದಂತೆ ಎಂದರ್ಥ.

ಇದಕ್ಕಿಂತ ಮುಂಚೆ ನಾವು ತಿಳಿದುಕೊಂಡಿದ್ದೇವೆ. ಮರಣಿಸಿದ ನಂತರ ಅಜ್ಞಾನದಲ್ಲಿ ಇರುವವರು ಸಹಾಯಕರು ಬಂದರೂ, ಅವರ ಮಾತು ಕೇಳದಂತೆ ಈ ಭೂಮಿ ಮೇಲೆಯೇ ಇದ್ದು, ಪ್ರೇತಾತ್ಮಗಳಾಗುತ್ತಾರೆ. ಹೀಗೆ ನೂರಾರು ವರ್ಷಗಳನ್ನು ವ್ಯರ್ಥ ಮಾಡಿಕೊಳ್ಳುತ್ತಾರೆ. ಯಾರು ಈ ಧ್ಯಾನವನ್ನು ಮಾಡಿ ಸ್ವಲ್ಪ ಜ್ಞಾನ ಸಂಪಾದಿಸಿಕೊಳ್ಳುವರೋ! ಇಂತಹ ವಿಷಯಗಳನ್ನು ತಿಳಿದುಕೊಳ್ಳುವರೋ, ಅವರು ಆ ಬಂದಂತಹ ಸಹಾಯಕರೊಂದಿಗೆ ಮೇಲಿನ ಲೋಕಗಳಿಗೆ ಹೊರಟು ಹೋಗುತ್ತಾರೆ. ಜೀವನವನ್ನು ವ್ಯರ್ಥ ಮಾಡಿಕೊಳ್ಳದಂತೆ ಆ ಮೇಲಿನ ಲೋಕಗಳಿಗೆ ಹೋದ ನಂತರ ಮಾಡಬೇಕಾದದ್ದನ್ನು ಮಾಡುತ್ತಾರೆ.

ಆದ್ದರಿಂದ ತಿಳಿದುಕೊಳ್ಳಿ, ಭೂಮಿ ಮೇಲೆ 300 ರಿಂದ 350 ಜನ್ಮಗಳನ್ನು ಸಾಮಾನ್ಯವಾಗಿ ಜೀವಿಸಿದವರು, ಯಾವಾಗಲೂ ಜನಾಲೋಕದವರೆಗೆ ಹೋಗಿ, ಅಲ್ಲಿಂದ

ಹಿಂತಿರುಗಿ ಬರುತ್ತಿರುತ್ತಾರೆ. ಜನಾ ಲೋಕವನ್ನು ದಾಟಿ ಹೋಗುವುದಿಲ್ಲ. ಆದರೆ ಅದನ್ನು ದಾಟಿ ಶ್ರಮ ಪಡುವವರೇ ಶ್ರೇಷ್ಠರು.

ಆ ಕೆಲಸವನ್ನೇ ನಾವೆಲ್ಲರೂ ಈಗ ಮಾಡುತ್ತಿದ್ದೇವೆ. ಯಾರು ನಮ್ಮ ಜೂಮ್ ಗೆ ಬರುತ್ತಿದ್ದಾರೋ! ಭೀಮವರನ್ನು ಮೂರು ದಿನಗಳ ಕ್ಲಾಸುಗಳಿಗೆ ಬರುತ್ತಿದ್ದಾರೋ! ಈ ಜ್ಞಾನವನ್ನು ಹೊಂದುತ್ತಿದ್ದಾರೋ! ಖಂಡಿತವಾಗಿ ಅವರೆಲ್ಲರೂ ಈ ಪ್ರಯತ್ನವನ್ನು ಮಾಡುತ್ತಿದ್ದಾರೆ. ಸ್ವಲ್ಪ ಇದನ್ನು ಅರ್ಥ ಮಾಡಿಕೊಂಡು ಇನ್ನು ಸ್ವಲ್ಪ ಶ್ರಮಪಟ್ಟರೆ, ನಿಜವಾಗಿಯೂ ಸಾಧಿಸಬೇಕಾದದ್ದನ್ನು ಸಾಧಿಸುತ್ತಾರೆ.

ಈ ವಿಷಯ ನೀವು ಮೇಲಕ್ಕೆ ಹೋದ ನಂತರ ತಿಳಿಯುತ್ತದೆ. ಅಷ್ಟೇಅಲ್ಲ ನಾನು ಬಹಳಷ್ಟು ಅದೃಷ್ಟವಂತ ಎಂದು ಸಹ ತಿಳಿದುಕೊಳ್ಳುತ್ತಾರೆ. ಅಷ್ಟೇ ಅಲ್ಲ ನಾನು ಆಲೋಚನೆ ಮಾಡಬೇಕಾದ ವಿಷಯಗಳು ಇಷ್ಟು ಇವೆಯಾ? ಎಂದು ಆಶ್ಚರ್ಯ ಪಡುತ್ತಾರೆ. ಆದರೆ ಭೂಮಿ ಮೇಲೆ ಇದೆಲ್ಲಾ ಅರ್ಥವಾಗುವುದಿಲ್ಲ. ಆದರೆ ಮೇಲೆ ಹೋದ ನಂತರ ಬಹಳಷ್ಟು ವಿಷಯಗಳನ್ನು ತಿಳಿದುಕೊಳ್ಳಬೇಕು, ಬಹಳಷ್ಟು ಪಾಠಗಳನ್ನು ಕಲಿತುಕೊಳ್ಳಬೇಕು ಎಂದು ತಿಳಿಯುತ್ತದೆ.

ಸಹಜವಾಗಿ ಮರಣಿಸಿದ ನಂತರ ಏನಾಗುತ್ತದೆ? ಅಂದರೆ ಸಿಂಪಲ್ ಆಗಿ ಈ ರೀತಿಯಾಗಿ ಹೇಳಬಹುದು. ಪಾಪ ಮಾಡಿದರೆ ಭುವರ್ ಲೋಕ, ಪುಣ್ಯ ಮಾಡಿದರೆ ಸುವರ್ ಲೋಕ, ಸೇವೆಗಳನ್ನು ಮಾಡಿದರೆ ಮಹಾಲೋಕ, ತಪಸ್ಸು ಮಾಡಿದರೆ ತಪೋಲೋಕ, ಸತ್ಯವನ್ನು ಅನುಭವದೊಳಗೆ ತಂದುಕೊಂಡರೆ ಸತ್ಯ ಲೋಕವನ್ನು ಸೇರುತ್ತಾರೆ ಎಂದು ಹೇಳಬಹುದು. ಹೀಗೆ ಕೇಳಿದ ತಕ್ಷಣ, ತಿಳಿದುಕೊಂಡ ತಕ್ಷಣ ಸತ್ಯಲೋಕಕ್ಕೆ ಸೇರುತ್ತೇವೆಯೇ? ಅದು ಅಷ್ಟು ಸುಲಭವೇ? ಭೂಮಿಯ ಮೇಲೆ ಯಾರನ್ನಾದರೆ ನಾವು ದೇವರಗಳು ಎಂದುಕೊಳ್ಳುತ್ತಿದ್ದೇವೆಯೋ! ಆ ಸ್ಥಿತಿಗೆ ಸೇರಬೇಕು. ಆಗಲೇ ಅದು ಸಾಧ.

ನೆನಪಿಡಿ ಯಾರಾದರೂ ಸರಿ ಮಾನವ ಜನ್ಮವನ್ನು ತೆಗೆದುಕೊಂಡ ನಂತರ, ಮೊದಲು ಬಹಳಷ್ಟು ಜನ್ಮಗಳು ಕಲಿತುಕೊಳ್ಳುತ್ತಾರೆ. ನಾನು ಹೇಳಿದ್ದೇನೆ ಅಲ್ಲವೇ, 300 ರಿಂದ 350 ಜನ್ಮಗಳವರೆಗೂ ಕೇಳಿಸಿಕೊಳ್ಳುತ್ತಲೇ ಇರುತ್ತಾರೆ, ತಿಳಿದುಕೊಳ್ಳುತ್ತಲೇ ಇರುತ್ತಾರೆ, ಕಲಿತುಕೊಳ್ಳುತ್ತಲೇ ಇರುತ್ತಾರೆ.

ಅದೇ ರೀತಿ ಈಗ ನಾವೆಲ್ಲರೂ ಸಹ ಕಲಿಸುವ ಸ್ಥಿತಿಗೆ ಬಂದಿದ್ದೇವೆ. ಅದಕ್ಕಾಗಿಯೇ ನಾನು ಎಲ್ಲರಿಗೂ ಕ್ಲಾಸ್ ಗಳನ್ನು ಹೇಳಲು ತಿಳಿಸುತ್ತೇನೆ. ಹಾಗೆ ಹೇಳಿದರೆ ನಿಮಗೆ ಪ್ರಮೋಷನ್ ಬಂದಂತೆಯೇ. ನೀವು ಕಲಿತುಕೊಳ್ಳುವ ಮಟ್ಟದಿಂದ ಕಲಿಸುವ ಮಟ್ಟಕ್ಕೆ ಬೆಳೆದಿದ್ದೀರಿ ಎಂದುಕೊಂಡರೆ ನೀವು ತಿಳಿದುಕೊಂಡ ಜ್ಞಾನವನ್ನು ಎಲ್ಲರಿಗೂ ಹೇಳಬೇಕು.

ನೆನಪಿನಲ್ಲಿಡಿ ಯಾವಾಗ ನೀವು ಜ್ಞಾನ ಬೋಧನೆಗೆ ಹೋಗುತ್ತೀರೋ, ಮೇಲಿನ ಲೋಕಗಳಿಗೆ ಹೋಗಲು ಬೇಕಾದ ಅರ್ಹತೆಯನ್ನು ಸಂಪಾದಿಸಿಕೊಂಡವರಾಗುತ್ತೀರ. ಪೂರ್ಣಾ ಅರ್ಹತೆ ಎಂದು ನಾನು ಹೇಳುವುದಿಲ್ಲ ಆದರೆ ಒಟ್ಟಾರೆ ಅರ್ಹತೆಯನ್ನು ಸಂಪಾದಿಸಿಕೊಂಡಂತೆಯೇ! ಅದಕ್ಕೆ ಪತ್ರಿಯವರು ಧ್ಯಾನವನ್ನು ಎಲ್ಲರಿಗೂ ಕಲಿಸಿ ಎನ್ನುತ್ತಾರೆ. ಅವರು ಹೇಳುತ್ತಿರುವುದನ್ನೇ ನಾನು ಹೇಳುತ್ತಿದ್ದೇನೆ. ಕಲಿತುಕೊಳ್ಳುವುದು ಅಷ್ಟೇ ಅಲ್ಲ, ಕಲಿಸುವ ಮಟ್ಟಕ್ಕೆ ಹೋಗಬೇಕು. ಕಲಿಸುವುದು ಎಂಬುದು ಮೇಲಿನ ಲೋಕಗಳ ಸ್ಥಿತಿಯಲ್ಲಿರುವವರ ಲಕ್ಷಣ. ನೆನಪಿಟ್ಟುಕೊಳ್ಳಿ ಕೆಳಗಿನ ಮೂರು ಲೋಕದವರು ಶಿಷ್ಯರಾಗಿ ಇರುತ್ತಾರೆ. ಮೇಲಿನ ಮೂರು ಲೋಕದವರು ಗುರುಗಳಾಗಿ ಇರುತ್ತಾರೆ, ಅಂದರೆ ಬೋಧಿಸುತ್ತಾರೆ. ಆದ್ದರಿಂದ ಪ್ರತಿಯೊಬ್ಬರೂ ಗುರುಗಳಾಗಬೇಕು ಅಂದರೆ ಬೋಧನೆ ಮಾಡಬೇಕು. ಅದನ್ನೇ ಪತ್ರಿಯವರು ನಮ್ಮೆಲ್ಲರಿಗೂ ಹೇಳುತ್ತಿದ್ದಾರೆ.

ನಾನು ಸಹ ಮೊದಲಿನಲ್ಲಿ ಪತ್ರಿಯವರು ಹೀಗೆ ಹೇಳಲು ತಿಳಿಸುತ್ತಿದ್ದಾರೆ? ಏನಿದು? ಅಂದುಕೊಳ್ಳುತ್ತಿದ್ದೆ. ಹೇಳುವುದರಲ್ಲಿ ಇಷ್ಟು ಶ್ರೇಷ್ಠತೆ ಇದೆಯಾ? ಎಂದು ನಂತರ ನನಗೆ ಅರ್ಥವಾಯಿತು. ನಂತರ ಅವರು ಏನು ಹೇಳಿದರೆಂದರೆ? "ಹಂಚಿದ್ದು ಹೆಚ್ಚಿಸಲ್ಪಡುತ್ತದೆ" ಎಂದರು. ಅಂದರೆ ಹಣವನ್ನು ಹಂಚಿದರೆ ಹಣ, ಜ್ಞಾನವನ್ನು ಹಂಚಿದರೆ ಜ್ಞಾನ ಹೆಚ್ಚಿಸಲ್ಪಡುತ್ತದೆ ಎಂದು ಅರ್ಥವಾಯಿತು.

ನೆನಪಿಟ್ಟುಕೊಳ್ಳಿ ಆತ್ಮಕ್ಕೆ ಬೇಕಾದದ್ದು ಹಣ ಅಲ್ಲ ಜ್ಞಾನ. ಹಾಗಾದರೆ ಜ್ಞಾನ ಹೆಚ್ಚಬೇಕು ಎಂದರೆ "ಈ ಜ್ಞಾನವನ್ನು ಹಂಚಬೇಕು"ಸ್ವಲ್ಪ ಹಂಚಿದರೆ ಸ್ವಲ್ಪವೇ ಹೆಚ್ಚಾಗುತ್ತದೆ, ಜಾಸ್ತಿ ಹಂಚಿದರೆ ಜಾಸ್ತಿ ಹೆಚ್ಚುತ್ತದೆ, ಅಪಾರವಾಗಿ ಹಂಚಿದರೆ ಅಪಾರವಾಗಿ ಹೆಚ್ಚುತ್ತದೆ. ಹೆಚ್ಚಾಗಬೇಕು ಎಂದರೆ ಕಡ್ಡಾಯವಾಗಿ ಹಂಚಬೇಕು. ನಾನು ಇದನ್ನು ಅರ್ಥ ಮಾಡಿಕೊಂಡಿದ್ದೇನೆ. ಆದ್ದರಿಂದ ನನ್ನ ವ್ಯಾಪಾರಗಳೆಲ್ಲವನ್ನು ಮುಚ್ಚಿದ್ದೇನೆ, ಮಕ್ಕಳನ್ನು ಸಹ ಹೊರಗಡೆ ಕಳುಹಿಸಿದ್ದೇನೆ. ಇನ್ನು ನಾನು, ನನ್ನ ಪತ್ನಿ ನಾವಿಬ್ಬರೂ ನಮ್ಮ

ದೃಷ್ಟಿಯನ್ನು ಸಂಪೂರ್ಣವಾಗಿ ಜ್ಞಾನವನ್ನು ಹಂಚುವುದರ ಮೇಲೆಯೇ ಇಟ್ಟಿದ್ದೇವೆ.

ಧ್ಯಾನವನ್ನು, ಜ್ಞಾನವನ್ನು ಕಳೆದ 20 ವರ್ಷಗಳಿಂದ, ಅಂದರೆ 2002 ರಿಂದ ಹಂಚುತ್ತಾ ಹೆಚ್ಚಿಸಿಕೊಳ್ಳುವುದೇ ನಮ್ಮ ಕೆಲಸ. ಅಂದರೆ ಪತ್ರಿಯವರು ಪರಿಚಯವಾದಾಗಿನಿಂದ ಧ್ಯಾನವನ್ನು, ಜ್ಞಾನವನ್ನು ಹಂಚುತ್ತಿದ್ದೇವೆ. ನಮಗೆ ತಿಳಿಯದೆಯೇ ನಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದೇವೆ, ಇನ್ನೂ ಹೆಚ್ಚಿಸಿಕೊಳ್ಳುತ್ತಲೇ ಇದ್ದೇವೆ. ಆದ್ದರಿಂದ ನೀವು ಸಹ ಸ್ವಲ್ಪವಾದರೂ ಹಂಚಿ. ಏಕೆಂದರೆ? ಪರಿಶುದ್ಧತೆಯೊಳಗೆ ಹೋದವನು ಮಹಾಲೋಕಕ್ಕೆ ಸೇರುವನು. ಮಹಾ ಪರಿಶುದ್ಧತೆಯನ್ನು ಸಾಧಿಸಿದವನು ತಪೋಲೋಕಕ್ಕೆ ಸೇರುವನು. ಪೂರ್ತಿಯಾಗಿ ಮನಸ್ಸನ್ನು ಶೂನ್ಯ ಮಾಡಿಕೊಂಡವನು, ಅಂದರೆ ನಿರ್ಗುಣ ಸ್ಥಿತಿಯೊಳಗೆ ಹೋದವನು ಸತ್ಯಲೋಕವನ್ನು ಸೇರುವನು. ಅಂದರೆ ಈ ಮೂರು ಗುಣಗಳನ್ನು ಜಯಿಸಬೇಕೆಂದು ಅರ್ಥವಾಗುತ್ತದೆ.

ಈ ವಿಷಯವನ್ನೇ ಭಗವದ್ಗೀತೆಯಲ್ಲಿಯೂ ಸಹ ಹೇಳಲಾಗಿದೆ.

**ಶ್ಲೋ : ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ।**

**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್॥ (ಭ.ಗೀ.2–45)**

ತಾ:–ಓ ಅರ್ಜುನಾ! ವೇದಗಳು ತ್ರಿಗುಣಾತ್ಮಕಗಳಾದ ಸಂಸಾರ ವಿಷಯಗಳನ್ನು ತಿಳಿಸುತ್ತಿವೆ. ನೀನು ತ್ರಿಗುಣಗಳನ್ನು ತ್ಯಜಿಸಿದವನಾಗಿಯೂ, ದ್ವಂದ್ವಗಳು ಇಲ್ಲದವನಾಗಿಯೂ, ನಿರಂತರವಾಗಿ ಶುದ್ಧ ಸತ್ವವನ್ನು ಆಶ್ರಯಿಸಿದವನಾಗಿಯೂ ಯೋಗಕ್ಷೇಮಗಳ ಬಗ್ಗೆ ದೃಷ್ಟಿ ಇಲ್ಲದವನಾಗು. ಆತ್ಮಜ್ಞಾನಿಯಾಗು.

ಅದೇ ರೀತಿ ಆಂಜನೇಯ ಸ್ವಾಮಿಗೂ ಸಹ ಸಂಪೂರ್ಣ ಜ್ಞಾನ ಇಲ್ಲ. ಶ್ರೀರಾಮನಿಗೆ ಇರುವಷ್ಟು ಜ್ಞಾನವಿಲ್ಲ. ಆತ ಒಳ್ಳೆಯ ತಪಸ್ಸನ್ನೇ ಮಾಡಿರುವನು, ಅಂದರೆ ಸಾಧನೆಯನ್ನೇ ಮಾಡಿದ್ದಾನೆ, ಬಹಳಷ್ಟು ಸಿದ್ಧಿಗಳಿವೆ. ಬಹಳಷ್ಟು ಮಹಿಮೆಗಳಿವೆ, ಶಕ್ತಿಗಳಿವೆ, ಆದರೆ ಜ್ಞಾನವಂತನಾಗಲಿಲ್ಲ. ಆಂಜನೇಯ ಸ್ವಾಮಿ ರಾಮನನ್ನು ಆಶ್ರಯಿಸಿದ ನಂತರ ಜ್ಞಾನವನ್ನು ಹೊಂದಿದನು.

ಮರಣಿಸಿದ ನಂತರ ಈ ಮೂರು ಗುಣಗಳಲ್ಲಿ ಇರುವವರು, ಜನಾಲೋಕದ ಕೆಳಗೇ ಇರುತ್ತಾರೆ. ಈ ಮೂರು ಗುಣಗಳನ್ನು ದಾಟಿದರೇನೇ ಜನಾ ಲೋಕವನ್ನು ದಾಟುವರು ಎಂಬುದೇ ಇದರರ್ಥ. ಇಲ್ಲಿ ಪತ್ರಿಯವರು ಹೇಳಿದ ವಿಷಯಗಳು, ಶ್ರೇಷ್ಠ ವ್ಯಕ್ತಿಗಳು

ಹೇಳಿದ ವಿಷಯಗಳು, ಭಗವದ್ಗೀತೆಯಲ್ಲಿ ಹೇಳಲ್ಪಟ್ಟ ವಿಷಯಗಳಲ್ಲಿನ ಸಾರವನ್ನೇ ನಿಮಗೆ ಹೇಳುತ್ತಾರೆ.

ಆದ್ದರಿಂದ ನೆನಪಿಟ್ಟುಕೊಳ್ಳಿ. ಕೆಳಗಿನ ಮೂರು ಲೋಕಗಳಲ್ಲಿ ಇರುವವರೇ ತ್ರಿಗುಣಗಳಲ್ಲಿ ಇರುತ್ತಾರೆ. ಅವರು ಭೂಮಿಯ ಮೇಲೆ ಪೂಜೆಗಳನ್ನು ಮಾಡುತ್ತಾ ಇರುತ್ತಾರೆ, ಆರಾಧನೆಗಳನ್ನು ಮಾಡುತ್ತಾ ಇರುತ್ತಾರೆ, ಭಕ್ತರು ಎಂದುಕೊಳ್ಳುತ್ತಾರೆ.

ಅಷ್ಟೇ ಅಲ್ಲ ದೈವವೆಂದರೆ ನಮಗೆ ತುಂಬಾ ಇಷ್ಟ ಎನ್ನುತ್ತಾರೆ. ಆದರೆ ದೈವಕ್ಕೆ ಇವರು ಇಷ್ಟವಾಗಿದ್ದಾರೆಯೇ? ಇಲ್ಲವೇ? ಎಂಬುದನ್ನು ತಿಳಿದುಕೊಳ್ಳುವುದಿಲ್ಲ. ಹಾಗಾದರೆ ದೈವ ಯಾರೆಂದರೆ ಇಷ್ಟಪಡುತ್ತಾನೆ ಎಂದರೆ ಮೇಲಿನ ಮೂರು ಲೋಕಗಳಿಗೆ ಸೇರಿಕೊಳ್ಳಲು ಅರ್ಹತೆಯನ್ನು ಸಂಪಾದಿಸಿದವರು. ಹಾಗಾದರೆ ಆ ಅರ್ಹತೆ ಯಾರಿಗೆ ಇರುತ್ತದೆ? ಅಂದರೆ ಜ್ಞಾನವನ್ನು ಸಂಪಾದಿಸಿದವರಿಗೆ. ಅವರೇ ಆ ಲೋಕಗಳನ್ನು ಸೇರಿಕೊಳ್ಳುವುದರಿಂದ.

ಅವರು ಏನು ಹೇಳುತ್ತಾರೆಂದರೆ? ನನ್ನನ್ನು ಆರಾಧಿಸುವವರಲ್ಲಿ ನಾಲ್ಕು ವಿಧದ ಭಕ್ತರು ಇದ್ದಾರೆ. ಅವರು ಯಾರೆಂದರೆ? ಆರ್ತಿಗಳು, ಅರ್ಥಾರ್ಥಿಗಳು, ಜಿಜ್ಞಾಸಿಗಳು, ಜ್ಞಾನಿಗಳು. ಇವರೆಲ್ಲರಲ್ಲಿ ಜ್ಞಾನಿಯೇ ನನಗೆ ಪ್ರಿಯನು ಎಂದು ಭಗವದ್ಗೀತೆಯಲ್ಲಿನ ಭ.ಗೀ.7–17, 7–18 ಶ್ಲೋಕಗಳನ್ನಾಧರಿಸಿ ನಾವು ತಿಳಿದುಕೊಳ್ಳಬಹುದು.

ಆದ್ದರಿಂದ ಜ್ಞಾನವನ್ನು ಸಂಪಾದನೆ ಮಾಡಿದವರೆಂದರೇನೇ ಭಗವಂತನಿಗೆ ಇಷ್ಟ. ಅಂತಹವರೇ ಮೇಲಿನ ಲೋಕಗಳಿಗೆ ಅರ್ಹತೆಯನ್ನು ಸಂಪಾದಿಸುತ್ತಾರೆ, ಜನಾಲೋಕವನ್ನು ದಾಟಿ ಹೋಗುತ್ತಾರೆ.

ಅಂತಹ ಜ್ಞಾನವನ್ನು ಪತ್ರಿಯವರು ನಮಗೆ ಸಂಪಾದಿಸಿಕೊಳ್ಳಲು ಹೇಳುತ್ತಾರೆ. ಪತ್ರಿಯವರು ಹೇಳುವಂತಹವೆಲ್ಲಾ ಸಹ ಉನ್ನತ ಲೋಕಗಳನ್ನು ಹೊಂದಲಿಕ್ಕಾಗಿಯೇ. ಆದ್ದರಿಂದ ಧ್ಯಾನ ಮಾಡಿ, ಜ್ಞಾನವಂತರಾಗಿ.

ಜ್ಞಾನವಂತರಾಗಲು ನಾಲ್ಕು ವಿಷಯಗಳನ್ನು ಪ್ರತ್ರಿಯವರು ಹೇಳಿದ್ದಾರೆ. ಅವುಗಳೆಂದರೆ 1. ಧ್ಯಾನ ಸಾಧನೆ, 2. ಸ್ವಾಧ್ಯಾಯ, 3. ಸಜ್ಜನ ಸಾಂಗತ್ಯ, 4. ಸೇವೆ. ಆದ್ದರಿಂದ ಊರ್ಧ್ವ ಲೋಕಗಳನ್ನು ಸೇರಲು ಬಯಸುವವರು ಈ ನಾಲ್ಕನ್ನು ಆಚರಿಸಬೇಕು.

## ಊರ್ಧ್ವ ಲೋಕಗಳನ್ನು ಸೇರಲು ಎಂತಹ ಲಕ್ಷಣಗಳು ಇರಬೇಕು?

ಯಾರಾದರೂ ಸರಿ ಬದುಕಿರುವಾಗಲೇ ಮರಣಿಸಿದ ನಂತರ ಲಾಭ ಉಂಟಾಗುವ ಕೆಲಸಗಳನ್ನು ಮಾಡುತ್ತಿರುತ್ತಾರೋ! ಅಂತಹವರು ಶ್ರೇಷ್ಠರು. ನನ್ನ ವಿಷಯಕ್ಕೆ ಬಂದರೆ ನಾನು ಆ ಕೆಲಸಗಳನ್ನೇ ಮಾಡುತ್ತಿದ್ದೇನೆ. ನಾನು ಇದಕ್ಕಿಂತ ಮುಂಚೆ ಮಾಡುತ್ತಿದ್ದ ಕೆಲಸಗಳನ್ನೆಲ್ಲ ಬಿಟ್ಟುಬಿಟ್ಟಿದ್ದೇನೆ. ನನ್ನ ಜೀವನ ಪೂರ್ತಿಯಾಗಿ ಬದಲಾಯಿತು, ಹೇಳಬೇಕೆಂದರೆ ಯೂ ಟರ್ನ್ ಆಗಿದೆ. ನನ್ನನ್ನು ನೋಡುವವರಿಗೆ ಆಶ್ಚರ್ಯ ಉಂಟಾಗುತ್ತದೆ, ಏನು? ಇವರು ಹೀಗೆ ಬದಲಾಗಿದ್ದಾರೆ ಎಂದುಕೊಳ್ಳುತ್ತಾರೆ.

ಅದಕ್ಕೆ ಕಾರಣ ಪತ್ರಿಯವರು ಪರಿಚಯವಾದ ನಂತರ 'ನಾನು ದೇಹವಲ್ಲ, ನಾನು ಆತ್ಮ' ಎಂಬ ವಿಷಯವನ್ನು ತಿಳಿದುಕೊಂಡೆನು. ನಾನು ಭೂಮಿಯ ಮೇಲೆ ಶಾಶ್ವತವಾಗಿ ಇರುವುದಿಲ್ಲ ಎಂಬ ವಿಷಯವನ್ನು ಸಹ ತಿಳಿದುಕೊಂಡೆನು. ಅದೇ ರೀತಿ ಪ್ರತಿಯೊಬ್ಬರೂ ಯಾವಾಗಲೋ ಒಮ್ಮೆ ಮರಣಿಸಲೇಬೇಕು ಎಂಬ ವಿಷಯವನ್ನು ತಿಳಿದುಕೊಂಡೆನು. ಅಷ್ಟೇ ಅಲ್ಲ ಮರಣಸಿದ ನಂತರ ಹೊಂದುವ ಲಾಭವೇ ಶಾಶ್ವತ ಹೊರತು ಭೂಮಿಯ ಮೇಲೆ ಹೊಂದುವ ಲಾಭಗಳು ಶಾಶ್ವತವಲ್ಲ ಎಂದು ತಿಳಿದುಕೊಂಡೆನು.

ಅಂದಿನಿಂದ ನನಗೆ ಇರುವಂತಹ ವೆಲ್ಲಾ ಸಹ ಮರಣದ ನಂತರ ನನಗೆ ಅಂದರೆ ಆತ್ಮಕ್ಕೆ ಲಾಭವನ್ನು ಉಂಟು ಮಾಡುವಂತಹವುಗಳಿಗಾಗಿಯೇ ನಾನು ಉಪಯೋಗಿಸುತ್ತಿದ್ದೇನೆ. ಅದಕ್ಕೆ ಏನು ಮಾಡಬೇಕು? ಏನು ಮಾಡಿದರೆ ಮರಣಿಸಿದ ನಂತರ ಲಾಭವನ್ನು ಹೊಂದುತ್ತೇವೆ ಎಂಬುದನ್ನು ಸಹ ತಿಳಿದುಕೊಂಡೆನು. ಪತ್ರಿಯವರು ಹೇಳಿದಂತೆ ಮಾಡಿದರೆ ಆತ್ಮಕ್ಕೆ ಅಂದರೆ ನನಗೆ ಲಾಭವೆಂದು ತಿಳಿದುಕೊಂಡೆನು. ಆದ್ದರಿಂದ ಆತ್ಮದ ಲಾಭಕ್ಕೇ ಪ್ರಾಮುಖ್ಯತೆ ಕೊಡುತ್ತಿದ್ದೇನೆ. ಅಂದಿನಿಂದ ಇಂದಿನವರೆಗೂ ಆತ್ಮದ ಲಾಭಕ್ಕಾಗಿಯೇ ಶ್ರಮಿಸುತ್ತಿದ್ದೇನೆ.

ಮುಖ್ಯವಾಗಿ ಯಾರಾದರೂ ಸರಿ ಪತ್ರಿಯವರು ಏನು ಹೇಳಿದ್ದಾರೆ ಅವನ್ನೆಲ್ಲಾ ಮಾಡಬೇಕು. ಅವರು ಏನು ಹೇಳುತ್ತಿದ್ದಾರೆಂದರೆ? ಅಜ್ಞಾನದಿಂದ ಹೊರಬರಬೇಕು, ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು, ಜ್ಞಾನವಂತರಾಗಬೇಕೆಂದು ಹೇಳುತ್ತಾರೆ. ಅದಕ್ಕೆ ಧ್ಯಾನ ಮಾಡಬೇಕು ಎನ್ನುತ್ತಾರೆ. ಈ ಧ್ಯಾನ ಎಂಬುದು ಜ್ಞಾನಕ್ಕಾಗಿಯೇ ಹೊರತು,

ರೋಗಗಳಿಗಾಗಿ, ಕೋರಿಕೆಗಳಿಗಾಗಿ, ಬೇರೆಯ ಲಾಭಗಳಿಗಾಗಿ, ಅನುಭವಗಳಿಗಾಗಿ ಅಲ್ಲ ಎಂದು ಪತ್ರೀಜಿ ಪದೇಪದೇ ಹೇಳುತ್ತಿರುತ್ತಾರೆ.

ಅವರು ಇನ್ನು ಏನು ಹೇಳುತ್ತಾರೆಂದರೆ? ನೀವು ಜ್ಞಾನಕ್ಕಾಗಿ ಈ ಧ್ಯಾನ ಮಾಡಿದರೆ ನೀವು ಬಯಸುವ ಲಾಭಗಳು ಆಟೋಮ್ಯಾಟಿಕ್ ಆಗಿ ಬರುತ್ತವೆ. ಚಿಕ್ಕ ಚಿಕ್ಕ ಲಾಭಗಳು ಎನ್ನುವಂತಹವು ದೊಡ್ಡ ವಿಶೇಷಗಳೇನು ಅಲ್ಲ, ಅವನು ನೀವು ಬಯಸಬೇಕಾಗಿಲ್ಲ, ಕೇಳಬೇಕಾಗಿಲ್ಲ, ಅವುಗಳಿಗೋಸ್ಕರ ನೋಡಬೇಕಾಗಿಲ್ಲ ಎನ್ನುತ್ತಾರೆ. ಆದ್ದರಿಂದ ಅವುಗಳಿಗೋಸ್ಕರ ನಾವು ಚಿಂತಿಸುವ ಅಗತ್ಯವಿಲ್ಲ ಎಂಬುದು ನನಗೆ ಅರ್ಥವಾಯಿತು.

ಈ ಮಾರ್ಗದಲ್ಲಿ ಮಾಡಬೇಕಾದ ಆಧ್ಯಾತ್ಮಿಕ ಸೇವೆಗಳನ್ನೆಲ್ಲಾ ಪತ್ರೀಜಿ ಹೇಳಿದ್ದಾರೆ. ಅವುಗಳನ್ನು ನಾವು ಮಾಡುತ್ತಿದ್ದರೆ ಭೌತಿಕ ಜೀವನದಲ್ಲಿ ನಿಮಗೆ ಯಾವ ತೊಂದರೆಗಳಿವೆಯೋ! ಅವೆಲ್ಲವೂ ಹೊರಟು ಹೋಗುತ್ತವೆ. ಎಂದು ಹೇಳಿದ್ದಾರೆ. ನೀವು ಅದಕ್ಕಿಂತ ಮುಂಚೆ ಆರ್ಥಿಕವಾಗಿ ಸಮಸ್ಯೆಗಳನ್ನು ಎದುರಿಸುತ್ತಿದ್ದರೂ ಸಹ ಅವುಗಳಿಂದ ಹೊರಬರುವುದಷ್ಟೇ ಅಲ್ಲದೆ ಉತ್ತಮವಾಗಿ ಬದುಕಬಹುದು. ನಮ್ಮ ಸೊಸೈಟಿಯಲ್ಲಿಯೇ ಶ್ರೀಕಾಂತ್ ಎಲ್ಲರಿಗೂ ಗೊತ್ತು. ಎಲ್ಲಾ ಕಡೆಗಳನ್ನು ಕ್ಲಾಸ್ ಗಳನ್ನು ಹೇಳುತ್ತಿರುತ್ತಾರೆ. ಒಂದು ಸಮಯದಲ್ಲಿ ಇದ್ದ ಊರನ್ನು ಬಿಟ್ಟು ಹೈದರಾಬಾದ್ ಗೆ ಬಂದರು. ಅವರಿಗೆ ಅಲ್ಲಿನ ಜೀವನ ಹಿಡಿಸಲಿಲ್ಲ. ಯಾವಾಗಲೂ ಏನನ್ನೋ ತಿಳಿದುಕೊಳ್ಳಬೇಕು? ಏನೋ ಮಾಡಬೇಕು? ಜೀವನ ಇದಲ್ಲ ಎನ್ನುವಂತಹ ತೀವ್ರವಾದ ಬಯಕೆಯಿಂದ ಕುಟುಂಬವನ್ನು ತೊರೆದರು. ಅಲ್ಲಿ ಅಲ್ಪಸ್ವಲ್ಪ ಆಸ್ತಿಗಳಿದ್ದರೂ ಅವುಗಳನ್ನು ಸಹ ಬಿಟ್ಟುಬಿಟ್ಟರು. ಅವರೆಲ್ಲ ಎಷ್ಟೇ ಬಲವಂತ ಮಾಡಿದರೂ, ಏನು ಮಾಡಿದರು ನಾನು ಅಲ್ಲಿ ಇರಲಾರೆ ಎಂದು ಹೇಳಿ ಬಂದುಬಿಟ್ಟರು.

ಸರಿ ಬೇಡವೆಂದು ಬಿಟ್ಟು ಬಂದರು ಅದು ಚೆನ್ನಾಗಿದೆಯೇ ಇದೆ. ಅವರನ್ನು ಬೇಡವೆಂದು ಬಿಟ್ಟು ಬಂದರೆ ಅವರು ಒಂದು ರೂಪಾಯಿಯನ್ನು ಸಹ ಕೊಡಲಿಲ್ಲ; ಆದರೂ ಇವರು ಅದನ್ನು ಲೆಕ್ಕಿಸಲಿಲ್ಲ. ಶ್ರೀಕಾಂತ್ ನಲ್ಲಿರುವ ಹಂಬಲ ನನಗೆ ಆಶ್ಚರ್ಯವೆನಿಸಿತು. ಹೋಗಲಿ ಒಂದು ಉದ್ಯೋಗವನ್ನು ಹರಸಿಕೊಂಡು ಬರುವುದು ಬೇರೆ ವಿಷಯ, ಉದ್ಯೋಗವಿಲ್ಲ, ಸಂಪಾದನೆ ಇಲ್ಲ, ಆಧಾರವಿಲ್ಲ, ಏನೂ ಇಲ್ಲ ಬಂದುಬಿಟ್ಟಿದ್ದಾರೆ. ಬರುವುದು ಸುಲಭವೇ, ಆದರೆ ಆಹಾರ ಬೇಕು, ಯಾರು ನೀಡುತ್ತಾರೆ ಹೇಳಿ? ಯಾರು ಕೊಡುತ್ತಾರೆ ಹೇಳಿ? ಹಾಗೆ ಅವರ, ಇವರ ಸಹಾಯದಿಂದ ಮ್ಯಾನೇಜ್

ಮಾಡುತ್ತಿದ್ದರು. ಎಷ್ಟು ಮಾಡಿದರು ಯಾವುದೋ ಲೋಪದೋಷಗಳು ಕಾಣಿಸಿ ಇರಲಾರದೇ ಹೋಗುತ್ತಿದ್ದರು. ಬೇರೆ ಕಡೆ ಸೆಂಟರ್ ಇದ್ದರೆ! ಅಲ್ಲಿ ಮಲಗುತ್ತಾ, ಯಾರಾದರೂ ನೀಡಿದರೆ ತಿನ್ನುತ್ತಿದ್ದರು. ಹಾಗೆಯೇ ಇರುತ್ತಿದ್ದರು.

ನಿಧಾನವಾಗಿ ನನ್ನ ಹತ್ತಿರ ಬಂದರು. ನನ್ನ ಕ್ಲಾಸ್ ಗಳನ್ನು ಕೇಳುತ್ತಾ ಜ್ಞಾನವನ್ನು ಹೆಚ್ಚಿಸಿಕೊಂಡರು; ಬಹಳ ಶ್ರದ್ಧೆಯಿಂದ ಕೇಳುತ್ತಿದ್ದರು. ಶ್ರೀಕಾಂತ್ ನಲ್ಲಿದ್ದ ಒಂದು ಒಳ್ಳೆಯ ಗುಣವೇನೆಂದರೆ ಕೇಳಿಸಿಕೊಂಡದ್ದನ್ನು ಮರೆಯುವುದಿಲ್ಲ, ಆಲಿಸಿದ ನಂತರ ಮತ್ತೆ ಹೇಳು ಎಂದರೆ ಚೆನ್ನಾಗಿ ಹೇಳುತ್ತಿದ್ದರು. ಪತ್ರಿ ಯಾರು ಹೇಳಿದ ವಿಷಯಗಳನ್ನಾಗಲೀ, ನಾನು ಹೇಳಿದ ವಿಷಯಗಳನ್ನಾಗಲೀ ಹೇಳುತ್ತಿದ್ದರು. ಅದರಿಂದ ನನ್ನ ಕ್ಲಾಸ್ ಗಳನ್ನೆಲ್ಲಾ ಕೇಳುತ್ತಾ ಆ ಜ್ಞಾನವನ್ನು ಹಿಡಿದುಕೊಂಡರು.

ಆಗ ನೀನು ಈ ವಿಷಯಗಳನ್ನು ಎಲ್ಲರಿಗೂ ಹೇಳು, ಜ್ಞಾನವನ್ನು ಹಂಚು ಎಂದು ಹೇಳಿದೆನು. ಅದು ಶ್ರೇಷ್ಠ ಸೇವೆಯ ಅಡಿಯಲ್ಲಿ ಬರುತ್ತದೆ ಎಂದು ಹೇಳಿದೆನು. ಅದನ್ನು ಅರ್ಥ ಮಾಡಿಕೊಂಡು ಅವರು ಹೇಳಲು ಪ್ರಾರಂಭಿಸಿದರು.

ಭೀಮವರಂನ ಕ್ಲಾಸ್ ಗಳಿಗೆ ನಿರಂತರವಾಗಿ ಬರುವುದರಿಂದ, ಬಹಳಷ್ಟು ಜನ ಪರಿಚಯವಾದರು. ಹಾಗೆ ಅವರೆಲ್ಲರನ್ನು ಹಿಡಿದುಕೊಂಡು ಅವರ ಹತ್ತಿರ ಹೋಗುತ್ತಾ ಈ ಕ್ಲಾಸ್ ಗಳನ್ನು ಹೇಳುತ್ತಿದ್ದರು. ಇವರು ಹೇಳುವ ವಿಧಾನವನ್ನು ನೋಡಿ ಎಲ್ಲರಿಗೂ ತುಂಬಾ ಇಷ್ಟವಾಯಿತು. ಆಧ್ಯಾತ್ಮಿಕ ಪುಸ್ತಕಗಳನ್ನು ಒದಗಿಸಿದರೆ ಅದು ಸಹ ಒಂದು ಸೇವೆ ಎಂದು ಹೇಳಿದೆನು, ಅರ್ಥ ಮಾಡಿಕೊಂಡರು. ಪುಸ್ತಕಗಳನ್ನು ತೆಗೆದುಕೊಂಡು ಹೋಗಿ ಕೊಡುತ್ತಿದ್ದರು. ಅದರಲ್ಲಿ ಸ್ವಲ್ಪ ಹಣ ಬರುತ್ತಿದ್ದರಿಂದ ಮೇನ್ಟೇನ್ (ನಿರ್ವಹಣೆ) ಮಾಡುತ್ತಿದ್ದರು. ಹೀಗೆ ನಿಧಾನವಾಗಿ ಇವರು ಪಡುತ್ತಿದ್ದ ಶ್ರಮದಿಂದ, ಸೇವೆಯಿಂದ ಎಲ್ಲವೂ ಅನುಕೂಲವಾದವು.

ಮಾಡಿಕೊಂಡವನಿಗೆ ಮಾಡಿಕೊಂಡಷ್ಟು ಮಹಾದೇವ ಎನ್ನುತ್ತಾರೆ ಅಲ್ಲವೇ? ಹಾಗೆ ಅವರಿಗೆ ಎಲ್ಲಾ ವಿಧದಲ್ಲಿಯೂ ಒಂದೊಂದಾಗಿ ಅನುಕೂಲವಾದ್ದರಿಂದ, ನಿಧಾನವಾಗಿ ಯಜ್ಞಗಳಲ್ಲಿ ಬುಕ್ಸ್ ಸ್ಟಾಲ್ ಇಡಲು ಪ್ರಾರಂಭಿಸಿದರು. ಹಾಗೆ ಎಲ್ಲರನ್ನೂ ಪರಿಚಯ ಮಾಡಿಕೊಳ್ಳುತ್ತಾ... ಈಗ ಯಾವ ಸ್ಥಿತಿಗೆ ಬಂದಿದ್ದಾರೆಂದರೆ ಎಲ್ಲರ ಜೊತೆ ಸಮಾನವಾಗಿ ಮಾರ್ಕೆಟಿಂಗ್ ಮಾಡುತ್ತಿದ್ದಾರೆ. ಯಾರಿಗೆ ಯಾವ ಪುಸ್ತಕಗಳು ಬೇಕಾದರೂ ಶ್ರೀಕಾಂತ್

ಸಪ್ಪೆ ಮಾಡುತ್ತಾರೆ. ಏನೂ ಇಲ್ಲದವರು ಅಂತಹ ಸ್ಥಿತಿಗೆ ಹೋದರು. ಇದೆಲ್ಲಾ ಯಾವುದರಿಂದ ಸಾಧ್ಯವಾಯಿತು? ಎಂದರೆ ಅವರು ಮಾಡುತ್ತಿರುವ ಸೇವೆಯಿಂದಲೇ!

ಆದ್ದರಿಂದ ಯಾರಾದರೂ ಸರಿ ಕೊರತೆ ಇದೆ ಎಂದು ವ್ಯಥೆ ಪಡಬಾರದು. ಹಿಂದೆ ಮಾಡಿದ್ದನ್ನು ಅನುಭವಿಸುತ್ತಿದ್ದಾರೆ. ಇಲ್ಲಿಂದ ನೀವು ಕೈಲಾದ ಸೇವೆಯನ್ನು ಮಾಡಲು ಪ್ರಯತ್ನಿಸಿ. ನಿಮ್ಮ ಭವಿಷ್ಯತ್ ಸಹ ಬದಲಾಗುತ್ತದೆ. ಅಷ್ಟೇ ಹೊರತು, ಏನೂ ಮಾಡದೇ ನನ್ನ ಪರಿಸ್ಥಿತಿ ಬದಲಾಗಬೇಕು ಎನ್ನುತ್ತಾ ಕುಳಿತುಕೊಂಡರೆ ಯಾವುದೇ ಪ್ರಯೋಜನ ಇರುವುದಿಲ್ಲ. ಏನನ್ನೂ ಮಾಡದೇ ಏನು ಬರುತ್ತದೆ? ನೀನು ಏನು ಮಾಡಿದರೆ ಅದೇ ಬರುತ್ತದೆ.

ನನ್ನನ್ನು ಬಹಳ ಜನ ಕೇಳುತ್ತಿರುತ್ತಾರೆ. ಬಹಳಷ್ಟು ಆರ್ಥಿಕ ಸಮಸ್ಯೆಗಳಲ್ಲಿ ಇದ್ದೇವೆ ಹೊರಬರುವುದು ಹೇಗೆಂದು ತಿಳಿಸಿ ಎನ್ನುತ್ತಾರೆ. ನೋಡಪ್ಪ ನೀನು ಮಾಡಿಕೊಂಡಿರುವುದನ್ನು ಅನುಭವಿಸುತ್ತಿದ್ದೀಯ, ಎಷ್ಟು ಮಾಡಿರುವೆಯೋ ಅಷ್ಟನ್ನು ಅನುಭವಿಸಬೇಕಾದದ್ದೇ!

ಅದಕ್ಕಾಗಿ ಕೆಲವು ದಿನಗಳು ತಾಳ್ಮೆಯಿಂದ ಇರಬೇಕು, ಅದಕ್ಕಿಂತ ಬೇರೇನೂ ಇಲ್ಲ. ನೀನು ಖಾಲಿಯಾಗಿ ಕುಳಿತುಕೊಳ್ಳದೇ ಕನಿಷ್ಠಪಕ್ಷ ಈಗಲಾದರೂ ಸ್ವಲ್ಪ ಸೇವೆ ಮಾಡು. ನೀನು ಹಣವನ್ನೇ ನೀಡಬೇಕೆಂದಿಲ್ಲ. ಶರೀರದಿಂದ ಮಾಡುವ ಸೇವೆಗಳನ್ನು ಮಾಡಬಹುದು, ಯಜ್ಞಗಳಲ್ಲಿ ಪಾಲ್ಗೊಳ್ಳಬಹುದು ಎಂದು ಹೇಳುತ್ತೇನೆ. ಬಹಳಷ್ಟು ಜನ ಹಲವಾರು ವಿಧಗಳಲ್ಲಿ ಸೇವೆಗಳನ್ನು ಮಾಡುತ್ತಿದ್ದಾರೆ. ನಿಮ್ಮ ಊರಿನಲ್ಲಿ ಧ್ಯಾನದ ಕ್ಲಾಸುಗಳನ್ನು ಏರ್ಪಡಿಸಿದರೆ ಅದಕ್ಕೆ ಸಹಕಾರ ನೀಡಿ. ಹಾಗೆ ಮಾಡುತ್ತಿದ್ದರೆ! ನಿಮ್ಮ ಭವಿಷ್ಯ ಬದಲಾಗುತ್ತದೆ ಎಂದು ಹೇಳುತ್ತೇನೆ.

ಹೀಗೆ ನಾನು ಬಹಳಷ್ಟು ಜನರನ್ನು ನೋಡಿದ್ದೇನೆ. ನಮ್ಮ ಸೊಸೈಟಿಯಲ್ಲಿಯೇ ಬಹಳಷ್ಟು ಸಮಸ್ಯೆಗಳನ್ನು ಎದುರಿಸುತ್ತಿರುವವರು ಈಗ ಒಳ್ಳೆಯ ಜೀವನವನ್ನು ಹೊಂದಿದ್ದಾರೆ.

ನಾವು ಸಹ ಎಲ್ಲವನ್ನೂ ಬಿಟ್ಟು ಈ ಸೇವೆಯಲ್ಲಿ ಪಾಲ್ಗೊಳ್ಳುವುದರಿಂದ ನಮಗೆ ಇದಕ್ಕಿಂತ ಮುಂಚೆ ಇದ್ದ ಅಲ್ಪಸ್ವಲ್ಪ ಲೋಪ ದೋಷಗಳೆಲ್ಲವೂ ಸಹ ನಿವಾರಣೆಯಾದವು. ಆದ್ದರಿಂದ ಪ್ರತಿಯೊಬ್ಬರಿಗೂ ನಾನು ನೀಡುವ ಸಲಹೆ ಏನೆಂದರೆ? ಪತ್ರಿಯವರು ಹೇಳಿರುವಂತಹ ಸಾಧನೆ, ಸ್ವಾಧ್ಯಾಯ, ಸಾಂಗತ್ಯ, ಸೇವೆ ಮಾಡಿದರೆ ಯಾರಾದರೂ ಸರಿ,

ಆರ್ಥಿಕವಾಗಿಯೇ ಅಲ್ಲ, ಕೌಟುಂಬಿಕವಾಗಿಯೇ ಅಲ್ಲ, ಮಾನಸಿಕವಾಗಿಯೂ ಸಹ ಶಾಂತಿಯಿಂದ ಜೀವಿಸುತ್ತಾರೆ. ಆಲೋಚಿಸಿ? ಇದಕ್ಕಿಂತಲೂ ಇನ್ನೇನು ಬೇಕು? ಇನ್ನು ಅದಕ್ಕಿಂತ ಉತ್ತಮವಾದ ಜೀವನ ಏನಿರುತ್ತದೆ?

ತಿಳಿದುಕೊಳ್ಳಿ! ಏನಿದ್ದರೂ, ಇಲ್ಲದೇ ಹೋದರೂ ಶಾಂತಿ ಇದ್ದರೆ ಅವನೇ ಶ್ರೇಷ್ಠನು. ಹೀಗೆ ಪತ್ರಿಯವರು ಹೇಳಿರುವಂತಹ ಪ್ರತಿಯೊಂದನ್ನು ನಾವು ಪಾಲಿಸಬೇಕು. ಅವರು ಏನು ಹೇಳಿದ್ದಾರೆಂದರೆ? "ಮರಣಿಸುವುದಕ್ಕೆ ಮುಂಚೆಯೇ ಮರಣಿಸಬೇಕು" ಎಂದಿದ್ದಾರೆ. ಅಂದರೆ ಸ್ಮರಣಸಿದ ನಂತರ ಏನು ನಡೆಯುತ್ತದೆಯೋ? ಮರಣಿಸುವುದಕ್ಕೆ ಮುಂಚೆಯೇ ನಾವು ತಿಳಿದುಕೊಂಡರೆ? ಈಗ ನಾವು ಏನು ಮಾಡಬೇಕೆಂದು ಅರ್ಥವಾಗುತ್ತದೆ.

ಮುಖ್ಯವಾಗಿ ಸಾವು ಎಂದರೆ ಭಯ ಹೋಗುತ್ತದೆ. ಸತ್ತುಹೋದ ನಂತರ ಲಾಭವನ್ನು ಹೊಂದಬೇಕೆಂದರೆ ಏನು ಮಾಡಬೇಕೆಂದು ತಿಳಿಯುತ್ತದೆ. ಅವೆಲ್ಲವನ್ನೂ ಮಾಡಲು ಪ್ರಾಮುಖ್ಯತೆ ನೀಡುತ್ತೇವೆ.

ಪತ್ರಿಯವರು ಹೇಳುತ್ತಾರಲ್ಲವೇ.. ಯಾವುದರ ಮೇಲೆ ಶ್ರದ್ಧೆ ಇಟ್ಟರೇ ಅದನ್ನೇ ನಾವು ಸಾಧಿಸುತ್ತೇವೆ ಎಂದು. ನೀವು ಸಂಗೀತದ ಮೇಲೆ ಶ್ರದ್ಧೆ ಇಟ್ಟರೆ ಸಂಗೀತದಲ್ಲಿ ವಿದ್ವಾಂಸರಾಗುತ್ತೀರ. ನೀವು ರಾಜಕೀಯದಲ್ಲಿ ಶ್ರದ್ಧೆ ಇಟ್ಟರೆ ಒಬ್ಬ ರಾಜಕೀಯ ನಾಯಕನಾಗುತ್ತೀರ. ನೀವು ವ್ಯಾಪಾರದ ಮೇಲೆ ದೃಷ್ಟಿ ಇಟ್ಟರೆ ಹಣವನ್ನು ಚೆನ್ನಾಗಿ ಸಂಪಾದಿಸುತ್ತೀರ. ಅದೇ ರೀತಿ ಜ್ಞಾನದ ಮೇಲೆ ದೃಷ್ಟಿ ಇಟ್ಟರೆ ನೀವು ಶ್ರೇಷ್ಠ ಜ್ಞಾನವಂತರಾಗುತ್ತೀರಾ. ಆ ಜ್ಞಾನವೇ ನಮ್ಮನ್ನು ಉನ್ನತ ಲೋಕಗಳಿಗೆ ಸೇರಿಸಬಲ್ಲದು.

ಈ ವಿಷಯವನ್ನು ಇದಕ್ಕಿಂತ ಮುಂಚೆ ಸ್ವಲ್ಪ ತಿಳಿದುಕೊಂಡಿದ್ದೇವೆ. ಅದು ಏನೆಂದರೆ? ಯಾರು ಭಗವಂತನಿಗೆ ಪ್ರೀತಿ ಪಾತ್ರರಾಗುತ್ತಾರೋ! ಅಂದರೆ ಜ್ಞಾನಿಗಳಾಗುತ್ತಾರೋ! ಅವರು ಕಡ್ಡಾಯವಾಗಿ ಜನಾ ಲೋಕವನ್ನು ದಾಟಿ ಮೇಲಿನ ಲೋಕಗಳಿಗೇ ಹೋಗುತ್ತಾರೆ. ಆದ್ದರಿಂದ ಭಗವಂತನಿಗೆ ಪ್ರೀತಿ ಪಾತ್ರರಾಗಬೇಕು. ಆದ್ದರಿಂದ ನೆನಪಿಟ್ಟುಕೊಳ್ಳಿ ಧ್ಯಾನ ಮಾಡಿ, ಅಂತಹ ಜ್ಞಾನವನ್ನು ನೀವು ಸಂಪಾದಿಸಿಕೊಳ್ಳಿ. ಅಷ್ಟೇಅಲ್ಲ ನಿಮ್ಮ ಪ್ರವರ್ತನೆ ಹೇಗಿದೆ? ವಾಸ್ತವವಾಗಿ ಹೇಗಿರಬೇಕು? ಯಾವ ಲಕ್ಷಣಗಳು ನಿಮಗೆ ಇರಬೇಕು? ಎಂತಹ ಗುಣಗಳಿಂದ ನೀವು ಇರಬೇಕು? ಎಂಬುದನ್ನು ಮುಂದೆ ತಿಳಿದುಕೊಳ್ಳೋಣ. ಧ್ಯಾನ ಮಾಡುತ್ತಿದ್ದೀರ, ಜ್ಞಾನವನ್ನು ಸಂಪಾದಿಸಲು ಪ್ರಯತ್ನ

ಪಡುತ್ತಿದ್ದೀರ. ಆದರೆ ನಿಮ್ಮ ವರ್ತನೆ ಬದಲಾವಣೆಯಾದರೆ ಮಾತ್ರ ಜ್ಞಾನಿಯಾದಂತೆ ಲೆಕ್ಕ, ಆಗಲೇ ನೀವು ಭಗವಂತನಿಗೆ ಪ್ರೀತಿಪಾತ್ರರಾಗುತ್ತೀರ, ಆಗಲೇ ನೀವು ಜನಾಲೋಕವನ್ನು ದಾಟಿ ಮೇಲಿನ ಲೋಕಗಳಿಗೆ ಹೋಗುವಿರಿ. ಅದಕ್ಕೆ ಪತ್ರಿ ಅವರು ಏನು ಹೇಳುತ್ತಾರೆಂದರೆ? "ಕಷ್ಟಗಳು, ನಷ್ಟಗಳು, ಅವಮಾನಗಳು ಎನ್ನುವಂತಹವು ಆಧ್ಯಾತ್ಮಿಕ ಪ್ರಗತಿಗೆ ಅಂದರೆ ಆತ್ಮದ ಉನ್ನತಿಗೆ ಮೆಟ್ಟಿಲುಗಳು"ಎಂದಿದ್ದಾರೆ. ಅವರು ಇನ್ನೂ ಅವು ನಿಮ್ಮ ಆತ್ಮದ ಬೆಳವಣಿಗೆಗೆ ಸಹಾಯ ಮಾಡುತ್ತವೆಯೇ ಹೊರತು, ಅವೇನು ನಿಮಗೆ ಸಮಸ್ಯೆಗಳನ್ನು ಉಂಟುಮಾಡುವಂತಹವಲ್ಲ ಎಂದಿದ್ದಾರೆ. ಆದ್ದರಿಂದ ಆತ್ಮದ ಉನ್ನತಿ ಆಗಬೇಕೆಂದರೆ ಕಡ್ಡಾಯವಾಗಿ ಕೆಲವು ಕಷ್ಟಗಳು ಇರುತ್ತವೆ, ಎಷ್ಟು ಕಷ್ಟಗಳಿದ್ದರೆ ಅಷ್ಟು ಆತ್ಮಪರವಾಗಿ ನೀವು ಅಭಿವೃದ್ಧಿ ಹೊಂದುತ್ತೀರ ಎಂದು ತಿಳಿದುಕೊಳ್ಳಬೇಕು. ಆದ್ದರಿಂದ ಸುಖದುಃಖಗಳಲ್ಲಿ ಸಮಭಾವದಿಂದ ಇರಬೇಕು ಎಂದು ಪತ್ರಿಯವರು ಹೇಳಿದ್ದಾರೆ. ಅದೇರೀತಿ ಈಗ ನಾವು ಧ್ಯಾನ ಸಾಧನೆ ಮಾಡುತ್ತಿದ್ದೇವೆ. ಈ ಧ್ಯಾನವನ್ನು ಮಾಡುವುದು ಸಹ ತುಂಬಾ ಕಷ್ಟವೇ, ಬಾಯಿ ಮಾತಿನಲ್ಲಿ ಹೇಳುವಷ್ಟು ಸುಲಭವೇನಲ್ಲ. ಸುಮ್ಮನೆ ಹೇಳುವುದಕ್ಕೆ ತುಂಬಾ ಸುಲಭ ಎನ್ನುತ್ತಾರೆ. ಸೋಫಾದಲ್ಲಿ ಕುಳಿತುಕೊಳ್ಳುವುದು ಸುಲಭವೇ! ಕೈಗಳನ್ನು ಕಟ್ಟಿಕೊಳ್ಳುವುದು ಈಜೀಯೇ! ಕಣ್ಣುಗಳನ್ನು ಮುಚ್ಚಿಕೊಳ್ಳುವುದು ಸಹ ಸುಲಭವೇ! ಅಲ್ಲಿಂದ ಶುರುವಾಗುತ್ತವೆ ಕಷ್ಟಗಳು, ಸಮಸ್ಯೆಗಳು, ನೋವು. ಅವರು ಎಷ್ಟು ಅವಸ್ಥೆಗಳನ್ನು ಪಡುತ್ತಾರೋ ಆಗ ತಿಳಿಯುತ್ತದೆ.

ಎರಡು ಗಂಟೆಗಳು ಅಂದುಕೊಂಡರೆ ಕಣ್ಣುಗಳನ್ನು ಮುಚ್ಚಿದ ನಂತರ ಎರಡು ಗಂಟೆಗಳು ಆದಮೇಲೆ ಕಣ್ಣುಗಳನ್ನು ತೆರೆಯಬೇಕು. ಇಷ್ಟರೊಳಗೆ ಕಷ್ಟ ಆಗಬಹುದು. ಆದರೆ ಎಂತಹ ಪರಿಸ್ಥಿತಿಯಲ್ಲಿಯೂ ಕಣ್ಣುಗಳನ್ನು ತೆರೆಯಬಾರದು. ಆ ಸಹನೆ ಇರಬೇಕು, ಆ ತಾಳ್ಮೆ ಇರಬೇಕು. ಆ ತಿತೀಕ್ಷೆ, ಆ ಸಬೂರಿ ಇರಬೇಕು. ಶ್ರೇಷ್ಠವಾದ ವ್ಯಕ್ತಿಗಳು ಈ ಮಾತುಗಳನ್ನೇ ಹೇಳಿದ್ದಾರೆ.

ಅದಕ್ಕೆ ಶ್ರೀ ಕೃಷ್ಣ ಭಗವಾನರು ಏನು ಹೇಳಿದ್ದಾರೆಂದರೆ ತಾಳ್ಮೆ ಇರಬೇಕು ಎಂದಿದ್ದಾರೆ. ಪತ್ರಿಯವರು ಸಹನೆ ಎಂದು ಹೇಳುತ್ತಿರುತ್ತಾರೆ, ಷಿರಿಡಿ ಬಾಬಾ ಸಬೂರಿ ಎಂದಿದ್ದಾರೆ. ಅಷ್ಟೇ ಹೊರತು ಯಾವುದೋ ಒಂದು ಆಲೋಚನೆ ಬಂದ ತಕ್ಷಣವೇ, ಸ್ವಲ್ಪ ಕಷ್ಟ ಎನಿಸಿದ ಕೂಡಲೇ ಎದ್ದು ಹೋಗು ಬಾರದು. ಕಷ್ಟವೆನಿಸಿದರೂ ಕುಳಿತುಕೊಳ್ಳಬೇಕು. ಏಕೆಂದರೆ? ಆ ಭಗವಂತನು ಇಷ್ಟಪಡುವ ಲಕ್ಷಣಗಳಲ್ಲಿ ಸಹನೆಯು ಸಹ ಒಂದು.

ಧ್ಯಾನದ ಮೂಲಕ ಭಗವಂತನ ಮೇಲೆ ನಾವು ದೃಷ್ಟಿಯನ್ನು ಇಡುತ್ತಿದ್ದೇವೆ. ಆದ್ದರಿಂದ ಆತನ ಮೇಲೆ ದೃಷ್ಟಿ ಇಡುವುದಕ್ಕೆ ಸಹಿಸಿಕೊಳ್ಳಬೇಕು. ಶರೀರವನ್ನು ನಿಯಂತ್ರಣದಲ್ಲಿ ಇಡುತ್ತೀಯಾ, ಚೆನ್ನಾಗಿಯೇ ಇದೆ. ಆದರೆ ಇಲ್ಲಿಯೇ ಆಲೋಚನೆಗಳು ಬರುತ್ತವೆ. ಆಗಲೇ ಸಹಿಸಿಕೊಳ್ಳುತ್ತಾ, ಕುಳಿತುಕೊಳ್ಳುತ್ತಾ, ಕುಳಿತುಕೊಳ್ಳುತ್ತಾ ಆಲೋಚನೆಗಳು ಇಲ್ಲದ ಸ್ಥಿತಿ ಬರುತ್ತದೆ. ಆಗಲೇ ಭಗವತ್ ಸ್ಥಿತಿಯಲ್ಲಿ ಇರುತ್ತೀಯಾ. ಹಾಗೆ ಆ ಭಗವಂತನ ಮೇಲೆ ದೃಷ್ಟಿ ಇಡಬೇಕಾದರೂ, ಆತನನ್ನು ಹೊಂದಬೇಕೆಂದರೂ, ಆತನನ್ನು ಸೇರಬೇಕೆಂದರು ತಾಳ್ಮೆ ಇರಬೇಕು. ಸುಮ್ಮನೆ ಕುಳಿತುಕೊಳ್ಳುವುದು ದೊಡ್ಡ ವಿಷಯವಲ್ಲ, ಕುಳಿತುಕೊಳ್ಳುವುದನ್ನು ಎಲ್ಲರೂ ಮಾಡುತ್ತಾರೆ ಆದರೆ, ಕುಳಿತುಕೊಳ್ಳಲು ಸಹನೆಯನ್ನು ತೋರಿಸಬೇಕು. ಅದಕ್ಕಾಗಿಯೇ ಪತ್ರಿಯವರು "ಸಹನೆಯೇ ಪ್ರಗತಿ" ಎಂದಿದ್ದಾರೆ.

ಅವರು ಜ್ಞಾನ ನವರತ್ನಗಳಲ್ಲಿ ಯಾರು ಸಹನೆಯನ್ನು ತೋರಿಸುತ್ತಾರೋ! ಅವರೇ ಜೀವನದಲ್ಲಿ ಪ್ರಗತಿಯನ್ನು ಸಾಧಿಸುತ್ತಾರೆ ಎಂದು ಹೇಳಿದ್ದಾರೆ. ಆಧ್ಯಾತ್ಮಿಕ ಪ್ರಗತಿಗೆ ಮಾರ್ಗ ಧ್ಯಾನ ಮಾಡುವುದು. ಅಂದರೆ ಅದರಲ್ಲಿಯೂ ಸಹನೆ ಇದ್ದರೇನೇ ಆ ಪ್ರಗತಿ ಇರುತ್ತದೆ, ಅದನ್ನೇ ಪತ್ರಿಯವರು ಹೇಳುತ್ತಾರೆ. ಆದ್ದರಿಂದ ಉನ್ನತ ಲೋಕಗಳನ್ನು ಸೇರಿಕೊಳ್ಳಬೇಕೆಂದರೆ ಸಹನೆಯು ಸಹ ಅತ್ಯವಶ್ಯಕ.

# ಮಾನವ ಜೀವನದ ಗುರಿ

ಧ್ಯಾನಕ್ಕೆ ಬರುವ ಮೊದಲು ನಾನು ದೇಹ ಎಂಬಂತೆ ಬದುಕುತ್ತಿದ್ದೆನು. ಪತ್ರಿಯವರ ಪರಿಚಯವಾದ ನಂತರ 'ನಾನು ದೇಹ ಅಲ್ಲ, ನಾನು ಆತ್ಮ' ಎಂಬುದನ್ನು ಅರ್ಥ ಮಾಡಿಕೊಂಡು, ಅದಕ್ಕೆ ಅನುಗುಣವಾಗಿ ನಾನು ಬದುಕುವುದನ್ನು ಪ್ರಾರಂಭಿಸಿದೆನು.

ಅದಕ್ಕಿಂತ ಮುಂಚೆ ಯಾವುದಾದರೂ ಸಂದೇಶವನ್ನು ನೀಡಬೇಕೆಂದರೆ ತುಂಬಾ ಕಷ್ಟವಾಗುತ್ತಿತ್ತು. ಆದರೆ ಧ್ಯಾನಕ್ಕೆ ಬಂದ ನಂತರ ಗಂಟೆಗಳಷ್ಟೇ ಅಲ್ಲ, ದಿನಗಳ ಗಟ್ಟಲೆ ಬಹಳಷ್ಟು ವಿಷಯಗಳು ನಿರರ್ಗಳವಾಗಿ ಹೇಳುತ್ತಿದ್ದೇನೆ. ಹಾಗಾದರೆ ಈ ಸ್ಥಿತಿ ಹೇಗೆ ಬಂತೆಂದರೆ? ಪತ್ರಿಯವರು ಹೇಳಿದಂತೆ "ಶ್ವಾಸದ ಮೇಲೆ ಗಮನವನ್ನು ಇರಿಸಿ ಧ್ಯಾನ ಮಾಡಿದ್ದರಿಂದಲೇ".

ಪತ್ರಿಯವರು ನೀಡುವ ಸಂದೇಶಗಳಲ್ಲಿ ಸಾವಿನ ನಂತರದ ಜೀವನದ ಪ್ರಸ್ತಾಪಗಳು ಆಗಾಗ ಬರುತ್ತಿರುತ್ತವೆ. ನಾನು ಅವರ ಸಂದೇಶಗಳನ್ನು ಹೆಚ್ಚಾಗಿ ಕೇಳಿಸಿಕೊಳ್ಳುವುದರಿಂದ, ನನಗೆ ಬಹಳಷ್ಟು ವಿಷಯಗಳು ತಿಳಿದವು. ಅವರು ಒಂದು ವಿಷಯವನ್ನು ಅನೇಕ ಕೋನಗಳಲ್ಲಿ, ಅನೇಕ ಸ್ಥಳಗಳಲ್ಲಿ ಹೇಳುತ್ತಿರುತ್ತಾರೆ. ನಾನು ಏನು ಮಾಡುವೆನೆಂದರೆ? ರವರು ಸಾವಿನ ನಂತರದ ಜೀವನದ ಬಗ್ಗೆ ಎಲ್ಲಿಯೇ ಹೇಳಿದರೂ, ಅವೆಲ್ಲವುಗಳನ್ನು ಸಂಗ್ರಹಿಸಿ ಒಂದು ಕಡೆ ಬರೆದಿಟ್ಟುಕೊಳ್ಳುತ್ತೇನೆ. ಅದೇ ರೀತಿ ಯಾವ ಪುಸ್ತಕದಲ್ಲಿ ಸಾವಿನ ನಂತರದ ಜೀವನದ ಬಗ್ಗೆ ಓದಿದರೂ ಅವೆಲ್ಲವನ್ನು ಒಂದು ಕಡೆ ಬರೆದಿಟ್ಟುಕೊಳ್ಳುತ್ತೇನೆ.

ಏಕೆಂದರೆ? ಬಹಳಷ್ಟು ಜನ ಏನನ್ನಾದರೂ ಕೇಳಿಸಿಕೊಂಡರೆ, ಎಲ್ಲವೂ ಅರ್ಥವಾಯಿತು ಎಂದುಕೊಳ್ಳುತ್ತಾರೆ. ಆದರೆ ಸಂಪೂರ್ಣ ಸ್ಪಷ್ಟತೆ ಬರುವುದಿಲ್ಲ. ಆದರೆ ಅದೆಲ್ಲವನ್ನು ಒಟ್ಟುಗೂಡಿಸಿಕೊಂಡರೆ! ಅದ್ಭುತವಾದ ಸ್ಪಷ್ಟತೆ ಬರುತ್ತದೆ. ಅದನ್ನು ಕ್ರಮವಾಗಿ ಜೋಡಿಸಿಕೊಂಡರೆ ಅದ್ಭುತವಾದ ಪರಿಕಲ್ಪನೆಯಾಗುತ್ತದೆ.

ಅದೇ ರೀತಿ ನಾನು ಭಗವದ್ಗೀತೆಯಿಂದ, ಇಲ್ಲದೇ ಹೋದರೆ ಭಜಗೋವಿಂದಂ ನಿಂದ, ವಶಿಷ್ಠಾಮೃತದಿಂದ ಅಧ್ಯಯನ ಮಾಡುವುದರಿಂದ, ಇದಕ್ಕೆ ಅನುಗುಣವಾದವುಗಳನ್ನು ಇವುಗಳಲ್ಲಿ ಸೇರಿಸುತ್ತೇನೆ. ಹೀಗೆ ಮಾಡುವುದರಿಂದ ಇನ್ನೂ

ಬಹಳಷ್ಟು ವಿಷಯಗಳನ್ನು ಅಪಾರವಾಗಿ ತಿಳಿದುಕೊಳ್ಳುವುದಷ್ಟೇ ಅಲ್ಲದೇ ಚೆನ್ನಾಗಿ ಅರ್ಥಮಾಡಿಕೊಳ್ಳುತ್ತೇನೆ.

ನೀವು ಸಹ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕೆಂದರೆ ಕಡ್ಡಾಯವಾಗಿ ಜ್ಞಾನಿಗಳೆಲ್ಲರೂ ಹೇಳಿರುವ ವಿಷಯಗಳನ್ನು ಒಂದು ಕಡೆ ಸಂಗ್ರಹಿಸಿ ಇಟ್ಟುಕೊಳ್ಳಬೇಕು. ಹಾಗೆ ಜೋಡಿಸಿಕೊಳ್ಳುತ್ತಾ ಅವೆಲ್ಲವನ್ನು ನೀವು ಕ್ರಮವಾಗಿ ಜೋಡಿಸಿ ಇಟ್ಟುಕೊಳ್ಳಬೇಕು. ಹೀಗೆ ಸ್ವಲ್ಪ ಶ್ರಮ ಪಡಬೇಕು, ಕಷ್ಟಪಡಬೇಕು. ಹೀಗೆ ಕಷ್ಟ ಪಟ್ಟರೇನೇ ನಮ್ಮ ಜ್ಞಾನ ಹೆಚ್ಚುತ್ತದೆ, ಶ್ರಮವಿಲ್ಲದೆ ಸುಮ್ಮನೆ ಹೆಚ್ಚಾಗಬೇಕೆಂದರೆ? ಹೇಗೆ ಹೆಚ್ಚುತ್ತದೆ? ನಾವು ಸುಮ್ಮನೆ ಧ್ಯಾನ ಮಾಡಿದರೆ ಎಲ್ಲವೂ ಬಂದುಬಿಡುತ್ತವೆ ಎಂದುಕೊಳ್ಳುತ್ತೇವೆ. ಗಂಟೆಗಳು, ಗಂಟೆಗಳು ಧ್ಯಾನ ಒಂದೇ ಸಾಕಾಗುವುದಿಲ್ಲ ಎಂದು ಪತ್ರಿಯವರು ಹೇಳುತ್ತಲೇ ಇರುತ್ತಾರೆ.

ಅವರು ಏನು ಹೇಳುತ್ತಾರೆಂದರೆ? ಧ್ಯಾನವು ನಿನಗೆ ಬಹಳ ಸಹಕರಿಸುತ್ತದೆ, ನಿನ್ನ ಬುದ್ಧಿಯನ್ನು ವಿಕಾಸ ಹೊಂದುವಂತೆ ಮಾಡುತ್ತದೆ, ನೀನು ಅರ್ಥಮಾಡಿಕೊಳ್ಳುವ ಶಕ್ತಿಯನ್ನು ನಿನಗೆ ಹೆಚ್ಚಿಸುತ್ತದೆ, ಪ್ರತಿಯೊಂದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳುತ್ತೀಯ, ಪ್ರತಿಯೊಂದನ್ನು ವಿಶ್ಲೇಷಣೆ ಮಾಡುತ್ತೀಯ ಎನ್ನುತ್ತಾರೆ.

ಆದರೆ ಜ್ಞಾನ ಹೆಚ್ಚಾಗಬೇಕೆಂದರೆ ಜ್ಞಾನದಿಂದ ತುಂಬಿದ ಪುಸ್ತಕಗಳನ್ನು ಓದಬೇಕು, ಸಜ್ಜನ ಸಾಂಗತ್ಯ ಅಂದರೆ ಜ್ಞಾನಿಗಳ ಸಾಂಗತ್ಯ ಮಾಡಬೇಕು. ಸಹಜವಾಗಿ ಹೊಸಬರು ಆ ಅನುಭವಗಳು, ಈ ಅನುಭವಗಳು ಎನ್ನುತ್ತಾ... ನನಗೆ ಅದು ಬಂತು, ಇದು ಕಾಣಿಸಿತು ಎಂದು ಹೇಳುತ್ತಿರುತ್ತಾರೆ. ಆದರೆ ಇಂತಹ ಅನುಭವಗಳಿಂದ ನಮಗೆ ಯಾವುದೇ ಪ್ರಯೋಜನವಿಲ್ಲ.

ಆದರೆ ಜ್ಞಾನಿಗಳ ಸಂದೇಶವನ್ನು ನಾವು ಕೇಳಿಸಿಕೊಳ್ಳುವುದರಿಂದ ಅಪಾರವಾದ ಜ್ಞಾನವನ್ನು ಸಂಪಾದಿಸಿಕೊಳ್ಳಬಹುದು. ಹೀಗೆ ನಾನು ಹೇಳುವುದರಲ್ಲಿಯೂ ಸಹ, ಬೇರೊಂದು ಕೆಲಸವಿಲ್ಲದಂತೆ ಕೇಳಿಸಿಕೊಳ್ಳುತ್ತಾ ಇದ್ದರೆ! ಏಕೆ ಅಭಿವೃದ್ಧಿಯಾಗುವುದಿಲ್ಲ?

ಪತ್ರಿಯವರು ಏನು ಹೇಳುತ್ತಾರೆಂದರೆ? ಸಮಯವನ್ನು ವ್ಯರ್ಥ ಮಾಡಬೇಡಿ ಎನ್ನುತ್ತಾರೆ. ನಿನ್ನ ಕೆಲಸಗಳನ್ನು ಮಾಡಿಕೋ, ಸಂಸಾರವನ್ನು ನೋಡಿಕೋ, ಸುಖವಾಗಿರು, ಎಂಜಾಯ್ ಮಾಡು ಎಂದು ಹೇಳುತ್ತಾರೆ. ಅವುಗಳೊಂದಿಗೆ ನಿನಗೆ ಸಮಯ ಸಿಕ್ಕಾಗ, ವ್ಯರ್ಥವಾದ ವಿಷಯಗಳು, ಅವಶ್ಯಕತೆ ಇಲ್ಲದ ವಿಷಯಗಳು ಬೇಡ

ಎನ್ನುತ್ತಾರೆ. ಅವಶ್ಯಕತೆ ಇಲ್ಲದ ಪುಸ್ತಕಗಳನ್ನು ಓದಬೇಡಿ ಸಮಯವನ್ನು ವ್ಯರ್ಥ ಮಾಡಬೇಡಿ ಎಂದು ಪತ್ರಿಯವರು ಹೇಳುತ್ತಾ ಇರುತ್ತಾರೆ.

ನಮಗೆ ಹಗಲಷ್ಟೇ ಅಲ್ಲದೇ, ರಾತ್ರಿಯೂ ಸಹ ಬಹಳ ಸಮಯ ಇರುತ್ತದೆ. ಆ ಸಮಯವನ್ನು ಸಾಧನೆಗೆ, ಸ್ವಾಧ್ಯಾಯಕ್ಕೆ, ಸಾಂಗತ್ಯಕ್ಕೆ ಉಪಯೋಗಿಸಿಕೊಂಡು ಶ್ರಮಪಟ್ಟರೆ ಏಕೆ ಅಭಿವೃದ್ಧಿಯಾಗುವುದಿಲ್ಲ? ನಾವು ಸಹ ಏಕೆ ಶ್ರೇಷ್ಠ ವ್ಯಕ್ತಿಗಳಾಗುವುದಿಲ್ಲ?

ಪ್ರಸ್ತುತ ನಾವು ಮರಣಿಸಿದ ನಂತರ ನಡೆಯುವುದರ ಬಗ್ಗೆ ತಿಳಿದುಕೊಳ್ಳುತ್ತಿದ್ದೇವೆ. ಏನೆಂದರೆ? ಈ ಭೂಲೋಕ ವಷ್ಟೇ ಅಲ್ಲದೇ ಇನ್ನು ಆರು ಲೋಕಗಳು ಇವೆ ಎಂದು ತಿಳಿದುಕೊಂಡೆವು. ಅವುಗಳಲ್ಲಿ ಜನಾಲೋಕದ ಬಗ್ಗೆ ಹೆಚ್ಚಿನದಾಗಿ ಪ್ರಸ್ತಾಪಿಸುತ್ತಿದ್ದೇನೆ. ಕಾರಣ ಜನಾಲೋಕಕ್ಕಿಂತ ಮೇಲೆ ಕೆಲವು ಲೋಕಗಳು, ಜನಾ ಲೋಕಕ್ಕಿಂತ ಕೆಳಗೆ ಕೆಲವು ಲೋಕಗಳು ಇವೆ. ಸಾಮಾನ್ಯರು ಜನಾಲೋಕದ ಕೆಳಗಿನ ಲೋಕಗಳಿಗೆ ಹೋಗುತ್ತಾರೆ. ಆದರೆ ಮಹಾತ್ಮರು, ಜ್ಞಾನಿಗಳು, ಯೋಗಿಗಳು, ತಪ:ಸಂಪನ್ನರು ಇಂತಹವರು ಜನಾ ಲೋಕವನ್ನು ದಾಟಬಲ್ಲರು ಎಂದು ಹೇಳಿದ್ದಾರೆ.

ಆ ಜನಾ ಲೋಕದ ಪ್ರಾಮುಖ್ಯತೆಯ ಬಗ್ಗೆ ಕೆಲವು ವಿಷಯಗಳನ್ನು ತಿಳಿದುಕೊಳ್ಳಬೇಕು.

ಪತ್ರಿಯವರು ಏನು ಹೇಳುತ್ತಾರೆಂದರೆ? ಪೂರ್ಣಾತ್ಮಗಳಾಗಲೀ, ಮೂಲಾತ್ಮಗಳಾಗಲೀ ತನ್ನೊಳಗಿನಿಂದ ಅಂಶಗಳನ್ನು ಸೃಷ್ಟಿಸುತ್ತದೆ. ಅಂದರೆ ಅಂಶಾತ್ಮಗಳನ್ನು ಸೃಷ್ಟಿ ಮಾಡಿ ಅವುಗಳಿಗೆ ಒಂದು ಗುರಿಯನ್ನು ನಿರ್ದೇಶಿಸುತ್ತದೆ. ಏನೆಂದರೆ? ನೀವು ಸಹ ಅಪಾರವಾದ ಜ್ಞಾನ ಸಂಪನ್ನರಾಗಿ ನನ್ನ ಸ್ಥಿತಿಗೆ ಬೆಳೆದು, ನಾನು ಇರುವ ಈ ಸತ್ಯ ಲೋಕಕ್ಕೆ ನೀವು ಸೇರಿಕೊಂಡರೆ! ನಿಮಗೆ ಭೂಮಿಯ ಮೇಲೆ ಜನ್ಮಗಳು ಇರುವುದಿಲ್ಲ. ಆದರೆ ಸತ್ಯ ಲೋಕಕ್ಕೆ ಸೇರಿಕೊಳ್ಳುವವರೆಗೂ, ಯಾವ ಲೋಕಕ್ಕೆ ನೀವು ಹೋದರೂ ಪುನಹ ಪುನಹ ಜನ್ಮ ತೆಗೆದುಕೊಳ್ಳಬೇಕಾದದ್ದೇ! ಕೊನೆಗೆ ಸತ್ಯಲೋಕದ ಕೆಳಗಿರುವಂತಹ ತಪೋಲೋಕ ಅಂದರೆ ಬ್ರಹ್ಮ ಲೋಕಕ್ಕೆ ಸೇರಿಕೊಂಡರು ಅಂದರೆ ಅಷ್ಟು ಉನ್ನತಸ್ಥಾಯಿಗೆ ಸೇರಿಕೊಂಡರೂ ಪುನಃ ಭೂಮಿಯ ಮೇಲೆ ಬರಬೇಕಾದದ್ದೇ ಎಂದು ಹೇಳುತ್ತಾರೆ.

ಇದನ್ನೇ ನಮಗೆ ಭಗವದ್ಗೀತೆಯಲ್ಲಿಯೂ ಸಹ ಹೇಳಲಾಗಿದೆ.

**ಶ್ಲೋ: ಅಬ್ರಹ್ಮ ಭುವನಾ ಲ್ಲೋಕಾ: ಪುನರಾವರ್ತಿನೋ ಽರ್ಜುನ।**

**ಮಾಮು ಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ॥ (ಭ.ಗೀ.8–16)**

ತಾ:– ಓ ಅರ್ಜುನಾ ಆ ಬ್ರಹ್ಮ ಲೋಕಗಳಂತಹ ಲೋಕಗಳಿಗೆ ಸೇರಿಕೊಂಡರೂ ಪುನಹ ಜನ್ಮವನ್ನು ತೆಗೆದುಕೊಳ್ಳಬೇಕಾದದ್ದೇ! ಆದರೆ ನಾನು ಇರುವಂತಹ ಲೋಕಕ್ಕೆ ಅಂದರೆ ಸತ್ಯ ಲೋಕಕ್ಕೆ ಸೇರಿಕೊಂಡರೆ! ಮರಳಿ ಪುನರ್ಜನ್ಮ ಇರುವುದಿಲ್ಲ. ಅಂದರೆ ಭೂಮಿಯ ಮೇಲೆ ಮತ್ತೆಮತ್ತೆ ಹುಟ್ಟಬೇಕಾದ ಕೆಲಸ ಇರುವುದಿಲ್ಲ. ಎಂದು ಶ್ರೀ ಕೃಷ್ಣ ಭಗವಾನನ ಹೇಳಿರುವಂತಹ ವಿಷಯವನ್ನು ಹಲವಾರು ಬಾರಿ ನಾವು ಹೇಳಿಕೊಂಡಿದ್ದೇವೆ.

ಹಾಗೆ ಆ ಪೂರ್ಣಾತ್ಮ ಅಂಶಾತ್ಮಗಳಿಗೆ ಒಂದು ಗುರಿಯನ್ನು ನಿರ್ದೇಶಿಸುತ್ತದೆ. ಅಂದರೆ ಅಂಶಾತ್ಮಗಳಾದ ನಾವು ಪರಮ ಸತ್ಯ ಲೋಕಕ್ಕೆ ಸೇರಬೇಕು. ಅದೇ ಎಲ್ಲರ ಜೀವನದ ಗುರಿ. ಹಾಗಾದರೆ ಆ ಸತ್ಯಲೋಕವನ್ನು ಯಾರು ಸೇರಬಲ್ಲರು? ವಾಸ್ತವವಾಗಿ ಸತ್ಯ ಲೋಕದಲ್ಲಿ ಯಾರು ಇರುತ್ತಾರೆ? ಅಂದರೆ ಪೂರ್ಣಾತ್ಮಗಳೇ ಇರುತ್ತವೆ. ಅಂದರೆ ಪೂರ್ಣಾತ್ಮಗಳಿಗೆ ಮಾತ್ರ ಸತ್ಯ ಲೋಕವನ್ನು ಸೇರಿಕೊಳ್ಳುವ ಅರ್ಹತೆ ಲಭಿಸುತ್ತದೆ.

ಅಂದರೆ ಯಾರಾದರೂ ಸರಿ ಪೂರ್ಣಾತ್ಮ ಆಗಬೇಕಾದದ್ದೇ! ಪೂರ್ಣಾತ್ಮವಾಗಿ ತಯಾರಾಗಬೇಕಾದದ್ದೇ! ಅದುವೇ ಪ್ರತಿಯೊಬ್ಬರ ಜೀವನದ ಗುರಿ. ಸಹಜವಾಗಿ ಕೆಲವರಿಗೆ ಸಂದೇಹ ಉಂಟಾಗುತ್ತದೆ. ಮುಖ್ಯವಾಗಿ ಬಹಳಷ್ಟು ಕಷ್ಟಗಳು ಬಂದಾಗ ಪ್ರಶ್ನಿಸುತ್ತಾರೆ. ಆ ದೇವರು ಏತಕ್ಕಾಗಿ ನನ್ನನ್ನು ಹುಟ್ಟಿಸಬೇಕು? ಏಕೆ ನನ್ನನ್ನು ಇಷ್ಟು ಕಷ್ಟಗಳಿಗೆ ಒಳಪಡಿಸಬೇಕು? ಜೀವನದಲ್ಲಿ ನಾನು ಏನು ಮಾಡಬೇಕು? ವಾಸ್ತವವಾಗಿ ಈ ಜೀವನ ಏತಕ್ಕಾಗಿ? ಹೀಗೆ ಬಹಳಷ್ಟು ಅನುಮಾನಗಳು, ಬಹಳಷ್ಟು ಜನರಲ್ಲಿ ಉಂಟಾಗುತ್ತವೆ.

ಕೆಲವರು ಏನೆಂದುಕೊಳ್ಳುತ್ತಾರೆಂದರೆ? ಎಂಜಾಯ್ ಮಾಡುವುದಕ್ಕಾಗಿಯೇ ಈ ಜೀವನ ಎಂದುಕೊಳ್ಳುತ್ತಾರೆ. ಆದ್ದರಿಂದ ಯಾವಾಗಲೂ ಸಂಪಾದಿಸುವುದು, ಎಂಜಾಯ್ ಮಾಡುವುದನ್ನೇ ಮಾಡುತ್ತಿರುತ್ತಾರೆ.

ಆದರೆ ಜನ್ಮಗಳು ಹೆಚ್ಚುತ್ತಾ ಹೋದಂತೆ! ಇಂತಹ ಪ್ರಶ್ನೆಗಳು ಬರುತ್ತಿರುತ್ತವೆ. ವಾಸ್ತವವಾಗಿ ನಾನು ಏನು ಮಾಡಬೇಕು? ಏಕೆ ಈ ಜೀವನ? ನಾನು ಸಾಧಿಸಬೇಕಾದದ್ದು

ಏನು? ಇಂತಹ ಪ್ರಶ್ನೆಗಳಿಂದ ಎಲ್ಲವೂ ಅಯೋಮಯವಾಗಿರುತ್ತದೆ, ಉತ್ತರ ಸಿಗುವುದಿಲ್ಲ.

ಈಗ ನಾವು ಇಂತಹ ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಳ್ಳುತ್ತಿದ್ದೇವೆ. ಪೂರ್ಣಾತ್ಮವು ಮೊದಲಿಗೆ ಅಂಶಾತ್ಮಗಳನ್ನು ಸೃಷ್ಟಿ ಮಾಡಿ, ಆ ವಿಧವಾದ ಗುರಿಯನ್ನು ನಿರ್ದೇಶಿಸಿ, ಅವರನ್ನು ಜನಾಲೋಕದೊಳಗೆ ಪ್ರವೇಶಿಸುವಂತೆ ಮಾಡುತ್ತದೆ. ಈ ಅಂಶಾತ್ಮಗಳಿಗೆ ಅದು ಪ್ರಾರಂಭದ ಜನ್ಮವಾದ್ದರಿಂದ, ಅಲ್ಲಿ ಆ ಮೇಲಿನ ಲೋಕಗಳಲ್ಲಿರುವಂತಹ ಆ ಸೀನಿಯರ್ಸ್ ಅವರಿಗೆ ಹೇಳಬೇಕಾದ ವಿಷಯಗಳನ್ನೆಲ್ಲಾ ಹೇಳುತ್ತಾರೆ. ನೀನು ಜನ್ಮ ತೆಗೆದುಕೊಂಡ ನಂತರ ಶ್ರಮ ಪಟ್ಟು ಗುರಿಯನ್ನು ಸಾಧಿಸಬೇಕೆಂದು ನೆನಪು ಮಾಡುತ್ತಾರೆ. ಆಗ ಅವರು ಪ್ರಾರಂಭದಲ್ಲಿ ಯಾವುದೋ ಒಂದು ಜನ್ಮ ತೆಗೆದುಕೊಳ್ಳುತ್ತಾರೆ. ಸ್ತ್ರೀಯಾಗಿಯೋ, ಪುರುಷನಾಗಿಯೋ, ಶ್ರೀಮಂತನಾಗಿಯೋ, ಬಡವನಾಗಿಯೋ! ಯಾವುದೋ ಒಂದು ಜನ್ಮ ತೆಗೆದುಕೊಳ್ಳುತ್ತಾರೆ.

ಹಾಗೆ ಮೊಟ್ಟ ಮೊದಲನೇ ಜನ್ಮ ಭೂಮಿಯ ಮೇಲೆ ಪ್ರಾರಂಭವಾಗುತ್ತದೆ. ಹಾಗೆ ತಾಯಿಯ ಗರ್ಭದಲ್ಲಿ ಪ್ರವೇಶಿಸಿ ಜನ್ಮ ತೆಗೆದುಕೊಳ್ಳುತ್ತಾರೆ. ಪ್ರಾರಂಭದಲ್ಲಿ ಕೆಲವು ದಿನಗಳು ಅವೆಲ್ಲವೂ ನೆನಪಿರುತ್ತವೆ, ನಂತರ ಯಾವುದು ನೆನಪಿರುವುದಿಲ್ಲ, ಎಲ್ಲವನ್ನೂ ಮರೆಯುತ್ತಾರೆ. ಅವರ ಮೇಲೆ ಆ ಸುತ್ತಲೂ ಇರುವವರ ಪ್ರಭಾವ ಬೀಳುತ್ತದೆ.

ಮುಖ್ಯವಾಗಿ ಮೊದಲಿಗೆ ಏಳರಿಂದ ಎಂಟು ವರ್ಷಗಳು ತಂದೆ-ತಾಯಿಯ, ಕುಟುಂಬದ ಸದಸ್ಯರ ಪ್ರಭಾವ ಅವರ ಮೇಲೆ ಅಧಿಕವಾಗಿರುತ್ತದೆ. ಅವರು ಯಾವ ರೀತಿ ಹೇಳಿದರೆ ಆ ರೀತಿ ಮಾಡುತ್ತಾರೆ, ಅವರು ತಿನ್ನುವ ಆಹಾರವನ್ನು ತಿನ್ನುತ್ತಾರೆ, ಅವರು ಏನು ಮಾಡಿದರೆ ಅದನ್ನು ಮಾಡುತ್ತಿರುತ್ತಾರೆ, ಅವರು ಯಾವ ರೀತಿ ಬದುಕಿದರೆ ಆ ರೀತಿ ಬದುಕುತ್ತಾರೆ. ಅದು ಅವರ ಪರಿಸ್ಥಿತಿ. ಅವರು ಮಾಂಸಾಹಾರಿಗಳಾದರೆ ಇವರೂ ಸಹ ಮಾಂಸಾಹಾರಿಗಳಾಗುತ್ತಾರೆ, ಅವರ ಸಸ್ಯಾಹಾರಿಗಳಾದರೆ ಇವರು ಸಹ ಸಸ್ಯಾಹಾರಿಗಳಾಗುತ್ತಾರೆ, ಅದೇ ರೀತಿ ಅವರು ಹಿಂದುಗಳಾದರೆ ಇವರು ಹಿಂದುಗಳೇ ಎಂದುಕೊಳ್ಳುತ್ತಾರೆ, ಅವರು ಕ್ರಿಶ್ಚಿಯನ್ ಆದರೆ ಇವರು ಕ್ರಿಶ್ಚಿಯನ್ನೇ ಅಂದುಕೊಳ್ಳುತ್ತಾರೆ. ಹಾಗೆ ಆ ಪ್ರಾಂತ್ಯದ ಆಚಾರಗಳು, ವ್ಯವಹಾರಗಳನ್ನು ಪಾಲಿಸುತ್ತಾ ಇರುತ್ತಾರೆ, ಬಹುತೇಕ ಅವರಂತೆ ತಯಾರಾಗಿಬಿಡುತ್ತಾರೆ.

ನಿಧಾನವಾಗಿ ಏಳರಿಂದ ಎಂಟು ವರ್ಷಗಳು ದಾಟಿದ ನಂತರ ಸಮಾಜಕ್ಕೆ ಬರುತ್ತಾರೆ. ಈ ಸಮಾಜದೊಳಗೆ ಬಂದ ನಂತರ ಅವರೆಲ್ಲರ ಪ್ರಭಾವ ಇವರ ಮೇಲೆ ಬೀಳುತ್ತದೆ. ಸ್ನೇಹಿತರೊಂದಿಗೆ ಸಮಯ ಕಳೆಯುವುದು, ಶಾಲೆಗೆ ಹೋಗುವುದು, ಆ ವಾತಾವರಣ,ಇವೆಲ್ಲವೂ ಇವರ ಮೇಲೆ ಬೀಳುತ್ತವೆ. ಸಹಜವಾಗಿ ಪ್ರತಿಯೊಬ್ಬರು ಹಣಕ್ಕೆ ಪ್ರಾಮುಖ್ಯತೆ ನೀಡುತ್ತಾರೆ, ಹಣ ಇರುವವನಿಗೆ ಬೆಲೆ ಕೊಡುತ್ತಾರೆ, ಹಣ ಇರುವವರನ್ನು ಗೌರವದಿಂದ ನೋಡುತ್ತಾರೆ, ಹಣ ಇಲ್ಲದವರನ್ನು ಬಹಳಷ್ಟು ಕೀಳಾಗಿ ನೋಡುತ್ತಾರೆ, ತುಂಬಾ ಕಡಿಮೆಯಂತೆ ಭಾವಿಸುತ್ತಾರೆ. ಆದ್ದರಿಂದ ಆ ಹಣವಿರುವವರಿಗೆ ಇರುವ ಭೋಗುಗಳು, ಅವರಿಗಿರುವ ಕಾರುಗಳು, ಅವೆಲ್ಲವನ್ನು ನೋಡಿ ನಾನು ಸಹ ಹಣ ಸಂಪಾದಿಸಿದರೆ ಅವರಂತೆ ಹಾಯಾಗಿ ಇರಬಹುದಲ್ಲವೇ? ಎಂಬ ಅಭಿಪ್ರಾಯ ಏರ್ಪಡುತ್ತದೆ.

ಹಾಗೆ ಅವರು ಹೇಗೆ ಬದುಕುತ್ತಿದ್ದರೆ ಇವರು ಸಹ ಹಾಗೆಯೇ ಬದುಕುತ್ತಾರೆ. ಅವರಿಗೆ ಎಂತಹ ಅಭ್ಯಾಸಗಳು ಇದ್ದರೆ ಇವರಿಗೂ ಅವೇ ಅಭ್ಯಾಸವಾಗಿಬಿಡುತ್ತವೆ. ಹೀಗೆ ವಿದ್ಯಾಭ್ಯಾಸ ಮುಗಿದ ನಂತರ ಮತ್ತೆ ಸಂಸಾರದಲ್ಲಿ ಪ್ರವೇಶಿಸುತ್ತಾರೆ. ಮತ್ತೆ ಅದೊಂದು ಹೊಸ ರೀತಿಯಾದ ಜೀವನ. ಪುನಹ ಅವರಿಗೆ ಮಕ್ಕಳು ಹುಟ್ಟುವುದು, ಅವರನ್ನು ಬೆಳೆಸುವುದು, ನೋಡಿಕೊಳ್ಳುವುದನ್ನು ಮಾಡುತ್ತಿರುತ್ತಾರೆ. ಹಾಗೆ ಪ್ರಾರಂಭದ ಜನ್ಮಗಳಲ್ಲಿ ಅವರು ತಂದುಕೊಂಡ ಕರ್ಮಗಳಿರುವುದಿಲ್ಲ ಆದ್ದರಿಂದ ಹೆಚ್ಚಿನ ಕಷ್ಟಗಳು ಇರುವುದಿಲ್ಲ.

ಆದ್ದರಿಂದ ಇವರಿಗೆ ಅಹಂಕಾರ, ಗರ್ವ ಹೆಚ್ಚಾಗಿ ಇರುತ್ತದೆ. ಅದಕ್ಕೆ ಹೇಳುತ್ತಾರೆ ಯಾವುದೇ ಕಷ್ಟ ಇಲ್ಲದಿದ್ದರೆ ದೇವರು ನೆನಪಿಗೆ ಬರುವುದಿಲ್ಲ, ಕಷ್ಟ ಇರುವಾಗಲೇ ದೇವರು ನೆನಪಿಗೆ ಬರುತ್ತಾರೆ ಎನ್ನುತ್ತಾರೆ. ಆದ್ದರಿಂದ ಯಾವುದೇ ಕಷ್ಟಗಳು ಇಲ್ಲದವನು ಯಾರನ್ನು ಹಿಡಿಸಿಕೊಳ್ಳುವುದಿಲ್ಲ, ದೇವರನ್ನು ಸಹ ನೆನಪಿಗೆ ತಂದುಕೊಳ್ಳುವುದಿಲ್ಲ. ತುಂಬಾ ಹೆಮ್ಮೆಯಂತೆ ಫೀಲ್ ಆಗುತ್ತಿರುತ್ತಾರೆ. ಹಾಗೆ ಅಹಂಕಾರ ಪಡುತ್ತಾ, ಎಲ್ಲರಿಗಿಂತಲೂ ನಾನೇ ಶ್ರೇಷ್ಠ ಎಂದುಕೊಳ್ಳುತ್ತಾ ನಿಧಾನವಾಗಿ, ತಪ್ಪುಗಳನ್ನು ಪಾಪಗಳನ್ನು ಮಾಡುತ್ತಿರುತ್ತಾರೆ.

ಹಾಗೆ ಪ್ರಾರಂಭವಾಗುತ್ತವೆ ಅವನ ಕರ್ಮಗಳು. ಅವನು ಮಾಡಿದ ಕರ್ಮಗಳೆಲ್ಲವೂ ಅವನ ಖಾತೆಯಲ್ಲಿ ಜಮಾ ಆಗುತ್ತವೆ. ಆ ಜನ್ಮದಲ್ಲಿ ಕೆಲವನ್ನು ಅನುಭವಿಸುತ್ತಾನೆ, ಉಳಿದವುಗಳು ಶರೀರವನ್ನು ಬಿಟ್ಟ ನಂತರ ಮೇಲೆ ಅವನ ಅಕೌಂಟ್ ನಲ್ಲಿ ಅಂದರೆ ಸಂಚಿತ ಕರ್ಮದಲ್ಲಿ ಬೀಳುತ್ತವೆ.

ಮರಣಿಸಿದ ನಂತರ ಶರೀರವನ್ನು ಬಿಟ್ಟು ಮೇಲಕ್ಕೆ ಹೊರಟು ಹೋಗುತ್ತಾರೆ. ಪುನಹ ಜನ್ಮವನ್ನು ತೆಗೆದುಕೊಂಡಾಗ ಅವನ ಸಂಚಿತ ಕರ್ಮಗಳಲ್ಲಿ ಕೆಲವನ್ನು ತೆಗೆದುಕೊಂಡು ಮತ್ತೆ ಭೂಮಿಯ ಮೇಲೆ ಬರುತ್ತಾರೆ. ಪುನಹ ಮಾಮೂಲೇ! ಆ ಕರ್ಮಗಳನ್ನು ಅನುಭವಿಸುತ್ತಾ, ಪುನಃ ಮಾಡುತ್ತಾ, ಕರ್ಮಗಳನ್ನು ಹೆಚ್ಚಿಸಿಕೊಳ್ಳುತ್ತಾ ಜನ್ಮಗಳನ್ನು ಹೆಚ್ಚಿಸಿಕೊಳ್ಳುತ್ತಾರೆ. ಹಾಗೆ ಜನ್ಮಗಳು ಹೆಚ್ಚುತ್ತಾ ಜೀವನದ ಪ್ರಯಾಣ ಮುಂದುವರೆಯುತ್ತಿರುತ್ತದೆ.

ಪತ್ರಿಯವರು ಏನು ಹೇಳುತ್ತಾರೆಂದರೆ? ಪ್ರಾರಂಭದ ಜನ್ಮಗಳಲ್ಲಿ ದೇಹಭಾವದಿಂದ ಇರುತ್ತಾರೆ ಅಂದರೆ ದೇಹಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಾರೆ. ಅಂದರೆ ಖಾನಾ, ಪೀನಾ, ಸೋನಾ ಬಿಟ್ಟರೆ ಇನ್ನೇನು ಇರುವುದಿಲ್ಲ.

ಹಾಗೆ 100, 150 ಜನ್ಮಗಳ ನಂತರ ಅವರಲ್ಲಿ ಸ್ವಲ್ಪ ಬದಲಾವಣೆ ಬರುತ್ತದೆ. ಅವರ ಗುಣ ಬದಲಾವಣೆಯಾಗುತ್ತದೆ. ಆಗ ಅವರು ಮನೋಸ್ಥಿತಿಗೆ ಬರುತ್ತಾರೆ. ಅಂದರೆ ಮನಸ್ಸಿಗೆ ಪ್ರಾಮುಖ್ಯತೆ ನೀಡುತ್ತಾರೆ. ಹಲವಾರು ಬಯಕೆಗಳು ಇರುತ್ತವೆ, ಬಹಳ ಶ್ರೇಷ್ಠ ವ್ಯಕ್ತಿ ಆಗಬೇಕು ಎಂದುಕೊಳ್ಳುತ್ತಾರೆ, ಎಲ್ಲರಿಗಿಂತಲೂ ಶ್ರೇಷ್ಠ ವ್ಯಕ್ತಿ ಆಗಬೇಕು ಎಂದುಕೊಳ್ಳುತ್ತಾನೆ. ಯಾವುದೋ ಪದವಿಯನ್ನು ಸಂಪಾದಿಸಬೇಕು ಎಂದುಕೊಳ್ಳುತ್ತಾನೆ, ಇಲ್ಲದಿದ್ದರೆ ಬಹಳ ಶ್ರೇಷ್ಠವಾದ ಹೆಸರನ್ನು ಸಂಪಾದಿಸಿಕೊಳ್ಳಬೇಕು ಎಂದುಕೊಳ್ಳುತ್ತಾನೆ. ಅಹಂಕಾರದಿಂದ ತಪ್ಪುಗಳನ್ನು ಪಾಪಗಳನ್ನು, ಮಾಡುತ್ತಾನೆ. ಹಾಗೆ ಕರ್ಮಗಳು ಹೆಚ್ಚುತ್ತಾ ಇರುತ್ತವೆ. ಕರ್ಮಗಳೊಂದಿಗೆ ಕಷ್ಟಗಳು ಸಹ ಹೆಚ್ಚುತ್ತಾ ಇರುತ್ತವೆ, ಹಾಗೆ ಇನ್ನೂ ನೂರು, ನೂರೈವತ್ತು, ಜನ್ಮಗಳು ಕಳೆದು ಹೋಗುತ್ತವೆ.

ಹಾಗೆ ಜನ್ಮ ಜನ್ಮಕ್ಕೂ ಕಷ್ಟಗಳು ಹೆಚ್ಚುತ್ತಲೇ ಇರುತ್ತವೆ. ಕಾರಣ ಎಷ್ಟು ಜನ್ಮಗಳಲ್ಲಿ ಮಾಡಿದ ಕರ್ಮಗಳೆಲ್ಲವೂ ಇರುತ್ತವೆ ಆದ್ದರಿಂದ, ಅವರು ಅವುಗಳನ್ನೇ ತಂದುಕೊಂಡು ಅವುಗಳನ್ನು ಅನುಭವಿಸುತ್ತಾ ಇರುತ್ತಾರೆ.

ಈ ಕಷ್ಟಗಳು ಜಾಸ್ತಿಯಾದಾಗ ಅವರು ಆಲೋಚನೆಯಲ್ಲಿ ಬೀಳುತ್ತಾರೆ. ಏನು ಈ ಕಷ್ಟ? ಏಕೆ ಬಂದಿದೆ? ಎಂದು ಆಲೋಚಿಸುತ್ತಾರೆ. ಅವರಿಗೆ ಏನೂ ಅರ್ಥವಾಗುವುದಿಲ್ಲ? ಆಗ ಹಿರಿಯರನ್ನು, ಗುರುಗಳನ್ನು ಆಶ್ರಯಿಸುತ್ತಾರೆ. ಅವರನ್ನು ಕೇಳುತ್ತಿರುತ್ತಾರೆ. ನಾನು ಈ ಕಷ್ಟದಿಂದ ಹೊರಬರುವುದು ಹೇಗೆ? ಏನು ಮಾಡಬೇಕು? ಎಂದು ಕೇಳುತ್ತಾನೆ. ಅವರು ಹೇಳಿದಂತೆ ಮಾಡುತ್ತಿರುತ್ತಾನೆ.

ಅದಕ್ಕಿಂತ ಮುಂಚೆನ ಜನ್ಮಗಳಲ್ಲಿ ಇವನಿಗೆ ಯಾವ ಗುರುವೂ ಬೇಕಾಗಿರಲಿಲ್ಲ, ಯಾರೂ ಬೇಕಾಗಿರಲಿಲ್ಲ. ಆದರೆ ಆ ಸ್ಥಿತಿಗೆ ಬರುವ ವೇಳೆಗೆ ಅಂದರೆ 250 300 ಜನ್ಮಗಳನ್ನು ದಾಟುವ ಹೊತ್ತಿಗೆ ಗುರುಗಳನ್ನು ಹುಡುಕುತ್ತಿರುತ್ತಾನೆ. ಅವನಿಗೆ ಇಷ್ಟವಾದ ಗುರುಗಳು ಪರಿಚಯವಾದರೆ ನಿಧಾನವಾಗಿ ಅವರು ಹೇಳುವ ಸಂದೇಶಗಳನ್ನು ಕೇಳಿಸಿಕೊಳ್ಳುತ್ತಾ, ತನ್ನ ಪ್ರವರ್ತನೆಯನ್ನು ಬದಲಾವಣೆ ಮಾಡಿಕೊಳ್ಳುತ್ತಾನೆ. ನಿಧಾನವಾಗಿ ಸಾತ್ವಿಕ ಗುಣದೊಳಗೆ ಬರುತ್ತಾನೆ.

ಇಂತಹ ಸಮಯದಲ್ಲಿ ಯಾವನೋ ಇನ್ನಷ್ಟು, ಇನ್ನಷ್ಟು ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತಾನೆ. ಹಾಗೆ ಕೊನೆಗೆ ಏನಾಗುತ್ತದೆಯೆಂದರೆ? ಇನ್ನೂ ಏನೋ ಇದೆ! ಎಂದುಕೊಳ್ಳುತ್ತಾ ಪತ್ರಿಯವರಂತಹ ಗುರುಗಳನ್ನು ಸೇರುತ್ತಾನೆ. ಆಗ ಅವರಂತಹವರು ಏನು ಹೇಳುತ್ತಾರೆಂದರೆ ಅವು, ಇವು ಅಲ್ಲ, ಪೂಜೆಗಳು, ಭಜನೆಗಳು, ಸ್ತೋತ್ರಗಳು, ಜಪಗಳನ್ನೆಲ್ಲ ಧ್ಯಾನ ಮಾಡಿ ಎಂದು ಹೇಳುತ್ತಾರೆ.

ಆಗ ಧ್ಯಾನವನ್ನು ಸಹ ಮಾಡುತ್ತಾನೆ, ಸಸ್ಯಾಹಾರಕ್ಕೆ ಬರುತ್ತಾನೆ, ಬುದ್ಧಿ ಚೆನ್ನಾಗಿ ವಿಕಾಸ ಹೊಂದುವ ಸ್ಥಿತಿಗೆ ಬರುತ್ತಾನೆ. ಹಾಗೆ ಸ್ವಲ್ಪ ಒಳ್ಳೆಯದು – ಕೆಟ್ಟದ್ದು, ತಪ್ಪು– ಸರಿ, ಪಾಪ – ಪುಣ್ಯ, ಧರ್ಮ –ಅಧರ್ಮದ ಬಗ್ಗೆ ಹೆಚ್ಚಾಗಿ ಆಲೋಚಿಸುತ್ತಾನೆ. ನಿಧಾನವಾಗಿ ಈ ತಪ್ಪುಗಳನ್ನು, ಪಾಪಗಳನ್ನು ಬಿಟ್ಟುಬಿಡುತ್ತಾನೆ, ಒಳ್ಳೆಯ ಕೆಲಸಗಳು, ಸೇವೆಗಳನ್ನು ಮಾಡುತ್ತಾ ಇರುತ್ತಾನೆ, ಆಧ್ಯಾತ್ಮಿಕವಾಗಿ ಸ್ವಲ್ಪ ಬೆಳೆಯುತ್ತಾನೆ.

ಆಗ ಈ ಧ್ಯಾನವನ್ನು ಮಾಡುತ್ತಾ, ಆ ಗುರುಗಳು ಹೇಳುವಂತಹ ಪುಸ್ತಕಗಳನ್ನು ಓದುವುದು, ಅವರ ಸಂದೇಶಗಳನ್ನು ಆಲಿಸುತ್ತಿದ್ದರೆ ಅವರಿಗೆ ನಿಧಾನವಾಗಿ ಜ್ಞಾನ ಹೆಚ್ಚುತ್ತಿರುತ್ತದೆ.

ಈಗ ನಾವೆಲ್ಲಾ ಆ ಸ್ಥಿತಿಯಲ್ಲಿ ಇರುವವರೇ. ನಾವೆಲ್ಲಾ ಸಹ ಅಷ್ಟು ಜನ್ಮಗಳನ್ನು ಎತ್ತಿ, ಅಷ್ಟು ವಿಧದ ಸ್ಥಿತಿಗಳನ್ನು ದಾಟಿ ಈ ಹಂತದಲ್ಲಿ ಇದ್ದೇವೆ.

ಆದರೆ ಕೆಲವರು ಧ್ಯಾನಕ್ಕೆ ಬಂದರೂ ಸಹ ಅವರು ಈ ಸ್ಥಿತಿಯಲ್ಲಿ ಇರುವುದಿಲ್ಲ. ಅವರು ದೇಹ ಸ್ಥಿತಿಯಲ್ಲಿಯೋ, ಮನೋಸ್ಥಿತಿಯಲ್ಲಿಯೋ ಇರುವವರೇ! ಅವರು ಧ್ಯಾನ ಮಾಡಿದರೆ ರೋಗಗಳು ವಾಸಿಯಾಗುತ್ತವೆ, ಧ್ಯಾನ ಮಾಡಿದರೆ ಬಯಕೆಗಳು ಈಡೇರುತ್ತವೆ ಎಂದು ಧ್ಯಾನಕ್ಕೆ ಬರುತ್ತಾರೆ, ಅಷ್ಟೇಹೊರತು ಜ್ಞಾನಕ್ಕೋಸ್ಕರ ಬರುವುದಿಲ್ಲ.

ಆದ್ದರಿಂದ ಅವರು ಅಂತಹ ಕ್ಲಾಸುಗಳಿಗೆ ಹೋಗುತ್ತಿರುತ್ತಾರೆ. ಈಗ ಗೈಡಿಂಗ್ ಎಂದು, ಸಂಕಲ್ಪ ಧ್ಯಾನಗಳೆಂದು, ಮನೀ ಮೆಡಿಟೇಶನ್ಸ್ ಎಂದು, ಹೀಗೆ ಹಲವು ವಿಧದ ಧ್ಯಾನಗಳು ಬರುತ್ತಿರುವುದರಿಂದ ಅವುಗಳಿಗೆ ಹೋಗುತ್ತಾರೆ. ಆದರೆ ಅವರು ಇನ್ನು ಬಹಳಷ್ಟು ಜನ್ಮಗಳನ್ನು ತೆಗೆದುಕೊಳ್ಳಬೇಕು. ಅವರು ಜ್ಞಾನದ ಸ್ಥಿತಿಗೆ ಬರಬೇಕೆಂದರೆ ಕಡ್ಡಾಯವಾಗಿ 50, ನೂರು ಜನ್ಮಗಳನ್ನು ತೆಗೆದುಕೊಳ್ಳದೇ ಜ್ಞಾನಮಾರ್ಗದೊಳಗೆ ಬರಲಾರರು. ನಾವು ಹೇಳಿದರೂ ಅವರಿಗೆ ಅರ್ಥವಾಗುವುದಿಲ್ಲ.

ನೀವು ಇವನ್ನೆಲ್ಲ ದಾಟಿ ಬಂದಿದ್ದೀರಾ ಆದ್ದರಿಂದಲೇ ನಾನು ಖಚಿತವಾಗಿ ಹೇಳುತ್ತಿದ್ದೇನೆ, ನಿಮ್ಮಲ್ಲಿ ಬಹಳಷ್ಟು ಜನ ಈ ಗೈಡಿಂಗ್ ಅಂತಹವನ್ನು ಮಾಡಿದರೂ ಫಲಿತಾಂಶ ಬಾರದೇ, ಏನಿದು? ಏನಿದು? ಎಂದುಕೊಳ್ಳುತ್ತಾ ಈ ಜ್ಞಾನಮಾರ್ಗಕ್ಕೆ ಬಂದವರೇ! ಗೈಡಿಂಗ್ ನಲ್ಲಿ ಇರುವವರಿಗೆ ಆತ್ಮಜ್ಞಾನ ಅರ್ಥವಾಗುವುದಿಲ್ಲ.

ಆದ್ದರಿಂದ ಯಾವ ಗೂಡಿನ ಪಕ್ಷಿಗಳು ಆ ಗೂಡಿಗೇ ಸೇರುತ್ತವೆ ಎಂದು ಪತ್ರಿಯವರು ಹೇಳುತ್ತಿರುತ್ತಾರೆ. ಆದ್ದರಿಂದ ಈಗ ನಾವು ಮಾಡಬೇಕಾದದ್ದು ನಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕು. ನಮ್ಮ ಜನ್ಮಗಳನ್ನು ವ್ಯರ್ಥ ಮಾಡಿಕೊಳ್ಳಬಾರದು. ಇಲ್ಲಿಯವರೆಗೂ 300 ರಿಂದ 350 ಜನ್ಮಗಳು ನಮಗೆ ವ್ಯರ್ಥವಾಗಿವೆ. ಇನ್ನು ನಾವು ವ್ಯರ್ಥ ಮಾಡಿಕೊಳ್ಳಬಾರದು. ಸಾಧ್ಯವಾದಷ್ಟು ಬೇಗ ನಮ್ಮ ಜೀವನದ ಗುರಿಯಾದಂತಹ ಆ ಪೂರ್ಣ ಜ್ಞಾನವನ್ನು ಸಂಪಾದಿಸಿಕೊಂಡು ನಮ್ಮ ಗುರಿಯಾದಂತಹ ಸತ್ಯ ಲೋಕವನ್ನು ಸೇರುವ ಮಾರ್ಗದಲ್ಲಿ ನಾವು ಶ್ರಮ ಪಡಬೇಕು. ಜನಾಲೋಕವನ್ನು ದಾಟಿದವರು ಚೆನ್ನಾಗಿ ಶ್ರಮ ಪಡುತ್ತಾರೆ. ಧ್ಯಾನ ಸಾಧನೆ ಮಾಡಿ ಜ್ಞಾನವನ್ನು ಹೆಚ್ಚಿಸಿಕೊಂಡು, ಶ್ರೇಷ್ಠವಾದ ಸೇವೆಗಳನ್ನು ಮಾಡಿ ಜನಾಲೋಕವನ್ನು ದಾಟಿ ಹೋಗುತ್ತಾರೆ.

ಇಲ್ಲಿ ಇನ್ನೊಂದನ್ನು ನೆನಪಿಟ್ಟುಕೊಳ್ಳಿ, ಜನಾ ಲೋಕವನ್ನು ದಾಟಿದವರು ಜನಾಲೋಕಕ್ಕೆ ಹೋಗಬೇಕಾದ ಅಗತ್ಯ ಇರುವುದಿಲ್ಲ. ಆದ್ದರಿಂದ ಯಾರಾದರೂ ಸರಿ ಜನಾಲೋಕದ ನಂತರ ಇರುವ ಆ ಶ್ರೇಷ್ಠವಾದ ಲೋಕಗಳನ್ನು ಸೇರಿಕೊಳ್ಳುವ ಪ್ರಯತ್ನ ಮಾಡಬೇಕು.

ನಾವು ಇದಕ್ಕಿಂತ ಮುಂಚೆ ಹೇಳಿಕೊಂಡಿದ್ದೇವೆ, ಯಾರಾದರೆ ಭೂಮಿಯ ಮೇಲೆ ವಿಶೇಷವಾದ ಸೇವೆಗಳನ್ನು ಮಾಡುತ್ತಾರೋ! ನಿಸ್ವಾರ್ಥವಾಗಿ ಜೀವಿಸುತ್ತಾರೋ! ತನಗಾಗಿ ಅಲ್ಲದೇ ಪರರಿಗೋಸ್ಕರವೇ ಜೀವನವನ್ನು ಕಳೆಯುತ್ತಾರೋ! ಅವರು

ಭೂಮಿಯ ಮೇಲೆ ಮಹಾತ್ಮರು ಎನಿಸಿಕೊಳ್ಳುತ್ತಾರೆ. ಶರೀರವನ್ನು ಬಿಟ್ಟ ನಂತರ ಅಂದರೆ ಸತ್ತುಹೋದ ನಂತರ ಮಹಾಲೋಕಕ್ಕೆ ಸೇರುತ್ತಾರೆ. ನಂತರ ಅಲ್ಲಿಂದ ಕೆಳಗೆ ಬರುತ್ತಾರೆ. ಸೇವೆಗಳನ್ನು ಮಾಡುತ್ತಾ ನಿಧಾನವಾಗಿ ಧ್ಯಾನ ಸಾಧನೆಗೆ ಬರುತ್ತಾರೆ. ಧ್ಯಾನ ಸಾಧನೆಯೊಂದಿಗೆ ಜ್ಞಾನ ಸಂಪಾದನೆ ಮಾಡುತ್ತಾರೆ.

ಧ್ಯಾನ ಎಂದರೆ ತಪಸ್ಸನ್ನು ವಿಶೇಷವಾಗಿ ಮಾಡುತ್ತಾರೆ. ಹೆಚ್ಚಿನದಾಗಿ ಧ್ಯಾನ ಮಾಡುತ್ತಾರೆ. ಹಾಗೆ ತೀವ್ರವಾಗಿ ಮಾಡುವುದರಿಂದ ಅವರು ತಪೋಲೋಕಕ್ಕೆ ಸೇರುತ್ತಾರೆ. ಆ ತಪೋಲೋಕದಿಂದ ಪುನಹ ಭೂಮಿಗೆ ಬರುತ್ತಾರೆ. ಇನ್ನೂ ಹೆಚ್ಚಿನದಾಗಿ ಧ್ಯಾನ ಸಾಧನೆಯನ್ನು ಮಾಡುತ್ತಾ ಆಂಜನೇಯ ಸ್ವಾಮಿಯಂತೆ, ಮುಮ್ಮಡಿವರಂ ಬಾಲ ಯೋಗಿಯಂತೆ, ಜಿಲ್ಲೆಲಮೂಡಿ ಅಮ್ಮನವರಂತೆ, ಚಿವಟಮ್ ಅಮ್ಮನವರಂತೆ, ಅವಧೂತರಂತೆ ಜನ್ಮಪೂರ್ತಿ ಸಾಧನೆಯನ್ನು ಬಿಟ್ಟರೆ ಮತ್ತೊಂದು ಇರುವುದಿಲ್ಲ. ಹಾಗೆ ಸಾಧನೆ ಮಾಡುತ್ತಾ ನಿಧಾನವಾಗಿ ಸತ್ಯವನ್ನು ಅನುಭವಕ್ಕೆ ತಂದುಕೊಳ್ಳುತ್ತಾರೆ. ಕೊನೆಗೆ ಸತ್ಯಸಾಯಿಬಾಬಾ, ಷಿರಡಿ ಬಾಬಾ, ವಿವೇಕಾನಂದ, ರಮಣ ಮಹರ್ಷಿಯಂತೆ ಸತ್ಯವನ್ನು ಅನುಭವಕ್ಕೆ ತಂದುಕೊಂಡು ಸತ್ಯಲೋಕವನ್ನು ಸೇರುತ್ತಾರೆ. ಅಲ್ಲಿಗೆ ಅವರ ಬಂದು ಹೋಗುವ (ಸಂಚಾರ) ನಿಲ್ಲುತ್ತದೆ. ಇನ್ನು ಭೂಮಿಗೆ ಅವರು ಬರಬೇಕಾದ ಕೆಲಸವಿಲ್ಲ. ನಂತರ ಸತ್ಯ ಲೋಕದಲ್ಲಿದ್ದು, ಅಲ್ಲೇ ಮಾಡಬೇಕಾದ ಕೆಲಸಗಳನ್ನು ಮಾಡಿಕೊಳ್ಳುತ್ತಾರೆ.

ಇವೆಲ್ಲವೂ ಅರ್ಥವಾದರೇ ಯಾರಿಗಾದರೂ ದೃಷ್ಟಿ ಅದರ ಮೇಲೆಯೇ ಇರುತ್ತದೆ. ಇದು ಅರ್ಥವಾಗದಿದ್ದರೆ ಬೇರೆ ದೃಷ್ಟಿ ಇರುತ್ತದೆ, ಬೇರೆ ಬೇರೆ ಕೆಲಸಗಳನ್ನು ಮಾಡುತ್ತಾರೆ. ಯಾರಾದರೂ ಸರಿ ಅವರ ಶರೀರಕ್ಕಾಗಿ, ಶರೀರದ ಅಗತ್ಯಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಸಹಜವಾಗಿ ಮಾಡಬೇಕಾದ ಕೆಲಸಗಳನ್ನು ಮಾಡಬೇಕು. ಸಂಸಾರದಲ್ಲಿರುವವರಿಗೆ ಮಕ್ಕಳು, ಕುಟುಂಬದ ಜವಾಬ್ದಾರಿಗಳು ಇರುತ್ತವೆ. ಅದು ಸೃಷ್ಟಿ ಧರ್ಮ. ಅದಕ್ಕಾಗಿಯೇ ಪತ್ರೀಜಿ "ಸಂಸಾರದಲ್ಲಿಯೇ ನಿರ್ವಾಣ" ಎಂದಿದ್ದಾರೆ.

ನಮ್ಮ ತಾಯಿ ತಂದೆಯರಿಂದ ನಾವು ಭೂಮಿಗೆ ಬಂದಿದ್ದೇವೆ. ನಾವು ಭೂಮಿಯ ಮೇಲೆ ಬಂದು, ಇನ್ನೂ ನನಗೇನೂ ಅಗತ್ಯವಿಲ್ಲ ಎಂದರೆ ಹೇಗೆ? ನಾವು ಹೇಗೆ ಭೂಮಿಯ ಮೇಲೆ ಬಂದಿದ್ದೇವೆಯೋ! ಈ ಸೃಷ್ಟಿ ಮುಂದುವರೆಯಲು ನಮ್ಮ ತಾಯಿ ತಂದೆಯರು, ಅವರ ಪಾತ್ರವನ್ನು ಅವರು ಹೇಗೆ ಪೋಷಿಸಿರುವರೋ! ನಾವು ಸಹ ಪೋಷಿಸಬೇಕು. ನಾವು ಸಹ ಕೆಲವು ಮಕ್ಕಳಿಗೆ ಜನ್ಮವನ್ನು ನೀಡುತ್ತಾ, ಸೃಷ್ಟಿ ಧರ್ಮವನ್ನು

ನಿರ್ವಹಿಸಬೇಕು. ಅಷ್ಟೇಅಲ್ಲ ಜನ್ಮವನ್ನು ನೀಡಿದ ನಂತರ ಅವರನ್ನು ಪ್ರಯೋಜಕರನ್ನಾಗಿ ಮಾಡುವವರೆಗೆ ಅವರ ಮೇಲೆ ಸ್ವಲ್ಪ ದೃಷ್ಟಿಯನ್ನು ಸಹ ಇಡಬೇಕು, ಅವರ ಜವಾಬ್ದಾರಿಯನ್ನು ನಿರ್ವಹಿಸಬೇಕು. ಅಂದರೆ ಅವರನ್ನು ಪೋಷಣೆ ಮಾಡಬೇಕು, ಅವರನ್ನು ಪ್ರಾಯೋಜಕರನ್ನಾಗಿ ಮಾಡಬೇಕು. ಅವರ ಕಾಲುಗಳ ಮೇಲೆ ಅವರು ನಿಂತುಕೊಳ್ಳುವವರೆಗೂ ಪೋಷಣೆ ಮಾಡಬೇಕು.

ಅವರು ಒಂದು ಉದ್ಯೋಗವನ್ನು ಸಂಪಾದಿಸಿಕೊಂಡು, ಅವರ ಕೆಲಸವನ್ನು ಅವರು ಮಾಡಿಕೊಳ್ಳುವ ಸ್ಥಿತಿಗೆ ಬಂದಾಗ ಅವರನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕು. ಪಕ್ಷಿ ರೆಕ್ಕೆಗಳು ಬಂದಾಗ ಮಗುವನ್ನು ಹೇಗೆ ಬಿಟ್ಟುಬಿಡುತ್ತದೆಯೋ! ನಾವು ಸಹ ಹಾಗೆಯೇ ಬಿಟ್ಟುಬಿಡಬೇಕು. ಅಷ್ಟೇ ಹೊರತು ಸಾಯುವವರೆಗೂ ಅವರನ್ನು ಹಿಡಿದುಕೊಂಡು ಕುಳಿತುಕೊಳ್ಳುವುದಲ್ಲ. ಆದ್ದರಿಂದ ಕುಟುಂಬದ ಜವಾಬ್ದಾರಿಯನ್ನು ನೋಡಿಕೊಳ್ಳಬೇಕು. ಅದೇರೀತಿ ಸಂಪಾದನೆಯನ್ನು ಸಹ ನೋಡಿಕೊಳ್ಳಬೇಕು.

ಇದರಲ್ಲಿ ಪತಿ–ಪತ್ನಿ ಇಬ್ಬರು ಅವರ ಪಾತ್ರವನ್ನು ಪೋಷಿಸಬೇಕು. ಅವರು ಅವರಿಗೆ ಇರುವ ಜವಾಬ್ದಾರಿಗಳನ್ನು ಒಟ್ಟಾಗಿ ನಿಭಾಯಿಸುತ್ತಿರಬೇಕು. ಹಾಗೆ ಪ್ರತಿ ಸಂಪಾದಿಸುತ್ತಾನೆ, ಪತ್ನಿ ಸಂಸಾರವನ್ನು ನಿಭಾಯಿಸುತ್ತಾ ಇರುತ್ತಾಳೆ. ಆದ್ದರಿಂದ ಯಾವುದೇ ಸಮಸ್ಯೆ ಇರುವುದಿಲ್ಲ. ಆ ರೀತಿ ಮಾಡುತ್ತಾ, ಜೀವನದ ಗುರಿಯನ್ನು ಸಾಧಿಸುವ ಪ್ರಯತ್ನ ಮಾಡಬೇಕು. ಹಾಗೆ ಮಾಡಿದಾಗ ಜೀವನವನ್ನು ಸದ್ವಿನಿಯೋಗಪಡಿಸಿಕೊಂಡವರಾಗುತ್ತೇವೆ, ಬಂದ ಕೆಲಸವನ್ನು ಸಂಪೂರ್ಣ ಗೊಳಿಸಿಕೊಂಡವರಾಗುತ್ತೇವೆ. ಯಾವ ಉದ್ದೇಶದಿಂದ ಭೂಮಿಗೆ ಬಂದಿರುವೆವೋ ಅದನ್ನು ನಾವು ಸಾಧಿಸಿಕೊಂಡವರಾಗುತ್ತೇವೆ. ಈ ರೀತಿ ಬದುಕಿದರೆ ನಿಜವಾಗಿಯೂ ಮಹಾನ್ ವ್ಯಕ್ತಿಗಳೇ!

ಹಾಗೆ ನಿನ್ನ ಪ್ರಣಾಳಿಕೆ (ಯೋಜನೆ)ಯ ಪ್ರಕಾರ ನೀನು ಬದುಕಿದರೆ, ಇದಕ್ಕಿಂತ ಇನ್ನೇನು ಬೇಕು? ಅಷ್ಟೇ ಅಲ್ಲ ಪತ್ರಿಯವರಂತಹ ಗುರುಗಳು ಸಿಕ್ಕರೆ ನಮ್ಮ ಯೋಜನೆಗಿಂತ ಹೆಚ್ಚಿನದನ್ನು ಮಾಡಲು ಸಾಧ್ಯವಾಗುತ್ತದೆ. ಆದ್ದರಿಂದ ನಾವು ಯಾವ ಹಂತದಲ್ಲಿ ಇದ್ದರೂ, ಅಂದರೆ ಯವ್ವನದಲ್ಲಿ ಇದ್ದರೂ, ಇಲ್ಲದಿದ್ದರೆ ಯೌವ್ವನದವಗದ್ಧಾಪ್ಯದಲ್ಲಿದ್ದವೃದ್ಧಾಪ್ಯದಲ್ಲಿದ್ದರೂ, ನಮ್ಮ ಗುರಿಯನ್ನು ಅರಿತು ಅದನ್ನು ಸಾಧಿಸಲು ಪರಿಶ್ರಮ ಪಡಬೇಕು. ಎಷ್ಟು ಸಮಯವಿದ್ದರೆ ಆ ಸಮಯವನ್ನು ಆತ್ಮಕ್ಕಾಗಿ ವಿನಯೋಗಿಸಬೇಕು.

ಕೆಲವು ಸಮಸ್ಯೆಗಳು ಇರಬಹುದು, ಕೆಲವು ಅಡ್ಡಿ ಆತಂಕಗಳು ಇರಬಹುದು, ಕೆಲವು ಪರೀಕ್ಷೆಗಳು ಸಹ ಇರಬಹುದು. ಬಹಳ ಇರುತ್ತದೆ, ಅವುಗಳ ದಾರಿ ಅವುಗಳದ್ದೇ! ನಮ್ಮ ಛಲ, ದೀಕ್ಷೆ, ನಮ್ಮ ಗುರಿ ನಮ್ಮದೇ. ಆದ್ದರಿಂದ ಇಲ್ಲಿ, ಸ್ತ್ರೀ, ಪುರುಷ, ಶ್ರೀಮಂತ ಬಡವ ಎನ್ನುವ ವಿಷಯಗಳು ನಮಗೆ ಅನಗತ್ಯ. ಅವೆಲ್ಲವೂ ಶಾಶ್ವತವಾಗಿ ಇರುವಂತಹವಲ್ಲ. ಯಾರಾದರೂ ಆತ್ಮಗಳೇ ಎಂಬುದನ್ನು ಮರೆಯಬಾರದು. ಯಾರೂ ಯಾರಿಗೂ ಶಾಶ್ವತವಲ್ಲ, ಯಾರಿಗೆ ಅವರೇ(ಅವರಷ್ಟಕ್ಕೆ ಅವರೇ) ಬಂದಿದ್ದಾರೆ.

ಅದಕ್ಕೆ ಪತ್ರಿಯವರು ಏನು ಹೇಳುತ್ತಾರೆಂದರೆ ಪಕ್ಕದವರ ಮೇಲೆ ದೃಷ್ಟಿ ಬೇಡ ಎನ್ನುತ್ತಾರೆ. ನಿನ್ನ ಬಗ್ಗೆ ನೀನು ನೋಡಿಕೋ! ಪಕ್ಕದವರ ಬಗ್ಗೆ ಏಕೆ ಆಲೋಚನೆ ಮಾಡುತ್ತೀಯಾ ಎನ್ನುತ್ತಾರೆ.

ಈ ಗೈಡಿಂಗ್ ನಲ್ಲಿ ಏನು ಹೇಳುತ್ತಾರೆಂದರೆ? ನೀವು ಆಸ್ಟ್ರಲ್ ಮಾಸ್ಟರ್ಸ್ ಅನ್ನು ಕೇಳದೇ ಇದ್ದರೆ ಅವರು ಏಕೆ ಕೊಡುತ್ತಾರೆ? ನೀವು ಕೇಳಿದರೇನೇ ತಾನೇ ಅವರು ಕೊಡುವುದು ಎಂದು ಹೇಳುತ್ತಾರೆ. ಆದ್ದರಿಂದ ಕೋರಬೇಕು ಎಂದುಕೊಳ್ಳುತ್ತಾ, ಕೇಳಬೇಕು ಎಂದುಕೊಳ್ಳುತ್ತಾ, ಕೇಳದೇ ತಾಯಿಯಾದರೂ ನೀಡುವುದಿಲ್ಲ ಅಲ್ಲವೇ ಎಂದು ಮಾತನಾಡುತ್ತಾ ಇರುತ್ತಾರೆ, ಅವುಗಳ ಹಿಂದೆಯೇ ಬೀಳುತ್ತಾರೆ.

ಆದರೆ ಭಗವಂತನ ಸೃಷ್ಟಿಯಲ್ಲಿ ಕೋರಿಕೊಳ್ಳಬೇಕಾದ ಕೆಲಸವಿಲ್ಲ, ಮಾಡಬೇಕಾದದ್ದನ್ನು ಮಾಡಿದರೆ ಖಚಿತವಾಗಿ ಹೊಂದಬೇಕಾದದ್ದನ್ನು ಹೊಂದುತ್ತೇವೆ. ಆದ್ದರಿಂದ ಕೋರಿಕೊಳ್ಳುವುದರ ಮೇಲಲ್ಲ, ಮಾಡುವುದರ ಮೇಲೆ ದೃಷ್ಟಿ ಇಡಬೇಕು ಎನ್ನುತ್ತಾರೆ ಪ್ರತ್ರಿಯವರು.

ಪತ್ರಿಯವರು ಏನು ಹೇಳುತ್ತಾರೆಂದರೆ? ಪ್ರಾರಂಭದ ಜನ್ಮಗಳಲ್ಲಿ "ಬಯಸಿದ್ದು ಬರುವುದಿಲ್ಲ, ಅರ್ಹತೆಯನ್ನು ಆಧರಿಸಿ ಬರುತ್ತದೆ"ಎನ್ನುತ್ತಾರೆ. ನೀನು ಹಣವನ್ನು ಬಯಸಿದೆ, ನಿನಗೆ ಬರುವುದಿಲ್ಲ. ಆದರೆ ನೀನು ಬಯಸದೇ ಹೋದರೂ ಹಿಂದಿನ ಜನ್ಮಗಳಲ್ಲಿ ನೀನು ದಾನಗಳನ್ನು ಮಾಡಿದ್ದರೇ ಹಣವನ್ನು ಹೊಂದುವ ಅರ್ಹತೆಯನ್ನು ಸಂಪಾದಿಸಿಕೊಂಡಿರುತ್ತೀಯ. ನೀನು ಮಾಡಿದ ದಾನಗಳನ್ನು ಆಧರಿಸಿ ಲಕ್ಷಾಧಿಕಾರಿಯಾಗಬೇಕೇ? ಕೋಟ್ಯಾಧಿಪತಿಯಾಗಬೇಕೇ? ಅಪರ ಕೋಟ್ಯಾಧೀಶ್ವರ ನಾಗಬೇಕೇ? ಎಂಬುದು ಆಟೋಮ್ಯಾಟಿಕ್ ಆಗಿ ನಡೆಯುತ್ತದೆ. ಆಗ ನೀನು ಶ್ರಮ ಪಡಬೇಕಾದ ಅವಶ್ಯಕತೆ ಇಲ್ಲ. ಆಟೋಮ್ಯಾಟಿಕ್ ಆಗಿ ಕೋಟಿಗಳು ಬಂದುಬಿಡುತ್ತವೆ.

ಮುಖೇಶ್ ಅಂಬಾನಿಗೆ ಮೊಮ್ಮಗ ಹುಟ್ಟಿದ ಎಂದುಕೊಳ್ಳಿ! ಹುಟ್ಟಿದ ತಕ್ಷಣವೇ ಅವನು ಅಪರ ಕೋ ಕೋಟ್ಯಾಧೀಶ್ವರನಾದಂತೆಯೇ ಅಲ್ಲವೇ? ಅವನು ಏನು ಕಷ್ಟಪಟ್ಟಿದ್ದಾನೆ? ಏನು ಇಲ್ಲ ಆದರೆ ಅರ್ಹತೆಯನ್ನು ಆಧರಿಸಿ ಆ ಕುಟುಂಬದಲ್ಲಿ ಜನ್ಮವನ್ನು ತೆಗೆದುಕೊಂಡನು.

ಅದೇ ರೀತಿ ಮಧ್ಯಂತರ ಜನ್ಮಗಳಲ್ಲಿಯೂ ಸಹ "ಬಯಸಿದ್ದು ಬರುವುದಿಲ್ಲ, ಬೇಕಾದದ್ದೇ ಬರುತ್ತದೆ" ಎನ್ನುತ್ತಾರೆ. ಇದು ನನ್ನ ಜೀವನದಲ್ಲಿಯೂ ಸಹ ನಡೆದಿದೆ. ನಾನು ಏನೇನೋ ಬಯಸುತ್ತಿದ್ದೇನು. ಆದರೆ ನನಗೆ ಬೇಕಾದದ್ದು ಅವಲ್ಲ ಅಲ್ಲವೇ? ನನಗೆ ಜ್ಞಾನ ಬೇಕು. ಆ ವಿಷಯ ನನಗೆ ತಿಳಿಯದು, ಆದರೆ ನಾನು ಹಣದ ಹಿಂದೆ ಹೋದೆನು.

ಆಗ ಎಲ್ಲದರಲ್ಲಿಯೂ ನನಗೆ ಪೆಟ್ಟುಗಳು ಬಿದ್ದವು, ಎಲ್ಲದರಲ್ಲಿಯೂ ನಷ್ಟವೇ! ಯಾವುದನ್ನು ಹಿಡಿದುಕೊಂಡರು ಅದು ಪೆಟ್ಟನ್ನು ನೀಡುತ್ತಿತ್ತು, ನನಗೇನೂ ಅರ್ಥವಾಗಲಿಲ್ಲ. ಅಂತಹ ಸಮಯದಲ್ಲಿ ಪತ್ರಿಯವರು ಪರಿಚಯವಾದರು. ಈ ಧ್ಯಾನ ಮಾರ್ಗ, ಜ್ಞಾನಮಾರ್ಗವನ್ನು ತಿಳಿದುಕೊಂಡೆನು. ಇದಕ್ಕೆ ಆಕರ್ಷಿತನಾಗಿ ಇದರೊಳಗೆ ಬಂದೆನು. ಅಂದರೆ ನನಗೆ ಬೇಕಾಗಿತ್ತು ಜ್ಞಾನವೇ ಆದ್ದರಿಂದ ಆ ಪ್ರಕೃತಿ ನನ್ನನ್ನು ಈ ಕಡೆ ನಡೆಸಿತು. ನಿನ್ನ ದಾರಿ ಅದಲ್ಲ, ನಿನ್ನ ದಾರಿ ಇದು ಎಂದು ಹೇಳಿ ಧ್ಯಾನದ ಕಡೆ ನಡೆಸಿತು. ನಿಮಗೂ ಸಹ ಅದೇರೀತಿ ನಡೆಯುತ್ತದೆ ನೋಡಿಕೊಳ್ಳಿ.

ಅದೇ ರೀತಿ ಕೊನೆಯ ಜನ್ಮಗಳಿಗೆ ಹೋಗುವ ವೇಳೆಗೆ ಪತ್ರಿಯವರಂತೆ ಯಾವುದಾದರೆ ಲೋಕ ಕಲ್ಯಾಣಕ್ಕೆ ಅಗತ್ಯವೋ ಅವೆಲ್ಲವೂ ನಿನಗೆ ಒದಗಿಸಲ್ಪಡುತ್ತವೆ"ಈಗ ಪತ್ರಿಯವರು ಈ ಸ್ಥಿತಿಯಲ್ಲಿ ಇದ್ದಾರೆ ಮತ್ತು ಈಗ ಜ್ಞಾನವನ್ನು ಎಲ್ಲರಿಗೂ ಒದಗಿಸಬೇಕು ಅಂದರೆ ದೊಡ್ಡ ದೊಡ್ಡ ಸೆಂಟರ್ ಗಳು ಬೇಕು. ಬೆಂಗಳೂರು, ಕಡ್ತಾಲ್, ಅದೇ ರೀತಿ ಪೇರವರಂ, ಪ್ರಕೃತಿವ್ಯಾಲಿ ಇವೆಲ್ಲಾ ನಿಧಾನವಾಗಿ ತಯಾರಾಗುತ್ತಿವೆ. ಅವರಿಗೆ ಯಾವುದು ಯಾವಾಗ ಅಗತ್ಯವೋ! ಅವುಗಳನ್ನೇ ಒದಗಿಸಲ್ಪಡುತ್ತಿವೆ.

ಆದ್ದರಿಂದ ಯಾವ ಸ್ಥಿತಿಯಲ್ಲಿಯೂ ಬಯಸಿದ್ದು ಬರುವುದಿಲ್ಲ ಎಂದು ತಿಳಿದುಕೊಳ್ಳಿ. ಆದ್ದರಿಂದ ಯಾರು ಶ್ರೇಷ್ಠರು ಎಂದರೆ? ಕೋರಿಕೆಗಳು ಇಲ್ಲದವನೇ ಶ್ರೇಷ್ಠನು. ಇದನ್ನು ಶ್ರೀಕೃಷ್ಣ ಹೇಳಿರುವುದು.

ಆದ್ದರಿಂದ ಇಂತಹ ಗುಣಗಳು ನಮ್ಮಲ್ಲಿರುವಾಗ ಕಡ್ಡಾಯವಾಗಿ ಜನಾಲೋಕವನ್ನು ದಾಟಿ ಮೇಲಿರುವಂತಹ ಉನ್ನತ ಲೋಕಗಳಿಗೆ ಅರ್ಹತೆಯನ್ನು ನಾವು ಸಂಪಾದಿಸುತ್ತೇವೆ.

## ಸತ್ಯ ಲೋಕವನ್ನು ಸೇರಬೇಕೆಂದರೆ?

ಏಕೆಂದರೆ ಇದು ಬಹಳ ಮುಖ್ಯವಾದದ್ದಷ್ಟೇ ಅಲ್ಲ ಬಹಳ ಅಗತ್ಯವೂ ಆಗಿದೆ. ಏಕೆಂದರೆ! ನೀವು ಜನಾಲೋಕದ ಮೇಲೆ ಇರುವ ಲೋಕಗಳನ್ನು ಸೇರಿಕೊಳ್ಳದೇ ಹೋದರೆ, 100 ಅಲ್ಲ 200, 300 ಜನ್ಮಗಳನ್ನೆತ್ತಿದರೂ ಪ್ರಯೋಜನವಿಲ್ಲ. ಯಾರಾದರೂ ಸರಿ ಕಡ್ಡಾಯವಾಗಿ ಆ ಲೋಕಗಳನ್ನು ಸೇರಬೇಕಾದದ್ದೇ.

ಈ ವಿಷಯವನ್ನೇ ಭಗವದ್ಗೀತೆಯಲ್ಲಿ ಹೇಳಲಾಗಿದೆ.

**ಶ್ಲೋ : ಅಬ್ರಹ್ಮ ಭುವನಾ ಲ್ಲೋಕಾ: ಪುನರಾವರ್ತಿನೋ ಽರ್ಜುನ।**

**ಮಾಮು ಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ (ಭ.ಗೀ.8–16)**

ತಾ:–ಓ ಅರ್ಜುನಾ! ಬ್ರಹ್ಮ ಲೋಕಗಳಂತಹ ಲೋಕಗಳನ್ನು ಸೇರಿದರೂ ಪುನಹ ಜನ್ಮ ತೆಗೆದುಕೊಳ್ಳಬೇಕಾದದ್ದೇ! ಆದರೆ ನಾನು ಇರುವಂತಹ ಲೋಕಕ್ಕೆ (ಸತ್ಯಲೋಕಕ್ಕೆ) ಸೇರಿದರೆ! ಮರಳಿ ಪುನರ್ಜನ್ಮ ಇರುವುದಿಲ್ಲ.

ಆದ್ದರಿಂದ ಜನಾಲೋಕದ ಕೆಳಗೆ ಇರುವುದಲ್ಲ, ಜನಾಲೋಕವನ್ನು ದಾಟಬೇಕು. ದಾಟಿದವನು ಅಲ್ಲಿಂದ ಅವನಷ್ಟಕ್ಕೆ ಅವನೇ ಮೇಲೆ ಹೊರಟುಹೋಗುತ್ತಾನೆ. ಜನಾಲೋಕದ ಕೆಳಗೆ ಇರುವವರು ಬಹಳ ಶ್ರಮ ಪಡಬೇಕು. ಜನಾಲೋಕವನ್ನು ದಾಟಿದರೆ ಅವರಷ್ಟಕ್ಕೆ ಅವರೇ ಯಾವುದನ್ನು ಮಾಡಬೇಕೋ ಅದನ್ನೇ ಮಾಡುತ್ತಾರೆ. ಅವರಿಗೆ ಅದು ದೊಡ್ಡ ಲೆಕ್ಕವೇನೂ ಅಲ್ಲ. ಏಕೆಂದರೆ? ಆತ್ಮಗಳಾದ ನಾವು ಈ ಸ್ಥೂಲಶರೀರದೊಂದಿಗೆ ಭೂಲೋಕದಲ್ಲಿ ಇರುತ್ತೇವೆ. ಎರಡನೇ ಶರೀರವಾದ ಪ್ರಾಣಮಯ ಶರೀರದೊಂದಿಗೆ ಸಹ ಭೂಲೋಕದಲ್ಲಿಯೇ ಇರುತ್ತೇವೆ. ಸೂಕ್ಷ್ಮ ಶರೀರದೊಂದಿಗೆ ಭೂಲೋಕದ ಮೇಲಿರುವ ಭುವರ್ಲೋಕವನ್ನಾಗಲೀ, ಸುವರ್ಲೋಕವನ್ನಾಗಲೀ ಸೇರಿಕೊಳ್ಳುತ್ತೇವೆ. ಆ ಲೋಕಗಳನ್ನು ಭೌತಿಕ ಶರೀರದೊಂದಿಗೆ ಸೇರಲಾರೆವು. ಅದೇ ರೀತಿ ಸೂಕ್ಷ್ಮ ಶರೀರ ಅಂದರೆ ಮನೋಮಯ ಶರೀರ ಕಳಚಿಕೊಂಡರೇ(ಬಿದ್ದು ಹೋದರೇ) ಕಾರಣ ಶರೀರದೊಂದಿಗೆ ಜನಾಲೋಕಕ್ಕೆ ಹೋಗಿ, ಅಲ್ಲಿ ಭವಿಷ್ಯತ್ತನ್ನು ನಿರ್ಧರಿಸಿಕೊಂಡು, ಅಂದರೆ ಪ್ಲಾನ್ ಮಾಡಿಕೊಂಡು ಜನ್ಮ ತೆಗೆದುಕೊಳ್ಳುತ್ತೇವೆ.

ನಂತರ ಇರುವಂತಹ ಮಹಾಕಾರಣ ಶರೀರವನ್ನು ಉನ್ನತವಾದ, ಶ್ರೇಷ್ಠವಾದ ಸೇವೆಗಳನ್ನು ಮಾಡುವ ಮಹಾತ್ಮರು ತೆಗೆದುಕೊಂಡು ಮಹಾ ಕಾರಣ ಲೋಕವನ್ನು ಸೇರಿಕೊಳ್ಳುತ್ತಾರೆ.

ಅದೇರೀತಿ ಭೂಮಿಯ ಮೇಲೆ ತಪಸ್ಸನ್ನು ಮಾಡುವವರು ಅಂದರೆ ಕೋರಿಕೆಗಳು, ಸಂಕಲ್ಪಗಳು ಇಲ್ಲದೇ ಧ್ಯಾನ ಮಾಡುವವರು ವಿಶ್ವಮಯ ಶರೀರದೊಂದಿಗೆ ತಪೋಲೋಕವನ್ನು ಸೇರುತ್ತಾರೆ.

ಅದೇ ರೀತಿ ಭೂಮಿಯ ಮೇಲೆ ಸತ್ಯವನ್ನು ಅನುಭವಕ್ಕೆ ತಂದುಕೊಂಡವರು ನಿರ್ವಾಣ ಮಯ ಶರೀರದೊಂದಿಗೆ ಸತ್ಯ ಲೋಕವನ್ನು ಸೇರುತ್ತಾರೆ. ಅಷ್ಟೇ ಹೊರತು ವಿಶ್ವಮಯ ಶರೀರದೊಂದಿಗೆ ಸತ್ಯ ಲೋಕವನ್ನು ಸೇರಲಾರೆವು, ಮಹಾ ಕಾರಣ ಶರೀರದೊಂದಿಗೆ ತಪೋಲೋಕವನ್ನು ಸೇರಲಾರೆವು, ಎಂದು ತಿಳಿಯಬೇಕು.

ಇದಕ್ಕಿಂತ ಮುಂಚೆ ನಿಸ್ವಾರ್ಥವಾಗಿ ಉನ್ನತವಾದ ಸೇವೆಗಳನ್ನು ಮಾಡಿದ್ದರೆ ಅಂದರೆ ಗಾಂಧೀಯವರಂತೆ, ಮದರ್ ಥೆರೇಸಾರಂತೆ ನಿಸ್ವಾರ್ಥವಾಗಿ ಸೇವೆಗಳನ್ನು ಮಾಡಿದ್ದರೆ ಮಹಾಲೋಕಕ್ಕೆ ಸೇರುತ್ತಾರೆ ಎಂದು ಹೇಳಿಕೊಂಡಿದ್ದೆವು. ಆದರೆ ಮಹಾ ಕಾರಣ ಲೋಕಕ್ಕೆ ಸೇರಿಕೊಂಡರೂ ಪುನಹ ಭೂಮಿ ಮೇಲೆ ಬರಬೇಕಾದದ್ದೇ! ಬಂದು ಅಪಾರವಾದ ಧ್ಯಾನ ಸಾಧನೆ ಮಾಡಿ, ಸಮಸ್ತ ಜೀವ ರಾಶಿಯೂ ನಾನೇ, ಅವು ಬೇರೆ, ನಾನು ಬೇರೆಯಲ್ಲ ಎಂಬ ಸ್ಥಿತಿಗೆ ಬಂದಾಗ ತಪೋಲೋಕಕ್ಕೆ ಸೇರಿಕೊಳ್ಳಬಲ್ಲರು.

ಅಲ್ಲಿಂದ ಭೂಮಿ ಮೇಲೆ ಬಂದು ಆ ಧ್ಯಾನ ಸಾಧನೆಯನ್ನು ಇನ್ನೂ, ಇನ್ನೂ ಅಪಾರವಾಗಿ ಮಾಡಿದರೆ, ಸತ್ಯವನ್ನು ಅನುಭವಕ್ಕೆ ತಂದುಕೊಳ್ಳುತ್ತಾರೆ. ಸತ್ಯವನ್ನು ಅನುಭವಕ್ಕೆ ತಂದುಕೊಳ್ಳುವುದು ಎಂದರೆ ನೆನಪಿಟ್ಟುಕೊಳ್ಳಿ, ಭೂಮಿಯ ಮೇಲೆ ನಾನು ಆತ್ಮ ಎಂಬಂತೆ ಜೀವಿಸುವುದು, ಆತ್ಮಕ್ಕೆ ಸಂಪೂರ್ಣ ಪ್ರಾಮುಖ್ಯತೆಯನ್ನು ನೀಡುವುದು. ಒಬ್ಬ ರಮಣ ಮಹರ್ಷಿಯಂತೆ, ಒಬ್ಬ ವಿವೇಕಾನಂದರಂತೆ.

ಅಂತಹವರು ಅಗತ್ಯಗಳಿಗೆ ಪರಿಮಿತವಾಗಿ, ಯಾವಾಗಲೂ ನಾನು ಆತ್ಮ ಎಂಬಂತೆ ಜೀವಿಸುತ್ತಾರೆ. ಅವರು ಮಾಡುವ ಕೆಲಸಗಳು, ಅವರ ಮಾತುಗಳು, ಅವರ ಕೆಲಸಗಳು, ಅವರ ಕಾರ್ಯಕ್ರಮಗಳೆಲ್ಲವೂ ಆತ್ಮಕ್ಕೆ ಸಂಬಂಧಿಸಿದಂತಹವೇ ಆಗಿರುತ್ತವೆ.

ಉದಾಹರಣೆಗೆ ನಿಮಗೆ ಒಂದು ಮದುವೆಯ ಆಹ್ವಾನ ಬಂದಿದೆ ಎಂದುಕೊಳ್ಳೋಣ, ಅದೇ ಸಮಯದಲ್ಲಿ ಭೀಮವರಂ ನಲ್ಲಿ ಮೂರು ದಿನಗಳ ಕ್ಲಾಸ್ ಬಂದಿದೆ. ಸಹಜವಾಗಿ

ಏನು ಮಾಡುತ್ತಾರೆಂದರೆ ಮೂರು ದಿನಗಳ ಕ್ಲಾಸ್ ಅನ್ನು ಪ್ರತಿ ತಿಂಗಳು ಇಡುತ್ತಿದ್ದಾರೆ, ಈ ಮದುವೆ ಯಾವಾಗಲೂ ಬರುವುದಿಲ್ಲ ಅಲ್ಲವೇ? ಎಂದು ನೀವು ಮದುವೆಗೆ ಹೋಗುತ್ತೀರಾ ಎಂದುಕೊಳ್ಳಿ! ನೀವು ದೇಹಕ್ಕೆ ಪ್ರಾಮುಖ್ಯತೆ ನೀಡಿದಂತೆ. ಒಂದು ವೇಳೆ ನೀವು ಮೂರು ದಿನಗಳ ಕ್ಲಾಸ್ ಗೆ ಪ್ರಾಮುಖ್ಯತೆಯನ್ನು ನೀಡಿದರೆ ನೀವು ಆತ್ಮಕ್ಕೆ ಪ್ರಾಮುಖ್ಯತೆಯನ್ನು ನೀಡಿದಂತೆ.

ಆದ್ದರಿಂದ ನಾನು ಆತ್ಮ ಎಂಬ ಸ್ಥಿತಿಯಲ್ಲಿ ಇದ್ದರೇ! ನೀವು ಯಾವಾಗಲೂ ಆತ್ಮಕ್ಕೆ ಪ್ರಾಮುಖ್ಯತೆಯನ್ನು ನೀಡುವಿರಿ; ಆದರೆ ದೇಹಕ್ಕೆ ಪ್ರಾಮುಖ್ಯತೆಯನ್ನು ನೀಡುವುದಿಲ್ಲ. ನಾವು ಎಲ್ಲರಿಗೂ ಹೇಳುತ್ತಿದ್ದೇವೆ, ದೇಹಕ್ಕೆ ಶೇಕಡ 50ರಷ್ಟು, ಆತ್ಮಕ್ಕೆ ಶೇಕಡ 50ರಷ್ಟು, ಪ್ರಾಮುಖ್ಯತೆ ನೀಡಿ ಎಂದು. ಹಾಗೆ ಜೀವಿಸುತ್ತಾ ನಿಧಾನವಾಗಿ ಈ ಪರ್ಸೆಂಟೇಜ್ ಅನ್ನು ಹೆಚ್ಚಿಸಿಕೊಳ್ಳಬೇಕು. ಶೇಕಡ 60ರಷ್ಟು ಆತ್ಮಕ್ಕೆ, ಶೇಕಡಾ 40 ರಷ್ಟು ದೇಹಕ್ಕೆ ಹೆಚ್ಚಬೇಕು. ಹಾಗೆ ಶೇಕಡ 70ರಷ್ಟು ಆತ್ಮ, ಶೇಕಡ 30ರಷ್ಟು ದೇಹ, ಇನ್ನು ಕೆಲವು ವರ್ಷಗಳಿಗೆ ಶೇಕಡಾ 80ರಷ್ಟು : ಶೇಕಡ 20ರಷ್ಟು ಹಾಗೆ ಶೇಕಡ 90ರಷ್ಟು ಆತ್ಮ: ಶೇಕಡ ಹತ್ತರಷ್ಟು ದೇಹ ಎಂಬಂತೆ ಬದಲಾಗಿ, ಕೊನೆಗೆ ಪೂರ್ತಿಯಾಗಿ ನಾನು ಆತ್ಮ ಎಂಬಂತೆ ಜೀವಿಸಬೇಕು. ಹಾಗೆ ನಿಧಾನವಾಗಿ ನಾನು ಆತ್ಮ ಎಂಬುದು ಅನುಭವಕ್ಕೆ ಬರುತ್ತದೆ.

ಅದಕ್ಕಿಂತ ಮುಂಚೆ ಆತ್ಮ ಎಂಬುದು ಅನುಭವಕ್ಕೆ ಬರಲಿಲ್ಲ. ಎಷ್ಟು ಸಾಧನೆ ಮಾಡಿದರೂ, ತೀವ್ರಾತಿ ತೀವ್ರವಾಗಿ ಸಾಧನೆ ಮಾಡಿದರೂ, ನೀವು ಬಹಳಷ್ಟು ಸಿದ್ದಿಗಳನ್ನು ಹೊಂದಿದರೂ, ಹಲವು ವಿಧದ ಮಹಿಮೆಗಳು, ಶಕ್ತಿಗಳು ಬಂದರೂ, ಅವುಗಳನ್ನು ಪ್ರದರ್ಶಿಸುತ್ತಿದ್ದರೂ, ನಿಮಗೆ ಸತ್ಯ ಅನುಭವಕ್ಕೆ ಬಾರದಂತೆಯೇ! ನೀವು ಸತ್ಯ ಲೋಕಕ್ಕೆ ಸೇರುವುದಿಲ್ಲ.

ಅಂತಹವರು ಮಧ್ಯಾಹ್ನ ಸಾಧನೆಯನ್ನು ತೀವ್ರವಾಗಿ ಮುಂದುವರಿಸುತ್ತಿದ್ದರೆ, ನಿಧಾನವಾಗಿ ಈ ಸತ್ಯವನ್ನು ಅಂದರೆ, ಆತ್ಮವನ್ನು ಅನುಭವಕ್ಕೆ ತಂದುಕೊಂಡರೆ ಸತ್ಯಲೋಕವನ್ನು ಸೇರುತ್ತಾರೆ.

ನೀವು ಹೀಗೆ ಸಾಧನೆ ಮಾಡುತ್ತಾ, ಮಾಡುತ್ತಾ ನಿಮಗೆ ತಿಳಿಯುವುದೇನೆಂದರೆ? ವಾಸ್ತವವಾಗಿ ನಾನು ಎಲ್ಲಿದ್ದೇನೆ? ಇಲ್ಲಿಯವರೆಗೂ ಸುಮ್ಮನೆ ನಾನು, ನಾನು ಎಂದುಕೊಳ್ಳುತ್ತಿದ್ದೇನೇ ಹೊರತು ವಾಸ್ತವವಾಗಿ ನಾನು ಎಂದುಕೊಳ್ಳಲು ನಾನೆಲ್ಲಿದ್ದೇನೆ, ಇರುವುದೆಲ್ಲವೂ ಪರಮಾತ್ಮವೇ! ಆ ಪರಬ್ರಹ್ಮವೇ! ಆ ಆತ್ಮವೇ! ಅದೇ ನಾನು ಎಂಬುದು

ತಿಳಿಯುತ್ತದೆ. ಅಷ್ಟೇಅಲ್ಲ ಇನ್ನೊಂದಿಲ್ಲ ಎಂಬುದು ಅನುಭವಕ್ಕೆ ಬರುತ್ತದೆ. ಆದ್ದರಿಂದ ನಾನು ಆತ್ಮ ಎಂಬಂತೆಯೇ ಜೀವಿಸುತ್ತಾರೆ.

ಸಹಜವಾಗಿ ಆ ಪೂರ್ಣಾತ್ಮದಿಂದ ಬಂದ ಆತ್ಮ, ಶರೀರದೊಳಗೆ ಪ್ರವೇಶಿಸಿದ ತಕ್ಷಣವೇ ವಾಸ್ತವವಾದ ನಾನುಹೋಗಿ, ಹೊಸ ನಾನು ಬರುತ್ತದೆ. ಆ ಹೊಸ ನಾನು ಪ್ರಪಂಚದೊಳಗಿನವೆಲ್ಲಾ ನನ್ನವು, ಇವರೆಲ್ಲಾ ನನ್ನವರು ಎಂಬಂತೆ ಪ್ರವರ್ತಿಸುತ್ತದೆ. ಆದರೆ ಸತ್ತು ಹೋದಾಗ ನಾನು ನನ್ನವು ಎಂದುಕೊಂಡಂತಹ ವುಗಳನ್ನೆಲ್ಲಾ ಬಿಟ್ಟುಬಿಡುತ್ತಿದ್ದಾರೆ. ಪುನಃ ಹೊಸ ಜನ್ಮದಲ್ಲಿ ಹೊಸ ನಾನು ಅನ್ನು ತೆಗೆದುಕೊಳ್ಳುತ್ತಿದ್ದಾರೆ.

ಆದರೆ ಈ ಸತ್ಯವನ್ನು ಯಾವಾಗ ಅರಿವಿಗೆ ತಂದುಕೊಳ್ಳುತ್ತಾರೋ! ಕೊನೆಗೆ ಅರ್ಥವಾಗುತ್ತದೆ. ವಾಸ್ತವವಾಗಿ ಇಲ್ಲಿ ಏನೂ ಇಲ್ಲ, ಇರುವುದು ಒಂದೇ! ಅದೇ ಆತ್ಮ ಅದೇ ಬ್ರಹ್ಮ. ಉಳಿದವುಗಳೆಲ್ಲ ಇರುವಂತೆ ಇರುತ್ತವೆ, ಆದರೆ ಯಾವುವೂ ಇರುವುದಿಲ್ಲ ಎಂದು ಅರ್ಥವಾಗುತ್ತದೆ. ಇಲ್ಲದವುಗಳನ್ನು ಇವೆ ಎಂದುಕೊಂಡರೆ ನಮ್ಮ ಮೂರ್ಖತನ, ಅಜ್ಞಾನ. ಅಂತಹವರು ಕೆಳಗಿನ ಲೋಕಗಳಲ್ಲಿಯೇ ಇರುತ್ತಾರೆ.

ಆದ್ದರಿಂದ ಅಂತಹವರು ವಿಚಾರಣೆ ಮಾಡುತ್ತಾ, ಮಾಡುತ್ತಾ ಇದ್ದರೆ ನಿಧಾನವಾಗಿ ಪತ್ರಿಜಿಯವರು ಹೇಳಿದಂತೆ ಸಾಧನೆ ಮಾಡುತ್ತಿದ್ದರೆ! ಮನಸ್ಸಿನ ಪ್ರಾಮುಖ್ಯತೆ ಕಡಿಮೆಯಾಗುತ್ತದೆ. ವಾಸ್ತವವಾಗಿ ಮನಸ್ಸು ಇರುವುದರಿಂದಲೇ ನಾನು, ನಾನು ಎನ್ನುತ್ತಿದ್ದೇವೆ. ಆದ್ದರಿಂದ ಸಾಧನೆ ಮಾಡುತ್ತಾ, ಮಾಡುತ್ತಾ ನಾನು ಎಂಬ ಭಾವನೆ ಕಡಿಮೆಯಾಗುತ್ತದೆ. ಹಾಗೆ ಮನಸ್ಸಿನ ಪ್ರಾಮುಖ್ಯತೆ ಕಡಿಮೆಯಾಗುತ್ತಾ ಕೊನೆಗೆ ಮನಸ್ಸು ಶೂನ್ಯವಾಗುತ್ತದೆ.

ಹಾಗೆ ಮನಸ್ಸು ಶೂನ್ಯವಾದರೆ ಇನ್ನು ನಾನು ಎಂಬುದು ಎಲ್ಲಿರುತ್ತದೆ? ಆಗ ಅಲ್ಲಿಯವರೆಗೂ ಇದ್ದ ನಾನು ಹೋಗಿ, ವಾಸ್ತವವಾದ ನಾನು ಅನುಭವಕ್ಕೆ ಬರುತ್ತದೆ. ಅಂದರೆ ನಾನು ಶರೀರ ಎಂಬುದು ಹೊರಟು ಹೋಗುತ್ತದೆ. ಯಾವಾಗ ಶರೀರ ಹೋಯಿತೋ! ಇರುವ ನಾನೇ ವಾಸ್ತವವಾದ ನಾನು ಎಂಬುದು ಅನುಭವಕ್ಕೆ ಬರುತ್ತದೆ.

ಹಾಗೆ ಆ ಸ್ಥಿತಿಗೆ ನಾವು ಸೇರಿದಾಗ ನಾವು ಆ ಸತ್ಯ ಲೋಕಕ್ಕೆ ಸೇರುತ್ತೇವೆ. ಪರಮಾತ್ಮರಾಗಿ ರಾರಾಜಿಸುತ್ತೇವೆ, ಕೋ ಕ್ರಿಯೆಟರ್ ಆಗುತ್ತೇವೆ. ಆದ್ದರಿಂದ ಧ್ಯಾನ ಸಾಧನೆಯ ಮೂಲಕ ಅಂತಹ ಸ್ಥಿತಿಗೆ ಸೇರಬೇಕು. ಅಂದರೆ ಜನ ಲೋಕವನ್ನು ದಾಟಿದ ಹೊರತು ಈ ಸ್ಥಿತಿಗಳು ಬರುವುದಿಲ್ಲ. ಹಾಗಾದರೆ ಜನಾ ಲೋಕವನ್ನು ದಾಟಿ

ಹೋಗಬೇಕೆಂಬ ಆಕಾಂಕ್ಷೆ ಬೆಳೆಯಬೇಕೆಂದರೆ? ಮೊದಲಿಗೆ ಜನಾಲೋಕವನ್ನು ದಾಟಿದರೆ ಬರುವ ಲಾಭಗಳ ಬಗ್ಗೆ ತಿಳಿದುಕೊಳ್ಳಬೇಕು. ಆಗಲೇ ಯಾರಿಗಾದರೂ ಆಸಕ್ತಿ ಇರುತ್ತದೆ. ಅದೇರೀತಿ ಜನಾ ಲೋಕವನ್ನು ದಾಟಿ ಅದರ ಮೇಲಿರುವ ಮೂರು ಉರ್ದ್ವಲೋಕಗಳನ್ನು ಸೇರಬೇಕೆಂದರೆ ನಾವು ಎಂತಹ ಅರ್ಹತೆಗಳನ್ನು ಸಂಪಾದಿಸಬೇಕು ಎಂಬುದನ್ನು ಸಹ ತಿಳಿದುಕೊಳ್ಳಬೇಕು.

ಲಾಭಗಳ ಬಗ್ಗೆ ತಿಳಿದುಕೊಂಡರೆ ಮಾತ್ರ ಛಲದಿಂದ ಸಾಧಿಸುವ ಪ್ರಯತ್ನ ಮಾಡುತ್ತೇವೆ, ಸಾಧಿಸುತ್ತೇವೆ. ಅದೇರೀತಿ ಅರ್ಹತೆ ಹೇಗೆ ಬರುತ್ತದೆ ಎಂಬುದನ್ನು ಸಹ ತಿಳಿದುಕೊಳ್ಳಬೇಕಾದ ಅಗತ್ಯವಿದೆ.

ಈಗ ನಾವು ಅದನ್ನೇ ತಿಳಿದುಕೊಳ್ಳುತ್ತಿದ್ದೇವೆ. ಶ್ರೀ ಕೃಷ್ಣ ಭಗವಾನ್, ಪತ್ರೀಜಿ ಹೇಳಿರುವ ಬಹಳಷ್ಟು ವಿಷಯಗಳನ್ನು ಸಹ ನಾವು ತಿಳಿದುಕೊಂಡಿದ್ದೇವೆ. ಅವುಗಳನ್ನು ಚೆನ್ನಾಗಿ ಅಧ್ಯಯನ ಮಾಡಿ. ಆ ಲಕ್ಷಣಗಳು ನಿಮ್ಮಲ್ಲಿ ಇವೆಯೋ, ಇಲ್ಲವೋ ನೋಡಿಕೊಳ್ಳಿ. ಆ ಲಕ್ಷಣಗಳು ಬರುತ್ತಿದ್ದರೆ ನೀವು ಜನಾ ಲೋಕವನ್ನು ದಾಟಿ ಮೇಲಿನ ಲೋಕಗಳಿಗೆ ಸೇರಿಕೊಳ್ಳುವ ಅರ್ಹತೆಯನ್ನು ಸಂಪಾದಿಸಿದಂತೆಯೇ ಲೆಕ್ಕ.

ಪತ್ರಿಯವರು ಏನು ಹೇಳುತ್ತಾರೆಂದರೆ? "ಅಲ್ಪಸ್ವಲ್ಪ (ಎಳ್ಳಷ್ಟು) ದುಃಖ ನಿನ್ನಲ್ಲಿ ಇದ್ದರೂ ನೀನಿನ್ನೂ ಅಜ್ಞಾನದಲ್ಲಿ ಇರುವಂತೆಯೇ"ಎನ್ನುತ್ತಾರೆ. ಅಂದರೆ ಅಲ್ಪಸ್ವಲ್ಪ ನೋವು ಉಂಟಾದರೂ, ಅಂದರೆ ನನ್ನ ಜೀವನ ಹೀಗೆ ಆಯಿತಲ್ಲ, ಯಾಕೆ ನನಗೆ ಈ ಕಷ್ಟ ಬಂದಿದೆ ಎಂದು ದುಃಖಿಸಬಾರದು. ಅಂದರೆ ಕರೋನಾ ಬಂದಿದೆ, ದುಃಖಿಸಬಾರದು. ಕರೋನ ನನ್ನನ್ನು ಏನು ಮಾಡಬಲ್ಲದು? ಎಂದು ತಿಳಿದುಕೊಳ್ಳಬೇಕು.

ನಾವು ಆತ್ಮಗಳು. ಆತ್ಮವನ್ನು ಕರೋನ ಏನಾದರೂ ಮಾಡಬಲ್ಲದೇ? ಏನೂ ಮಾಡಲಾರದು.

ಗೀತೆಯಲ್ಲಿ ಓದಿದ್ದೇವೆ ಅಲ್ಲವೇ?

**ಶ್ಲೋ : ನೈನಂ ಚಿಂದಂತಿ ಶಸ್ತ್ರಾಣಿ ನೈನಂ ದಮತಿ ಪಾವಕಹ।**

**ನಾ ಚೈನಂ ಕ್ಲೇದಯಂತ್ಯಾಪೋ ನಾ ಶೋಷಯತಿ ಮಾರುತಹ॥ ( ಭ.ಗೀ.2–23)**

ತಾ:–ಆತ್ಮವನ್ನು ಅಗ್ನಿ ದಹಿಸಲಾರದು, ಶಸ್ತ್ರ ಛೇದಿಸಲಾರದು, ನೀರು ನೆನೆಸಲಾರದು, ವಾಯು ಆರಿಸಲಾರದು. ಆದ್ದರಿಂದ ಆತ್ಮ ಶಾಶ್ವತ. ಹಾಗಾದರೆ ಅಂತಹ ಆತ್ಮವನ್ನು ಯಾರು ಏನು ಮಾಡುತ್ತಾರೆ. ಕರೋನಾ ಮಾತ್ರ ಏನು ಮಾಡುತ್ತದೆ?

ನೆನಪಿನಲ್ಲಿಡಿ ನಾನು ಆತ್ಮ, ಆದ್ದರಿಂದ ಕರೋನ ನನ್ನನ್ನು ಏನೂ ಮಾಡಲಾರದು, ನನಗೇನು ನಷ್ಟವಿಲ್ಲ ಎಂಬ ಜ್ಞಾನ ಇರುವವರಿಗೆ ತಿಳಿಯುತ್ತದೆ. ಆದ್ದರಿಂದ ಈ ಅರಿವು ಇರುವವರು, ಏನು ಬಂದರೂ ಸಹ ದುಃಖಿಸುವುದಿಲ್ಲ.

ಆದ್ದರಿಂದ ಯಾವ ದಿನ ಯಾರು ಸಾಯುತ್ತಾರೋ ಯಾರಿಗೂ ತಿಳಿಯದು. ಇನ್ನು ಸ್ವಲ್ಪ ಹೊತ್ತಿನಲ್ಲಿ ಹೊರಟು ಹೋಗಬಹುದು. ಆದ್ದರಿಂದ ಇಷ್ಟರೊಳಗೆ ಮಾಡಬೇಕಾದದ್ದನ್ನು ನಾವು ಮಾಡಿದರೆ ಶರೀರವನ್ನು ಬಿಟ್ಟರೂ ನಮಗೆ ನಷ್ಟ ಇರುವುದಿಲ್ಲ. ಏಕೆಂದರೆ ಸತ್ತು ಹೋದರೆ ನಮಗೆ ಲಾಭ ಉಂಟಾಗುವಾಗ ಸಾಯಲು ಯಾರು ಭಯಪಡುತ್ತಾರೆ? ಸತ್ತು ಹೋದರೇ ನಷ್ಟ ಎಂದುಕೊಳ್ಳುವವರೇ ಭಯಪಡುತ್ತಾರೆ.

ಸಾವಿಗೆ ಭಯಪಡುವವರನ್ನು ನೋಡಿದರೇ, ಅವರು ಆತ್ಮಕ್ಕೋಸ್ಕರ ಆತ್ಮ ಲಾಭಕ್ಕೋಸ್ಕರ ಏನೂ ಮಾಡಲಾರರು ಎಂದು ತಿಳಿದುಕೊಳ್ಳಬೇಕು. ಅಂದರೆ ಅವರು ಧ್ಯಾನ ಮಾಡುವುದಿಲ್ಲ, ಜ್ಞಾನದಿಂದ ತುಂಬಿದ ಪುಸ್ತಕಗಳನ್ನು ಓದುವುದಿಲ್ಲ, ಜ್ಞಾನಿಗಳ ಸಾಂಗತ್ಯ ಮಾಡುವುದಿಲ್ಲ, ಆತ್ಮದ ಸೇವೆಗಳನ್ನು ಮಾಡುವುದಿಲ್ಲ, ಅಲ್ಪಸ್ವಲ್ಪ ಆತ್ಮಜ್ಞಾನವನ್ನು ಸಹ ಸಂಪಾದಿಸುವುದಿಲ್ಲ. ಯಾವಾಗಲೂ ಹಣ, ಪದವಿಗಳು, ಪ್ರತಿಷ್ಠೆ,ಹೆಸರು, ಪ್ರಖ್ಯಾತಿಗಳು ಇಂತಹವುಗಳ ಬಗ್ಗೆಯೇ ಇಡೀ ಜೀವನವನ್ನು ಕಳೆದುಬಿಡುತ್ತಾರೆ. ಆತ್ಮದ ಬಗ್ಗೆ ಏನೂ ಮಾಡುವುದಿಲ್ಲ, ಸಂಪಾದಿಸುವುದಿಲ್ಲ.

ಅಂತಹವರು ಮರಣಿಸಿದರೆ ಸಂಪಾದಿಸಿದ ಹಣವೆಲ್ಲಾ ಹೋಗುತ್ತದೆ, ಪದವಿಗಳು ಹೋಗುತ್ತವೆ, ಪ್ರತಿಷ್ಠೆ ಹೋಗುತ್ತದೆ ಎಂದು ಭಯಪಡುತ್ತಾರೆ. ಅಷ್ಟೇಅಲ್ಲ ಅವರಿಗೆ ಹೆಂಡತಿ, ಮಕ್ಕಳ ಮೇಲೆ ಬಹಳಷ್ಟು ಮಮಕಾರ ಇರುತ್ತದೆ. ಆದ್ದರಿಂದ ಅವರೆಲ್ಲಾ ದೂರವಾಗುತ್ತಾರೆಂದು ಭಯಪಡುತ್ತಾರೆ. ಇದೆಲ್ಲಾ ಏಕೆ ಸಂಭವಿಸುತ್ತದೆಯೆಂದರೆ? ಜ್ಞಾನ ಇಲ್ಲದೇ ಇರುವುದರಿಂದಲೇ!

ಆದರೆ ಆತ್ಮಜ್ಞಾನವನ್ನು ಸಂಪಾದಿಸಿಕೊಂಡರೆ! ಎಲ್ಲಾ ಒಂದೇ, ಎಲ್ಲವೂ ನಾನೇ ಎಂದು ತಿಳಿದುಕೊಳ್ಳುತ್ತಾರೆ. ಅಂತಹ ಜ್ಞಾನವನ್ನು ಸಂಪಾದಿಸಿಕೊಂಡು, ಸತ್ತು ಹೋದರೇ! ಈಗ ಇರುವ ಸ್ಥಿತಿಗಿಂತಲೂ ಉನ್ನತವಾದ ಸ್ಥಿತಿಯನ್ನು ಹೊಂದುತ್ತೇವೆಂದು, ಇನ್ನೂ ಉನ್ನತವಾದ ಜನ್ಮವನ್ನು ಹೊಂದುತ್ತೇವೆಂದು ತಿಳಿದುಕೊಳ್ಳುತ್ತಾರೆ. ಹೀಗಿರುವಾಗ ಸಾವಿಗೆ ಭಯಪಡುವುದು ಏನಿದೆ? ಸಂತೋಷವಾಗಿ ನಿಷ್ಕ್ರಮಿಸುತ್ತಾರೆ. (ಹೊರಟು ಹೋಗುತ್ತಾರೆ).

ಆದ್ದರಿಂದ ಅರ್ಥ ಮಾಡಿಕೊಳ್ಳಿ! ಸಾವು ಎಂದರೆ? ಹಳೆಯ (ಬಟ್ಟೆ) ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸುವಂತಹದ್ದೇ. ಅಂದರೆ ಆತ್ಮವಾದ ನಾವು ಹಳೆಯ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸುವುದು ಎಂದರ್ಥ. ಭಗವದ್ಗೀತೆಯಲ್ಲಿಯೂ ಸಹ ಇದೇ ವಿಷಯವನ್ನು ಹೇಳಲಾಗಿದೆ.

**ಶ್ಲೋ : ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣೋತಿ ನರೋಽಪರಾಣಿ।**

**ತಥಾ ಶರೀರಾಣಿ ವಿಹಾಯ ಜೀರ್ಣಾ ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ (ಭ.ಗೀ.2–22)**

ತಾ:–ಹರಿದು ಹೋದ ಹಳೆಯ ಬಟ್ಟೆಗಳನ್ನು ತ್ಯಜಿಸಿ, ಹೊಸ ವಸ್ತ್ರವನ್ನು ಹೇಗೆ ಧರಿಸುತ್ತೇವೆಯೋ! ಅದೇರೀತಿ ಆತ್ಮವಾದ ನಾವು ಇರುವ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸುತ್ತೇವೆ.

ಅಶರೀರದಿಂದ ಮಾಡಬೇಕಾದದ್ದನ್ನು ಮಾಡಿರುವೆ. ಇನ್ನು ಅದರಿಂದ ಮಾಡಬೇಕಾದ ಕೆಲಸವೇನೂ ಇಲ್ಲ. ನಂತರ ಮಾಡಬೇಕಾಗಿರುವುದಕ್ಕೆ ಹೊಸ ಶರೀರ ಬೇಕು. ಆದ್ದರಿಂದ ಇರುವ ಹಳೆಯ ಶರೀರವನ್ನು ಬಿಟ್ಟುಬಿಡುತ್ತೇವೆ, ಹೊಸ ಶರೀರವನ್ನು ತೆಗೆದುಕೊಳ್ಳುತ್ತೇವೆ. ಇದನ್ನೇ ಪತ್ರೀಜಿ ತಿಳಿದುಕೊಳ್ಳಲು ಹೇಳುತ್ತಾರೆ.

ಆದರೆ ಇಲ್ಲಿ ಮಾಡಬೇಕಾದದ್ದು ಏನೆಂದರೆ? ಈ ಶರೀರದಿಂದ ನಾವು ಮಾಡಬೇಕಾದದ್ದನ್ನು ಮಾಡಬೇಕು, ಸಾಧಿಸಬೇಕಾದದ್ದನ್ನು ಸಾಧಿಸಬೇಕು, ಸಂಪಾದಿಸಬೇಕಾದ ಜ್ಞಾನವನ್ನು ಸಂಪಾದಿಸಬೇಕು. ಅದಕ್ಕೆ ಬೆಲೆಯುಳ್ಳ ಧ್ಯಾನವನ್ನು ಎಷ್ಟು ಮಾಡಬಲು ಸಾಧ್ಯವೋ ಅಷ್ಟನ್ನೂ ಮಾಡಬೇಕು. ಸಮಯ ದೊರೆತರೆ ಪುಸ್ತಕಗಳನ್ನು ಓದಬೇಕು. ಇಂತಹ ಕ್ಲಾಸ್ ಗಳನ್ನು ಕೇಳುತ್ತಿರಬೇಕು. ನಮಗೀಗ ಅದೃಷ್ಟವಶಾತ್ ಯೂಟ್ಯೂಬ್ ನಲ್ಲಿ, ನಮ್ಮ ಪಿ. ಎಂ. ಸಿ. ಯಲ್ಲಿ ಪತ್ರೀಜಿಯವರ ಸಂದೇಶಗಳು ಬಹಳಷ್ಟು ಬರುತ್ತಿವೆ, ಅವುಗಳನ್ನೆಲ್ಲಾ ಕೇಳಿಸಿಕೊಳ್ಳುತ್ತಿರಬೇಕು. ಆಗ ಒಂದೊಂದೇ ವಿಷಯ ತಿಳಿಯುತ್ತದೆ. ಆಗ ನಿನಗೆ ಶೋಕ (ದುಃಖ)ಎಲ್ಲಿರುತ್ತದೆ?

ರಾಮನಿಗೆ ದೂರವಾದರೂ... ಸೀತಾದೇವಿ ಶೋಕಿಸಲಿಲ್ಲ (ದುಃಖ ಪಡಲಿಲ್ಲ). ಧ್ಯಾನ ಮಾಡಿದರು, ಧ್ಯಾನ ಸ್ಥಿತಿಯಲ್ಲಿ ಇದ್ದುಬಿಟ್ಟರು. ಆಕೆ ಮಹಾಜ್ಞಾನಿ. ಅದಕ್ಕೆ ಆಕೆಗೆ ತಿಳಿದಿದೆ ರಾಮ ಬರುತ್ತಾನೆ, ರಾವಣಾಸುರನನ್ನು ಸಂಹರಿಸುತ್ತಾನೆಂದು. ರಾವಣಾ ಸುರನೇ ಬುದ್ಧಿ

ಇಲ್ಲದ ಕೆಲಸ ಮಾಡಿ ತಾನು ಸರ್ವನಾಶವಾಗುವುದಷ್ಟೇ ಅಲ್ಲದೇ, ಆತನ ಜಾತಿಯನ್ನೇ ಸರ್ವನಾಶ ಮಾಡಿಕೊಂಡನು.

ವಶಿಷ್ಠರು ಏನೆಂದು ಹೇಳುತ್ತಾರೆಂದರೆ! ಆತ್ಮಜ್ಞಾನಿಯು ಹಣವನ್ನು ನೋಡಿ ಬೀಗುವುದಿಲ್ಲ, ಅಹಂಕಾರ ಪಡುವುದಿಲ್ಲ ವೆಂದು. ಅಷ್ಟೇಅಲ್ಲ ಇವುಗಳನ್ನೆಲ್ಲಾ ನೋಡಿ ಉಬ್ಬಿ ತಬ್ಬಿಬ್ಬಾಗುವವರನ್ನು ನೋಡಿ ಆತ್ಮಜ್ಞಾನಿಯು ಅನುಕಂಪ ತೋರಿಸುತ್ತಾರೆಂದು ಹೇಳುತ್ತಾರೆ.

ಕಾರಣ ಅಜ್ಞಾನಿಯೂ ಇವೆಲ್ಲವೂ ಶಾಶ್ವತ ಎಂದುಕೊಳ್ಳುತ್ತಾನೆ. ಆದರೆ ಯಾವಾಗಲೋ ಒಮ್ಮೆ ಇವೆಲ್ಲವೂ ದೂರವಾಗುವಂತಹವೇ ಎಂಬ ವಿಷಯವನ್ನು ಅವನು ತಿಳಿದುಕೊಳ್ಳುವುದಿಲ್ಲ. ಆದ್ದರಿಂದ ಜ್ಞಾನಿ ಅವನ ಮೇಲೆ ಅನುಕಂಪ ತೋರಿಸುತ್ತಾನೆ ಎಂದು ವಶಿಷ್ಠರು ಹೇಳಿದ್ದಾರೆ. ಅದಕ್ಕೇ ಸೀತಾದೇವಿಯೂ ಸಹ ರಾವಣಾಸುರನ ಮೇಲೆ ಅನುಕಂಪ ತೋರಿಸಿದರು.

ನಾವಾದರೂ ಅಷ್ಟೇ. ಯಾರಾದರೂ ಸರಿ ನಮ್ಮ ಬಗ್ಗೆ ಅನುಚಿತವಾಗಿ ಪ್ರವರ್ತಿಸಿದರೂ, ವಿರುದ್ಧವಾಗಿ ಪ್ರವರ್ತಿಸಿದರೂ, ನಮ್ಮನ್ನು ಯಾವುದಾದರೂ ಹಿಂಸಿಸಿದರೂ, ನಷ್ಟ ಪಡಿಸಿದರೂ, ಕಷ್ಟಕ್ಕೊಳ ಪಡಿಸಿದರೂ ಅವರ ಮೇಲೆ ಕರುಣೆ ತೋರಿಸಬೇಕು. ಕಾರಣ ಅವರಿಗೆ ಪ್ರಕೃತಿಯೇ ಶಿಕ್ಷೆ ನೀಡುತ್ತದೆ ಎಂದು.

ರಮಣ ಮಹರ್ಷಿಯವರ ಜೀವನದಲ್ಲಿ ನಡೆದ ಸಂಘಟನೆಯನ್ನು ನೋಡೋಣ. ಅವರ ಆಶ್ರಮಕ್ಕೆ ಒಮ್ಮೆ ಒಬ್ಬ ಕಳ್ಳ ಬಂದನಂತೆ. ಅವನ ಉದ್ದೇಶ ಭಕ್ತರೆಲ್ಲಾ ಬಹಳಷ್ಟು ಜನ ಬರುತ್ತಿದ್ದಾರೆ ಎಲ್ಲರೂ ಬಂದು ಯಾವುದೋ ಒಂದನ್ನು ಕೊಡುತ್ತಿರುತ್ತಾರೆ ಆದ್ದರಿಂದ ಅವರ ಹತ್ತಿರ, ಬಹಳಷ್ಟು ಇರುತ್ತದೆ ಎಂದು ಆಶ್ರಮದೊಳಗೆ ಪ್ರವೇಶಿಸಿದನು.

ಅದನ್ನು ರಮಣ ಮಹರ್ಷಿಗಳು ನೋಡಿದರು. ನೋಡಿ ಅವನು ಒಳಗೆ ಬಂದ ನಂತರ ಏನೆಂದು ಹೇಳಿದರೆಂದರೆ ನೋಡಪ್ಪ ತಂದೆ, ಈ ಅರ್ಧರಾತ್ರಿಯ ಸಮಯದಲ್ಲಿ ಕನ್ನ ಹಾಕಲು ಬಂದಂತಿರುವೆ. ಒಂದು ಕೆಲಸ ಮಾಡು ನಾನು ಹೊರಗೆ ಹೊರಟು ಹೋಗುತ್ತೇನೆ, ನಿನಗೆ ಬೇಕಾದಂತಹವುಗಳನ್ನು ಮೂಟೆ ಕಟ್ಟಿಕೊಂಡು ತೆಗೆದುಕೊಂಡು ಹೋಗು ಎಂದು ಹೇಳಿದರಂತೆ. ಏಕೆಂದರೆ, ನಾನಿದ್ದರೆ ನಿನಗೆ ಸ್ವಲ್ಪ ಮುಜುಗರವಾಗುತ್ತದೆ, ನಾನು ಇಲ್ಲದಿದ್ದರೆ ನೀನು ಹಾಯಾಗಿ ಮೂಟೆ ಕಟ್ಟಿಕೊಂಡು ಹೊರಟು ಹೋಗಬಹುದು ಎಂದು ಹೇಳಿದರಂತೆ.ಹಾಗೆ ಅವನನ್ನು ಒಳಗಡೆ ಇರಿಸಿ ರಮಣ ಮಹರ್ಷಿಗಳು

ಹೊರಟು ಹೋದರೇ ಅವನು ಬಂದು ಅವರ ಕಾಲುಗಳ ಮೇಲೆ ಬಿದ್ದನಂತೆ.

ರಮಣರವರು ವಸ್ತುಗಳು ಹೋಗುತ್ತಿವೆ ಎಂದು ಏನೂ ಅಂದುಕೊಳ್ಳಲಿಲ್ಲ. ಕಾರಣ ಅವರು ಅಂತಹ ಉನ್ನತ ಸ್ಥಿತಿಗೆ ಬೆಳೆದಿದ್ದರು. ನಾವು ಸಹ ಆ ರೀತಿ ಅಭಿವೃದ್ಧಿ ಹೊಂದಬೇಕು.

ನಾನು ಪತ್ರಿಯವರನ್ನು ವೀಕ್ಷಣೆ ಮಾಡಿದ್ದೇನೆ. ಒಂದು ಸಾರಿ ಅವರನ್ನು ಟ್ರೈನ್ ಹತ್ತಿಸಲು ನಾನು ಸ್ಟೇಷನ್ ಗೆ ಹೋಗಿದ್ದೆನು. ಅವರು ಕುಳಿತುಕೊಂಡರು. ನಾನು ನಿಂತುಕೊಂಡೆನು. ಯಾರಾದರೂ ಭಿಕ್ಷೆ ಬೇಡುವವರನ್ನು ನೋಡಿದರೆ ಅವರು ಅಷ್ಟಾಗಿ ಆಸಕ್ತಿ ತೋರಿಸುತ್ತಿರಲಿಲ್ಲ.

ಇನ್ನೂ ಅವರೇನು ಹೇಳಿದರೆಂದರೆ? ಅವನು ಹಿಂದಿನ ಜನ್ಮದಲ್ಲಿ ಏನೋ ಮಾಡಿದ್ದಾನೆ, ಈಗ ಅನುಭವಿಸುತ್ತಿದ್ದಾನೆ ಎಂದು ಹೇಳಿದರು. ಅಂದರೆ ಮಾಡಿದ್ದನ್ನು ಅನುಭವಿಸುತ್ತಿದ್ದಾನೆ, ಅಂದರೆ ಭಿಕ್ಷೆ ಬೇಡುತ್ತಿದ್ದಾನೆ. ಅದೇರೀತಿ ಅಂಗವಿಕಲತೆ ಇದ್ದರೂ ಮಾಡಿದ್ದನ್ನೇ ಅನುಭವಿಸುತ್ತಿದ್ದಾನೆ ಎಂದರ್ಥ. ಅಂತಹವನ ಮೇಲೆ ಅನುಕಂಪ ತೋರಿಸುವ ಅಗತ್ಯವೇನಿದೆ?

ಇಲ್ಲಿ ನೆನಪಿನಲ್ಲಿಟ್ಟುಕೊಳ್ಳಿ ಒಬ್ಬ ಕುರುಡ ಆಗಿದ್ದಾನೆಂದರೂ, ಅಂಗವಿಕಲತೆಯಿಂದ ಇದ್ದರೂ, ಇನ್ನೇನಾದರೂ ಇದ್ದರೂ ಸರಿಯೇ ಅನುಕಂಪ ತೋರಿಸುತ್ತೇವೆ. ಆದರೆ ಈ ಪರಿಸ್ಥಿತಿ ಅವನಿಗೆ ಏಕೆ ಬಂದಿದೆ? ಅಂದರೆ ಪ್ರಕೃತಿಯ ನಿರ್ಧಾರದ ಪ್ರಕಾರವೇನಾ? ಪ್ರಕೃತಿಯೆಂದರೆ ಯಾರು ಭಗವಂತನೇ ಅಲ್ಲವೇ? ಸೃಷ್ಟಿಕರ್ತನೇ ಅಲ್ಲವೇ? ಹಾಗಾದರೆ ಆತ ಅಷ್ಟು ದಯೆ ಇಲ್ಲದವನೇ? ಈ ವಿಷಯವನ್ನು ಒಮ್ಮೆ ಆಲೋಚಿಸಿ.

ಈ ಸೃಷ್ಟಿಕರ್ತ ಅವರಿಗೆ ಅಷ್ಟು ಕ್ರೂರವಾದ ಶಿಕ್ಷೆ ಏಕೆ ಹಾಕಿದ್ದಾನೆ? ಆತನ ನಿರ್ಧಾರ ತಪ್ಪೇ? ತಪ್ಪಾದ ನಿರ್ಧಾರವನ್ನು ಆತ ತೆಗೆದುಕೊಳ್ಳುತ್ತಾನೆಯೇ? ಅಂದರೆ ಆತ ಎಂತಹ ಪರಿಸ್ಥಿತಿಯಲ್ಲಿಯೂ ಅಪ್ಪು ನಿರ್ಧಾರಗಳನ್ನು ತೆಗೆದುಕೊಳ್ಳುವುದಿಲ್ಲ. ಅವರು ಏನನ್ನು ತೆಗೆದುಕೊಂಡರೂ ಕರೆಕ್ಟ್. ಏಕೆಂದರೆ ಅವನು ಅದಕ್ಕಿಂತ ಮುಂಚೆ ಅಜ್ಞಾನದಿಂದ ಮಾಡಬಾರದ ಕೆಲಸಗಳನ್ನು ಮಾಡಿದ್ದನು. ಅಂದರೆ ಅವನಿಂದ ಬಹಳಷ್ಟು ಜನರಿಗೆ ನಷ್ಟ, ನೋವು ಉಂಟಾಗಿದೆ.

ಅವನು ಆ ಪ್ರಾಣಿಗಳಿಗೆ, ಅವರ ನೆರೆಹೊರೆಯವರಿಗೆ ಬಹಳಷ್ಟು ಹಾನಿ ಉಂಟು ಮಾಡಿದ್ದಾನೆ. ಹಾಗಾದರೆ ಆ ಕೆಲಸವನ್ನು ಏಕೆ ಮಾಡಿದನು? ಅಂದರೆ ಅವುಗಳ ನೋವು

ಏನೆಂದು ಅವನಿಗೆ ತಿಳಿಯದು. ಆದ್ದರಿಂದ ಆ ನೋವನ್ನು ತಿಳಿದುಕೊಳ್ಳುವುದಕ್ಕಾಗಿಯೇ! ಅನುಭವಕ್ಕೆ ಬರುವುದಕ್ಕಾಗಿಯೇ ಪ್ರಕೃತಿ ಅವನಿಗೆ ಆ ಶಿಕ್ಷೆಯನ್ನು ಹಾಕಿದೆ. ಆ ನೋವು ಅನುಭವಕ್ಕೆ ಬಂದರೆ ಮತ್ತೊಮ್ಮೆ ಆ ಕೆಲಸವನ್ನು ಮಾಡುವುದಿಲ್ಲ. ಬಾರದಿದ್ದರೆ ಆ ಕೆಲಸವನ್ನು ಮಾಡುತ್ತಲೇ ಇರುತ್ತಾನೆ, ತಪ್ಪು ಮಾಡುವುದನ್ನು ಬಿಡುವುದಿಲ್ಲ. ಆದರೆ ಅನುಭವಿಸಿದರೇ, ಆ ಕೆಲಸಗಳನ್ನು ಮತ್ತೆ ಮಾಡದಂತೆ ಉನ್ನತವಾಗಿ ಬೆಳೆಯುತ್ತಾನೆ.

ಹಾಗೆ ಒಂದೊಂದು ಜನ್ಮದಲ್ಲಿ ತಾನು ಮಾಡಿದ ತಪ್ಪುಗಳನ್ನು ಅನುಭವದ ಮೂಲಕ ಒಂದೊಂದಾಗಿ ಸರಿ ಪಡಿಸಿಕೊಳ್ಳುತ್ತಾನೆ. ಜನ್ಮ ಏತಕ್ಕೆ ಎಂದರೆ? ಕೆಲವು ಅನುಭವಗಳನ್ನು ಹೊಂದಲು, ಅದರ ಮೂಲಕ ಪಾಠಗಳನ್ನು ಕಲಿತುಕೊಳ್ಳಲು, ಅದರ ಮೂಲಕ ಆತ್ಮದ ಉನ್ನತಿಯನ್ನು ಹೊಂದಲು, ಅದರ ಮೂಲಕ ಆತ್ಮ ಅಭಿವೃದ್ಧಿ ಹೊಂದಲು ಎಂದು ತಿಳಿಯಬೇಕು.

ಆ ರೀತಿಯಾಗಿ ಅವನು ಯಾವಾಗ ಕೆಲವು ತಪ್ಪುಗಳನ್ನು ಬಿಟ್ಟುಬಿಡುವನೋ ಆತ್ಮ ಸ್ವಲ್ಪ ಅಭಿವೃದ್ಧಿ ಹೊಂದಿದಂತೆಯೇ ಲೆಕ್ಕ. ನೆನಪಿಟ್ಟುಕೊಳ್ಳಿ ನೀವು ಎಷ್ಟು ತಪ್ಪು ಮಾಡುವುದನ್ನು ನಿಲ್ಲಿಸುವಿರೋ ನಿಮ್ಮ ಆತ್ಮ ಅಂದರೆ ನೀವು ಅಷ್ಟು ಅಭಿವೃದ್ಧಿಯಾದಂತೆಯೇ ಲೆಕ್ಕ. ಆದ್ದರಿಂದ ಅಂತಹವರನ್ನು ಪತ್ರಿಯವರು ಅಷ್ಟಾಗಿ ಹಿಡಿಸಿಕೊಳ್ಳುವುದಿಲ್ಲ.

ಆಗ ನನಗೆ ಅರ್ಥವಾಯಿತು. ನಾವು ಇಂತಹ ಉಪಕಾರಗಳನ್ನು ಮಾಡುವುದರಿಂದ ಪ್ರಯೋಜನ ಇರುವುದಿಲ್ಲವೆಂದು ತಿಳಿದುಕೊಂಡೆನು. ನಂತರ ಪುಣ್ಯಕರ್ಮಗಳು ಸಹ ಅಗತ್ಯವಿಲ್ಲವೆಂದು ತಿಳಿದುಕೊಂಡೆನು. ಮಾಡಬೇಕಾದದ್ದು ಮುಕ್ತಿ ಕರ್ಮಗಳು ಅಂದರೆ ಆತ್ಮ ಕರ್ಮಗಳನ್ನೇ ಅಂದರೆ ಆತ್ಮ ಸೇವೆಗಳನ್ನೇ ನಾವು ಮಾಡಬೇಕು ಎಂಬುದು ಅರ್ಥವಾಯಿತು.

**ಶ್ರೀ ಕೃಷ್ಣನು ಸಹ**

**ಶ್ಲೋ : ಯೊ ನಾ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ಶುಭಾಶುಭ ಪರಿತ್ಯಾಗೀ ಭಕ್ತಿಮಾನ್ ಯ ಸ್ಸ ಮೇ ಪ್ರಿಯಹ ॥ (ಭ.ಗೀ.12–17)**

ತಾ:– ಯಾರು ಸಂತೋಷಿಸುವುದಿಲ್ಲವೋ! ದ್ವೇಷಿಸುವುದಿಲ್ಲವೋ! ದುಃಖವನ್ನು ಹೊಂದುವುದಿಲ್ಲವೋ! ಯಾರು ಶುಭಾಶುಭಗಳನ್ನು ತ್ಯಜಿಸಿದವರೋ!(ಒಳ್ಳೆಯದು– ಕೆಟ್ಟದ್ದು, ಪುಣ್ಯ – ಪಾಪ) ಅಂತಹ ಭಕ್ತನು ನನಗೆ ಪ್ರಿಯವಾದವನು.

ಅದಕ್ಕಾಗಿಯೇ ಪತ್ರೀಜಿ ಪಾಪ ಕರ್ಮಗಳನ್ನೇ ಅಲ್ಲ, ಪುಣ್ಯಕರ್ಮಗಳನ್ನು ಸಹ ತ್ಯಜಿಸಬೇಕೆಂದು ಹೇಳಿದ್ದಾರೆ, ಆತ್ಮ ಕರ್ಮಗಳನ್ನು ಮಾಡಬೇಕು ಎಂದಿದ್ದಾರೆ. ಆ ವಿಧವಾಗಿ ನಾವು ಪ್ರವರ್ತಿಸಿದರೇನೇ, ನಾವು ಜನಾಲೋಕವನ್ನು ದಾಟಿ ಅದರ ಮೇಲಿನ ಲೋಕಗಳನ್ನು, ಕೊನೆಗೆ ಸತ್ಯಲೋಕವನ್ನು ಹೊಂದುವ ಅರ್ಹತೆಯನ್ನು ಸಂಪಾದಿಸಿಕೊಂಡವರಾಗುತ್ತೇವೆ.

ಆದ್ದರಿಂದ ಒಂದೊಂದು ವಿಷಯವನ್ನು ಆಚರಣೆಗೆ ತಂದುಕೊಳ್ಳಬೇಕು. ಆದ್ದರಿಂದ ಪತ್ರೀಜಿಯವರನ್ನು ಅನುಸರಿಸಿ, ಅದನ್ನು ಆಚರಣೆಯೊಳಗೆ ತಂದುಕೊಂಡರೆ ಖಚಿತವಾಗಿ ನಾವು ಸತ್ಯಲೋಕವನ್ನು ಹೊಂದುವ ಅರ್ಹತೆಯನ್ನು ಸಂಪಾದಿಸುತ್ತೇವೆ.

## ಜನಾಲೋಕವನ್ನು ದಾಟಿದವರಿಗೆ ಬಯಸಿದ ಜನ್ಮ ಬರುತ್ತದೆ.

ಆದರೆ ಮೇಲಿನ ಲೋಕಗಳ ಶ್ರೇಷ್ಠತೆಯನ್ನು ತಿಳಿದುಕೊಂಡರೆ ಆ ಲೋಕಗಳಿಗೆ ಹೋಗುವುದಕ್ಕೋಸ್ಕರ ಪ್ರಯತ್ನ ಮಾಡುತ್ತಾರೆ. ಆದ್ದರಿಂದ ಜನಾಲೋಕದ ಮೇಲೆ ಇರುವಂತಹ ಮಹಾಲೋಕ ತಪೋಲೋಕವನ್ನು ಸೇರಿಕೊಂಡರೆ ಬರುವ ಲಾಭಗಳ ಬಗ್ಗೆ ತಿಳಿಯೋಣ.

ನೋಡಿ ನಮ್ಮ ಮಕ್ಕಳನ್ನು ಒಳ್ಳೆಯ ಪಾಠಶಾಲೆಗಳಲ್ಲಿ ಸೇರಿಸುತ್ತೇವೆ, ಇನ್ನು ಸಾಧ್ಯವಾದರೆ ಕಾರ್ಪೋರೇಟ್ ಸ್ಕೂಲ್ ಗಳಲ್ಲಿ ಸೇರಿಸುತ್ತೇವೆ. ಅಷ್ಟೇ ಹೊರತು ಸಾಧಾರಣ ಸ್ಕೂಲ್ ಗಳಲ್ಲಿ ಸೇರಿಸಲು ಇಷ್ಟಪಡುವುದಿಲ್ಲ. ಅದಕ್ಕೆ ಕಾರಣ ಸಾಧಾರಣ ಸ್ಕೂಲ್ ಗಳಲ್ಲಿ ಆಟೋರಿಕ್ಷಾ ಓಡಿಸುವವರ ಮಕ್ಕಳು, ಕೂಲಿ ಕೆಲಸಗಳನ್ನು ಮಾಡುವವರ ಮಕ್ಕಳು ಇರುತ್ತಾರೆ. ಅಂತಹ ಸ್ಕೂಲ್ ಗಳಲ್ಲಿ ನಾವು ಸೇರಿಸಿದರೆ ಏನಾಗುತ್ತದೆ? ಅವರ ಸಾಂಗತ್ಯವೇ ದೊರೆಯುತ್ತದೆ. ಎಷ್ಟು ವರ್ಷಗಳ ಅಲ್ಲಿ ವಿದ್ಯಾಭ್ಯಾಸ ಮಾಡುವನೋ ಅಷ್ಟು ವರ್ಷಗಳು ಅವರೊಂದಿಗೇ ಸ್ನೇಹ ಮಾಡುತ್ತಾನೆ.

ಕೆಲವು ದಿನಗಳಲ್ಲಿ ಅವರಂತೆಯೇ ಇವನು ತಯಾರಾಗುತ್ತಾನೆ. ಆದರೆ ಒಳ್ಳೆಯ ಕಾನ್ವೆಂಟ್ ನಲ್ಲಿ ಯಾದರೂ, ಕಾರ್ಪೋರೇಟರ್ ಸ್ಕೂಲ್ ಗಳಲ್ಲಿ ಸೇರಿಸಿದರೆ! ಸೊಸೈಟಿ ಯಲ್ಲಿರುವ ಹೈ ಲೆವೆಲ್ ಅಂದರೆ ಕಲೆಕ್ಟರ್ ಮಕ್ಕಳು, ಐಪಿಎಸ್, ಐಎಎಸ್ ಅಂತಹವರ ಮಕ್ಕಳು, ಮಿನಿಸ್ಟರ್ ಗಳ ಮಕ್ಕಳು, ಡಾಕ್ಟರ್ ಗಳ ಮಕ್ಕಳು, ಇನ್ನಷ್ಟು ಹೈಲೆವೆಲ್ ನಲ್ಲಿರುವ ಮಕ್ಕಳೆಲ್ಲರೂ ಅವುಗಳಲ್ಲಿ ವ್ಯಾಸಂಗ ಮಾಡುತ್ತಾರೆ. ಅಂತಹ ಸ್ಕೂಲ್ ಗಳಲ್ಲಿ ಸೇರಿಸಿದರೆ ಅಂತಹವರ ಸಾಂಗತ್ಯ ಉಂಟಾಗುತ್ತದೆ. ಅವರೊಂದಿಗೆ ಕೆಲವು ವರ್ಷಗಳು ಇವನು ಅಲ್ಲಿ ವ್ಯಾಸಂಗ ಮಾಡಿದಾಗ ಅವರೆಲ್ಲರೂ ಫ್ರೆಂಡ್ಸ್ ಆಗುತ್ತಾರೆ.

ಆಗ ಅವರು ಮಾತನಾಡುವ ವಿಧಾನವು ಸಹ ಬಹಳ ಹೈ ಲೆವೆಲ್ ನಲ್ಲಿಯೇ ಇರುತ್ತದೆ. ಅಮೆರಿಕಾಗೆ ಹೋಗಬೇಕಾ, ಆಸ್ಟ್ರೇಲಿಯಾಗೆ ಹೋಗಬೇಕಾ, ಬ್ರಿಟನ್ ಗೆ ಹೋಗಬೇಕಾ ಇಲ್ಲವೇ ಇಲ್ಲಿಯೇ ಇನ್ನೂ ದೊಡ್ಡ ಇನ್ಸ್ಟಿಟ್ಯೂಷನ್ ನಲ್ಲಿ ಜಾಯಿನ್ ಆಗಬೇಕಾ? ಎಂದು ಚರ್ಚೆ ಮಾಡುತ್ತಾರೆ. ಅವರ ಸ್ನೇಹಿತರ ಪೋಷಕರ ಮೂಲಕ

ಇವೆಲ್ಲವೂ ಅರಿವಿಗೆ ಬರುತ್ತವೆ. ಅವರು ಶ್ರೇಷ್ಠ ರಾಗಿರುವುದರಿಂದ, ಆ ವಿಷಯಗಳನ್ನೇ ಹೇಳುತ್ತಾರೆ. ಅವುಗಳನ್ನೇ ಚರ್ಚೆ ಮಾಡುತ್ತಾರೆ.

ಅಷ್ಟೇ ಅಲ್ಲ ವಿದ್ಯಾಭ್ಯಾಸ ಸಂಪೂರ್ಣವಾದ ನಂತರ ಅವರ ಫ್ರೆಂಡ್ ಷಿಪ್ ಅನ್ನು ಜೀವನಪರ್ಯಂತ ಮರೆತು ಹೋಗುವುದಿಲ್ಲ. ಚಿಕ್ಕಂದಿನ ಸ್ನೇಹ ಹಾಗೆಯೇ ಇರುತ್ತದೆ. ಅಂತಹವರೊಂದಿಗೆ ಸ್ನೇಹ ಮಾಡಿ ಹೊರಗೆ ಬಂದಾಗ, ಅವರೆಲ್ಲರೂ ಅಂತಹ ವಿದ್ಯಾಭ್ಯಾಸ ಮಾಡಿದ್ದರಿಂದ, ಎಲ್ಲರೂ ಹೈ ಲೆವೆಲ್ ಗೆ ಹೋಗಿರುವುದರಿಂದ, ಅವರಿಗೆ ಸೊಸೈಟಿಯಲ್ಲಿ ಒಳ್ಳೆಯ ಪೊಜಿಷನ್ ಗಳು ಬರುತ್ತವೆ. ಅವರೊಂದಿಗೆ ಇವರು ಸಹ, ಶ್ರೇಷ್ಠವಾದ ವ್ಯಕ್ತಿಗಳಾಗುತ್ತಾರೆ. ಅಂತಹವರ ಸ್ನೇಹ ಇರುವುದರಿಂದ, ಉತ್ತಮವಾದ ಪೊಜಿಷನ್ ಗಳಲ್ಲಿ ಇರುವುದರಿಂದ, ಅವರಿಗೆ ಯಾವುದೇ ಕೆಲಸವಾದರೂ ಸುಲಭವಾಗಿ ಆಗುತ್ತದೆ. ಅದಕ್ಕಾಗಿಯೇ ಅಂತಹ ಸ್ಕೂಲ್ ಗಳಲ್ಲಿ ಸೇರಿಸಲು ಪ್ರತಿಯೊಬ್ಬರು ಪ್ರಾಮುಖ್ಯತೆ ನೀಡುತ್ತಾರೆ.

ಅದೇ ಸಾಮಾನ್ಯವಾದ ಸ್ಕೂಲುಗಳಲ್ಲಿ ಜಾಯಿನ್ ಆದವರು, ಅಂದರೆ ಆಟೋರಿಕ್ಷಾದವರು, ಕೂಲಿಯವರು, ಕೆಲಸದವರ ಮಕ್ಕಳೊಂದಿಗೆ ಓದಿದರೆ ಏನಾಗುತ್ತದೆ? ಆ ಮಕ್ಕಳ ಪೋಷಕರು ಕುಡಿದು ಬರುತ್ತಾರೆ. ಪ್ರತಿದಿನವೂ ಜಗಳವಾಡುತ್ತಾ ಇರುತ್ತಾರೆ, ಹೊಡೆದಾಡುತ್ತಾ ಇರುತ್ತಾರೆ, ಬೈಯುತ್ತಾ ಇರುತ್ತಾರೆ. ಇಷ್ಟನ್ನು ಬಿಟ್ಟರೆ ಅವರಿಗೆ ಬೇರೇ ಇನ್ನೇನು ಇರುವುದಿಲ್ಲ. ಮಕ್ಕಳು ಅದನ್ನೇ ನೋಡುತ್ತಾ ಇರುತ್ತಾರೆ. ಅವುಗಳನ್ನೇ ತಿಳಿದುಕೊಳ್ಳುತ್ತಾರೆ. ಅವರು ಸ್ಕೂಲ್ ಗೆ ಬಂದ ನಂತರ ಹೇಳಿಕೊಳ್ಳುವ ವಿಷಯಗಳು ಈ ರೀತಿಯೇ ಇರುತ್ತವೆ. ಈ ದಿನ ನಮ್ಮ ತಂದೆ ಕುಡಿದು ಬಂದು ನಮ್ಮ ಅಮ್ಮನನ್ನು ಹೊಡೆದರು, ಇಲ್ಲದಿದ್ದರೆ ನಮ್ಮ ಅಮ್ಮ ನಮ್ಮ ತಂದೆಯ ಹೊಡೆತ (ಏಟು)ಗಳನ್ನು ಸಹಿಸಲಾರದೇ ಬಿಟ್ಟು ಹೋದರು. ಈ ರೀತಿ ಇರುತ್ತವೆ. ಅವರಿಗೆ ಈ ವಿಷಯಗಳಷ್ಟೇ ತಿಳಿಯುತ್ತವೆ, ಇದಕ್ಕಿಂತ ಇನ್ನೇನೂ ತಿಳಿಯುವುದಿಲ್ಲ. ಅವರು ಕೊನೆಗೆ ಹಾಗೆಯೇ ತಯಾರಾಗುತ್ತಾರೆ. ತಂದೆ ಕುಡಿದರೆ ಅವನು ಸಹ ಕುಡಿಯಬೇಕು ಎಂದುಕೊಳ್ಳುತ್ತಾನೆ. ತಂದೆ ಸಿಗರೇಟ್ ಸೇದುತ್ತಿದ್ದರೆ ಅವನು ಸಿಗರೇಟ್ ಸೇದಬೇಕೆಂದುಕೊಳ್ಳುತ್ತಾನೆ. ಅವನ ತಂದೆತಾಯಿಯ ಅಭ್ಯಾಸಗಳನ್ನೇ ಅವನು ಅಭ್ಯಾಸ ಮಾಡಿಕೊಳ್ಳುತ್ತಾನೆ.

ಅದಕ್ಕಾಗಿಯೇ ಯಾರೂ ಸಹ ಕೆಳಗಿನ ಮಟ್ಟದ ಸ್ಕೂಲ್ ಗಳಲ್ಲಿ ಸೇರಿಸಲು ಇಷ್ಟಪಡುವುದಿಲ್ಲ. ಹೈ ಲೆವೆಲ್ ಸ್ಕೂಲ್ ಗಳಲ್ಲಿ ಸೇರಿಸಿದರೆ ಎಲ್ಲಾ ವಿಧಗಳಲ್ಲಿಯೂ ಅವನ ಭವಿಷ್ಯ ಉತ್ತಮವಾಗಿರುವುದರಿಂದ, ಎಷ್ಟು ಕಷ್ಟವಾದರೂ ಸರಿ, ಎಷ್ಟು ಖರ್ಚಾದರೂ ಸರಿ ಸಾಧ್ಯವಾದಷ್ಟು ಉತ್ತಮವಾದ ಸ್ಕೂಲ್ ಗಳಲ್ಲಿ ಸೇರಿಸಲು ಪ್ರಯತ್ನಿಸುತ್ತಾರೆ.

ಅದೇರೀತಿ ನೀವು ಜನಾ ಲೋಕದ ಕೆಳಗಿನ ಲೋಕಗಳಿಗೆ ಅಂದರೆ ಭುವರ್ ಲೋಕಕ್ಕೆ ಸೇರಿದರೆ ನಿಮಗಿಂತಲೂ ಮೊದಲು ಬಂದವರು ಇರುತ್ತಾರೆ. ಆ ಭುವರ್ ಲೋಕದಲ್ಲಿ ಅಪರಾಧಗಳನ್ನು ಮಾಡಿರುವವರು, ತಪ್ಪುಗಳನ್ನು ಮಾಡಿದವರು, ಪಾಪಗಳನ್ನು ಮಾಡಿದವರು, ಹಿಂಸೆ ಮಾಡಿದವರು ಇರುತ್ತಾರೆ. ಅವರೊಂದಿಗೆ ಸಾಂಗತ್ಯ ಏರ್ಪಡುತ್ತದೆ. ಅವರಿಗೆ ಏನು ತಿಳಿಯುತ್ತದೆ? ಅವರು ಏನು ಹೇಳುತ್ತಾರೆ? ನಾನು ಅವನನ್ನು ಸಾಯಿಸಿ ಬಂದಿದ್ದೇನೆ, ಇಲ್ಲದಿದ್ದರೆ ಆ ಮೇಕೆಯನ್ನು ತಿಂದಿದ್ದೇನೆ, ಕೋಳಿಯನ್ನು ತಿಂದಿದ್ದೇನೆ, ಜಗಳ ಮಾಡಿದ್ದೇನೆ ಎಂದು ಹೇಳುತ್ತಾರೆ. ಅವರಿಗೆ ಇದಕ್ಕಿಂತಲೂ ಇನ್ನೇನು ತಿಳಿಯುತ್ತದೆ? ತಿಳಿದರೆ ತಾನೇ ಇವನಿಗೆ ಹೇಳಲು, ಇವನಿಗೆ ತಿಳಿದರೆ ತಾನೇ ಅವನಿಗೆ ಹೇಳಲು.

ಯಾರಾದರೇ ಜನಾಲೋಕವನ್ನು ದಾಟಿ ಮೇಲಿನ ಲೋಕಗಳಿಗೆ ಅಂದರೆ ಮಹಾಲೋಕಕ್ಕೆ ಸೇರುವರೋ! ಅಲ್ಲಿ ಒಬ್ಬ ಗಾಂಧೀ ಮಹಾತ್ಮರು, ಮದರ್ ತೆರೇಸಾ ಅಂತಹವರ ಸಾಂಗತ್ಯ ದೊರೆಯುತ್ತದೆ. ನೋಡಿ ನೀವು ಕುಡುಕನೊಂದಿಗೆ ಸಾಂಗತ್ಯ ಮಾಡಿದರೆ ಹೇಗಿರುತ್ತದೆ? ಜೂಜಾಟ ಆಡುವವನೊಂದಿಗೆ, ಒಬ್ಬ ಕೊಲೆಗಾರನೊಂದಿಗೆ ಸಾಂಗತ್ಯ ಮಾಡಿದರೆ ಹೇಗಿರುತ್ತದೆ? ಇಲ್ಲವೇ ಗಾಂಧೀಜಿ ಅಂತಹವರೊಂದಿಗೆ ಸಾಂಗತ್ಯ ಮಾಡಿದರೆ ಹೇಗಿರುತ್ತದೆ? ಅಂತಹವರ ಮಾತುಗಳು ಎಷ್ಟು ಆದರ್ಶವಾಗಿರುತ್ತವೆ? ಎಂತಹ ಶ್ರೇಷ್ಠವಾದ ಮಾತುಗಳು ಬರುತ್ತವೆ? ಅಂತಹವರ ಮಾತುಗಳು, ಸಂದೇಶಗಳನ್ನು ಇಂದಿಗೂ ಕೇಳುತ್ತಿದ್ದೇವೆ ಅಲ್ಲವೇ? ಹಾಗಾದರೆ ಅಂತಹವರೊಂದಿಗೆ ದೊರೆಯುವ ಸಾಂಗತ್ಯ ಹೇಗಿರುತ್ತದೆ ಎಂದು ಒಮ್ಮೆ ಊಹಿಸಿಕೊಳ್ಳಿ.

ಅದೇರೀತಿ ತಪೋಲೋಕಕ್ಕೆ ಸೇರಿದರೆ ಎಲ್ಲರೂ ತಪೋಧನರು ಅಂದರೆ ತಪಸ್ಸು ಮಾಡಿದವರು ಅಂದರೆ ತೀವ್ರವಾದ ಧ್ಯಾನಸಾಧನೆ ಮಾಡಿದವರು ಇರುತ್ತಾರೆ. ಅಂದರೆ ಋಷಿಗಳು, ಮಹರ್ಷಿಗಳು, ತೀವ್ರಸಾಧಕರು ಇರುತ್ತಾರೆ. ಅವರೆಲ್ಲ ತಪಸ್ಸು ಮಾಡಿ

ಬಹಳಷ್ಟು ಜ್ಞಾನವನ್ನು ಸಂಪಾದಿಸಿಕೊಂಡವರು. ಅಂತಹವರೊಂದಿಗೆ ಸಾಂಗತ್ಯ ಜ್ಞಾನಪರವಾಗಿರುತ್ತದೆಯೇ ಹೊರತು ಇನ್ನೊಂದು ರೀತಿಯಲ್ಲಿ ಇರುವುದಿಲ್ಲ.

ಅಲ್ಲಿ ತಿಳಿದುಕೊಳ್ಳುತ್ತಾನೆ. ಸ್ವಲ್ಪ ಕಷ್ಟಪಟ್ಟರೆ ಜೀವನದ ಗುರಿಯಾದ ಸತ್ಯಲೋಕವನ್ನು ಸೇರಬಹುದು. ಬಹಳಷ್ಟು ಉತ್ತಮವಾದ ಕೆಲಸಗಳನ್ನು ಮಾಡಬಹುದು ಎಂದು ತಿಳಿಯುತ್ತದೆ. ಆತ್ಮಜ್ಞಾನವನ್ನು ಇನ್ನಷ್ಟು ಹೆಚ್ಚಿಸಿಕೊಳ್ಳಬೇಕು ಎಂದೆನಿಸುತ್ತದೆ. ಸಾಧನೆಯಲ್ಲಿನ ಬಹಳಷ್ಟು ಏರಿಳಿತಗಳು ತಿಳಿಯುತ್ತವೆ. ತೀವ್ರವಾದ ಸಾಧನೆಯಲ್ಲಿ ತಾನು ಹೊಂದಿದ ಅತೀಂದ್ರಿಯ ಶಕ್ತಿಗಳನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂದು ತಿಳಿಯುತ್ತದೆ.

ಆದ್ದರಿಂದ ಯಾವಾಗ ಅಂತಹವರೊಂದಿಗೆ ಸಾಂಗತ್ಯ ಇರುತ್ತದೆಯೋ! ಇವರಿಗೆ ಆತ್ಮಜ್ಞಾನದ ಅರಿವು ಇನ್ನಷ್ಟು ಹೆಚ್ಚಾಗುತ್ತದೆ. ಅವರ ಗುರಿ ಸ್ಪಷ್ಟವಾಗಿ ಅರ್ಥವಾಗುತ್ತದೆ. ಅವರು ಪುನಹ ಜನ್ಮವನ್ನು ತೆಗೆದುಕೊಂಡಾಗ ಅವೆಲ್ಲವೂ ಆತ್ಮದಿಂದ ದೊರೆಯುತ್ತಾ ಇರುತ್ತವೆ. ಯಾವಾಗ ಹಾಗೆ ಅನ್ನಿಸುತ್ತಾ ಇರುತ್ತದೆಯೋ! ಆ ಸಾಧನೆಗಳನ್ನೇ, ಆ ಕೆಲಸಗಳನ್ನೇ ಮಾಡುತ್ತಾರೆ.

ನೋಡಿ ನೀವು ಭೀಮವರಂ ನಲ್ಲಿ ಆತ್ಮಜ್ಞಾನ ಶಿಕ್ಷಣಾ ಶಿಬಿರಕ್ಕೆ ಬಂದಿದ್ದೀರಾ ಎಂದರೆ? ನಿಮ್ಮ ಅಂತರಂಗದಿಂದ ಬಂದ ಪ್ರೋತ್ಸಾಹದ ಬಲವೇ ಅಲ್ಲವೇ? ಇಲ್ಲದಿದ್ದರೆ ಏಕೆ ಬರುತ್ತೀರಾ? ಅಂತಹವರು ಆತ್ಮಜ್ಞಾನಕ್ಕೆ, ಜ್ಞಾನಕ್ಕೆ ಸಂಬಂಧಿಸಿದ ಕೆಲಸಗಳನ್ನೇ ಹೆಚ್ಚಾಗಿ ಮಾಡುತ್ತಾರೆ. ಅವರ ಗುರಿಯನ್ನು ಅಂದರೆ ಸತ್ಯ ಲೋಕವನ್ನು ಸೇರುವ ಪ್ರಯತ್ನವನ್ನು ತೀವ್ರವಾಗಿ ಮಾಡುತ್ತಾರೆ. ಆದ್ದರಿಂದ ಜನಾಲೋಕವನ್ನು ದಾಟಿ ಉನ್ನತವಾದ ಲೋಕಗಳನ್ನು ಹೊಂದಿದರೆ ಬಹಳ ಬಹಳ ಅದೃಷ್ಟವಂತರೆಂದೇ ಹೇಳಬಹುದು. ಯಾರಾದರೂ ಸರಿ ಆ ಲೋಕಗಳನ್ನು ಹೊಂದುವ ಪ್ರಯತ್ನ ಮಾಡಬೇಕು.

ಅಷ್ಟೇಅಲ್ಲ ಜನಾಲೋಕದ ಕೆಳಗಿರುವ ಲೋಕಗಳಲ್ಲಿ ಇರುವವರು ಪುನಹ ಜನ್ಮ ತೆಗೆದುಕೊಳ್ಳುವಾಗ, ಅವರು ಆಯ್ದುಕೊಂಡ ಕರ್ಮಗಳನ್ನು ಅನುಸರಿಸಿಯೇ ಅವರಿಗೆ ಜನ್ಮವನ್ನು ಕೊಡಲ್ಪಡುತ್ತದೆ, ಅಷ್ಟೇ ಹೊರತು ಬಯಸಿದ ಜನ್ಮ ಬರುವುದಿಲ್ಲ. ಬಹಳಷ್ಟು ಪಾಪಗಳನ್ನು ಮಾಡಿದರೆ, ಅದರೊಳಗಿಂದಲೇ ಬಯಸಬೇಕು. ಕಾರಣ ಆ ವಿಧವಾದ

ಅನುಭವಗಳನ್ನು ಹೊಂದಬೇಕಾಗಿರುವುದರಿಂದ. ಅಷ್ಟೇ ಹೊರತು ನನಗೆ ಭೋಗವಂತವಾದ ಜನ್ಮ ಬೇಕೆಂದರೆ ಹೇಗೆ ಬರುತ್ತದೆ? ಬರುವುದಿಲ್ಲ ಅಲ್ಲವೇ?

ಆದರೆ ಜನಾಲೋಕದ ಮೇಲಿರುವ ಲೋಕಗಳನ್ನು ಸೇರಿದ ಯೋಗಿಗಳನ್ನು ತೆಗೆದುಕೊಂಡರೆ ಜನ್ಮ ಅವರ ಆಯ್ಕೆಯನ್ನು ಆಧರಿಸಿ ಇರುತ್ತದೆ. ಅವರು ತಪಸ್ಸನ್ನು ಮಾಡುವುದರಿಂದ, ಕರ್ಮಗಳನ್ನು ರಹಿತ (ಇಲ್ಲದಂತೆ) ಮಾಡಿಕೊಳ್ಳುತ್ತಾರೆ. ಆದ್ದರಿಂದ ಇವರಿಗೆ ಬಯಸಿದ ಜನ್ಮ ಲಭಿಸುತ್ತದೆ. ಅವರು ತಾನು ಇನ್ನು ಎಂತಹ ಅನುಭವಗಳನ್ನು ಹೊಂದಬೇಕು? ಇನ್ನು ನಾನೇನು ಸಾಧಿಸಬೇಕು ಎಂಬುದನ್ನು ನೋಡಿಕೊಂಡು, ಅಂತಹ ಕುಟುಂಬವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ ಅಂತಹ ಜನ್ಮವನ್ನೇ ತೆಗೆದುಕೊಳ್ಳುತ್ತಾರೆ.

ಈ ವಿಷಯವನ್ನು ಭಗವದ್ಗೀತೆಯಲ್ಲಿಯೇ ಹೇಳಲ್ಪಟ್ಟಿದೆ. ಶ್ರೀ ಕೃಷ್ಣ ಏನು ಹೇಳಿತ್ತಾರೆಂದರೆ ಧ್ಯಾನವನ್ನು ಮಾಡುತ್ತಿರುವ ಯೋಗಿ ಮರಣಿಸಿದರೆ ಏನಾಗುತ್ತದೆಯೆಂದು ತಿಳಿಸಿದ್ದಾರೆ.

ಶ್ಲೋ : ಪ್ರಾಪ್ಯ ಪುಣ್ಯಕೃತಾಂ ಲೋಕಾ ನುಷಿತ್ವಾ ಶ್ವಾತೀ ಸ್ಸಮಾಹ।

ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋ7 ಭಿಜಾಯತೇ॥ (ಭ.ಗೀ.6–41)

ತಾ:–ಅಂತಹ ಯೋಗಭ್ರಷ್ಟನು ಅಂದರೆ ಯೋಗಸಾಧನೆ ಪೂರ್ತಿಯಾಗದಂತೆ ಮಧ್ಯದಲ್ಲಿಯೇ ಶರೀರವನ್ನು ತ್ಯಜಿಸಿದವರು (ಬಿಟ್ಟವರು) ಮರಣದ ನಂತರ ಪುಣ್ಯಾತ್ಮರ ಕುಟುಂಬಗಳಲ್ಲಿ ಕೆಲವು ಜನ್ಮಗಳನ್ನು ಹೊಂದಿ ಅಲ್ಲಿ ಅನೇಕ ವರ್ಷಗಳನ್ನು ಕಳೆದು ನಂತರ ಪರಿಶುದ್ಧರಾದ ಶ್ರೀಮಂತರ ಮನೆಗಳಲ್ಲಿ ಹುಟ್ಟುವರು.

ಶ್ಲೋ : ಅಥವಾ ಯೋಗಿನಾಮೇವ ಕುಲೇಭವತಿ ಧೀಮತಾಮ್।

ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀ ದೃಶಮ್ ।। (ಭ.ಗೀ.6–42)

ತಾ:–ಜ್ಞಾನವಂತರು, ಯೋಗಿಗಳಾದವರ ವಂಶದಲ್ಲಿ ಜನಿಸುತ್ತಾನೆ. ಇಂತಹ ಜನ್ಮ ಲಭಿಸುವುದು ಅತ್ಯಂತ ದುರ್ಲಭವೆಂದು ಭಗವಾನ್ ಶ್ರೀ ಕೃಷ್ಣ ಹೇಳಿದ್ದಾರೆ.

ವಾಸ್ತವವಾಗಿ ಇವನ್ನೆಲ್ಲಾ ಏಕೆ ತಿಳಿದುಕೊಳ್ಳಬೇಕು? ಅಂದರೆ ತಿಳಿದುಕೊಳ್ಳುತ್ತಾ ಹೋದಂತೆ ಅವರಲ್ಲಿ ಛಲ ಹೆಚ್ಚುತ್ತದೆ, ಇನ್ನೂ ಹೆಚ್ಚು ಶ್ರಮ ಪಡುತ್ತಾರೆ.

ಅದಕ್ಕಾಗಿಯೇ ಪತ್ರಿಜೀ "ಮರಣಿಸುವುದಕ್ಕೆ ಮುಂಚೆಯೇ ಮರಣಿಸಬೇಕು" ಎಂದಿದ್ದಾರೆ. ಅಂದರೆ ಮರಣಿಸಿದ ನಂತರ ನಡೆಯುವುದರ ಬಗ್ಗೆ ತಿಳಿದುಕೊಳ್ಳಬೇಕು ಎಂದಿದ್ದಾರೆ. ಆಗಲೇ ಯಾರಿಗಾದರೂ ಬದುಕಿರುವಾಗ ಏನು ಮಾಡಬೇಕೆಂದು ತಿಳಿಯುತ್ತದೆ. ಮರಣಿಸಿದ ನಂತರ ನಡೆಯುವ ವಿಷಯಗಳನ್ನು ಅತೀಂದ್ರಿಯ ಶಕ್ತಿಗಳನ್ನು ಸಂಪಾದಿಸಿಕೊಂಡ ಹಲವಾರು ಯೋಗಿಗಳು, ಯೋಗೀಶ್ವರರು ಹೇಳಿದ್ದಾರೆ.

ಆದ್ದರಿಂದ ಇವನ್ನೆಲ್ಲಾ ತಿಳಿದುಕೊಂಡರೆ? ತೀವ್ರಾತಿ ತೀವ್ರವಾದ ಧ್ಯಾನ ಸಾಧನೆಯನ್ನು ಮಾಡಿ ಊರ್ಧ್ವಲೋಕಗಳಿಗೆ ಅರ್ಹತೆಯನ್ನು ಸಂಪಾದಿಸುತ್ತಾರೆ. ಅರ್ಹತೆ ಇಲ್ಲದವರು ಇನ್ನೂ ಹಲವಾರು ಜನ್ಮಗಳನ್ನು ತೆಗೆದುಕೊಳ್ಳಬೇಕಾಗಿ ಬರುತ್ತದೆ.

ಆದ್ದರಿಂದ ಯಾರಾದರೂ ಸರಿ ಜನಾಲೋಕದಲ್ಲಿಯೇ ನಿಲ್ಲದೇ, ಜನಾಲೋಕವನ್ನು ದಾಟುವ ಪ್ರಯತ್ನ ಮಾಡಬೇಕು. ಅದಕ್ಕೆ ಸಾತ್ವಿಕ ಗುಣದಲ್ಲಿಯೇ ನಿಲ್ಲದೇ ಸಾತ್ವಿಕ ಗುಣವನ್ನು ದಾಟಿ ಪರಿ ಸಾತ್ವಿಕ, ಮಹಾಪರಿಸಾತ್ವಿಕದ ಸ್ಥಿತಿಗೆ ಸೇರಬೇಕು. ಇದು ಅಷ್ಟು ಸುಲಭವಲ್ಲ.

ಒಬ್ಬ ಮುಮ್ಮಿಡಿವರಂ ಬಾಲ ಯೋಗಿಯಂತೆ, ರಮಣ ಮಹರ್ಷಿಯಂತೆ,

ವೀರಬ್ರಹ್ಮೇಂದ್ರಸ್ವಾಮಿಯಂತೆ ತೀವ್ರಾತಿ ತೀವ್ರವಾದ (ಅತಿಯಾದ)ಸಾಧನೆ ಮಾಡಬೇಕು. ಆಹಾರ ನಿಯಮಗಳನ್ನು ಪಾಲಿಸಬೇಕು. ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ಆಗ ಯಾರಿಗಾದರೂ ಸಾಧ್ಯವಾಗುತ್ತದೆ.

## ಸಾವಿನ (ಮರಣದ) ನಂತರದ ಬಗ್ಗೆ ತಿಳಿದುಕೊಂಡರೆ ಉಂಟಾಗುವ ಲಾಭಗಳು.

ಅದೇರೀತಿ ಪರಮ ಯೋಗಿ ಕಬೀರ್ ಏನು ಹೇಳಿದ್ದಾರೆಂದರೆ? "ಯಾವ ಸಾವಿಗೆ ಪ್ರಪಂಚ ಭಯಪಡುತ್ತಾ ಇರುತ್ತದೆಯೋ! ಅದನ್ನು ಹೊಂದುವುದರಲ್ಲಿಯೇ ನನಗೆ ಆನಂದವಿದೆ" ಎಂದಿದ್ದಾರೆ.

ಅದೇ ರೀತಿ ಗುರುನಾನಕ್ ಏನು ಹೇಳಿದ್ದಾರೆಂದರೆ?

"ಜೀವನ್ಮರಣವನ್ನು ಪ್ರಾಪ್ತಿಸುವ ಯೋಗಕ್ಕೋಸ್ಕರವೇ ನಾವೆಲ್ಲರೂ ಅವಸ್ಥೆ ಪಡಬೇಕು"ಎಂದು ಹೇಳಿದ್ದಾರೆ.

ಬೈಬಲ್ ನಲ್ಲಿ ಇರುವಂತಹ ಸ್ಯೆಂಟ್ ಪಾಲ್‌ರ ಸುವಾರ್ತೆಗಳಲ್ಲಿ ಏನು ಹೇಳಲ್ಪಟ್ಟಿದೆಯೆಂದರೆ? "ನಾನು ನಿತ್ಯವೂ ಮರಣಿಸುತ್ತಲೇ ಇರುತ್ತೇನೆ".

ಮಹಮ್ಮದೀಯ ಮಹಾತ್ಮರು ಏನು ಹೇಳಿದ್ದಾರೆಂದರೆ? "ಮರಣಿಸುವುದಕ್ಕೆ ಮುಂಚೆಯೇ ಮರಣಿಸುವುದನ್ನು ಕಲಿತುಕೋ" ಎಂದು ಹೇಳಿದ್ದಾರೆ.

ದಾದು ಮಹಾತ್ಮರು ಏನು ಹೇಳಿದ್ದಾರೆಂದರೆ?

"ಪ್ರಾಣ ಇರುವ ಶವದಂತೆ ಬದುಕುವುದನ್ನು ಕಲಿತುಕೋ! ಆಗಲೇ ನಿನಗೆ ಪ್ರಭುವಿನ ದರ್ಶನವಾಗುತ್ತದೆ" ಎಂದಿದ್ದಾರೆ.

ಅಷ್ಟೇ ಅಲ್ಲ "ಮರಣಿಸುವುದಕ್ಕೆ ಮುಂಚೆಯೇ ಮರಣಿಸುವುದನ್ನು ಕಲಿತುಕೋ! ಎಲ್ಲರಂತೆ ಮರಣಿಸಿದರೆ ಪ್ರಯೋಜನವಿಲ್ಲ" ಎಂದಿದ್ದಾರೆ.

ಅವರು "ಎಲ್ಲರಂತೆ ಮರಣಿಸುವುದಲ್ಲ, ಮರಣಿಸುವುದಕ್ಕೆ ಮುಂಚೆಯೇ ಮರುಣಿಸುವುದನ್ನು ಕಲಿತುಕೊಂಡು, ಮರಣಿಸು" ಎಂದು ಹೇಳಿದ್ದಾರೆ.

ಮೇಲಿನ ಮಹಾನುಭಾವರೆಲ್ಲಾ ಹೇಳಿರುವುದು ಅರ್ಥವಾಗಬೇಕೆಂದರೆ ಮರಣಿಸಿದ ನಂತರ ಏನಾಗುತ್ತದೆಯೆಂದು ತಿಳಿಯಬೇಕು.

ಏಕೆಂದರೆ? ಮರಣಿಸಿದ ನಂತರ ನಡೆಯುವುದರ ಬಗ್ಗೆ ತಿಳಿದುಕೊಂಡರೆ ಬಹಳಷ್ಟು ಲಾಭಗಳನ್ನು ಹೊಂದಬಹುದು. ಮುಖ್ಯವಾಗಿ ಬದುಕಿರುವಾಗ ಕೆಲವು ಭಯಗಳು ಹೋಗುತ್ತವೆ, ಅಷ್ಟೇಅಲ್ಲ ಮಾಡಬಾರದ ಕೆಲಸಗಳನ್ನು ಮಾಡುವುದಿಲ್ಲ, ಆತ್ಮಕ್ಕೆ

ಲಾಭವನ್ನುಂಟು ಮಾಡುವ ಕೆಲಸಗಳಿಗೆ ಪ್ರಾಮುಖ್ಯತೆ ನೀಡುತ್ತಾರೆ, ಮುಖ್ಯವಾಗಿ ಹೊಂದಬೇಕಾದ ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೆ.

ಮುಖ್ಯವಾಗಿ ಸಾವಿಗೆ ಭಯಪಡುವುದಿಲ್ಲ. ಅಷ್ಟೇಅಲ್ಲ ನಾನು ದೇಹವಲ್ಲ ನಾನು ಆತ್ಮ ಎಂಬ ಅರಿವು ಉಂಟಾಗುತ್ತದೆ. ಈ ವಿಷಯ ಬದುಕಿರುವಾಗ ತಿಳಿಯುವುದಿಲ್ಲ. ಎಷ್ಟು ಹೇಳಿದರೂ ಅರ್ಥವಾಗುವುದಿಲ್ಲ, ಆದರೆ ಸತ್ತುಹೋದಾಗ ಚೆನ್ನಾಗಿ ಅರ್ಥವಾಗುತ್ತದೆ.

ಏಕೆಂದರೆ? ಭೌತಿಕ ಶರೀರ ಮಂಚದ ಮೇಲೆ ಇರುತ್ತದೆ, ಆ ಶರೀರದಿಂದ ಬಂದಂತಹ ಆತ್ಮ ಗಾಳಿಯಲ್ಲಿ ತೇಲುತ್ತಾ ಮೇಲೆ ಇರುತ್ತದೆ. ಹಾಗೆ ಮೇಲಿನಿಂದ ಕೆಳಗೆ ನೋಡುತ್ತದೆ. ಹಾಗೆ ಕೆಳಗೆ ನೋಡಿದಾಗ, ಅವನ ಶರೀರವೇ ಕೆಳಗೆ ಇರುತ್ತದೆ. ಆಗ ಅವನಿಗೆ ತುಂಬಾ ಆಶ್ಚರ್ಯವಾಗುತ್ತದೆ! ಏನಿದು? ನಾನು ಇಲ್ಲಿಯೂ ಇದ್ದೇನೆ, ಅಲ್ಲಿಯೂ ಇದ್ದೇನೆ! ಹಾಗಾದರೆ ಅದು ಯಾರು? ಎನ್ನುವಂತಹ ಸಂದೇಹ ಬರುತ್ತದೆ.

ಮೊದಲಿಗೆ ಕಳವಳ ಪಡುತ್ತಾನೆ. ನಂತರ ಅರ್ಥವಾಗುತ್ತದೆ. ಗಾಳಿಯಲ್ಲಿ ಇರುವುದೇ ನಾನು, ಆದರೆ ಕೆಳಗೆ ಇರುವ ದೇಹ ನಾನಲ್ಲ ಎಂದು ಮೊಟ್ಟಮೊದಲ ಬಾರಿಗೆ ತಿಳಿದುಕೊಳ್ಳುತ್ತಾನೆ. ಅರೆ! ಇಷ್ಟು ಸಮಯ ಆ ದೇಹವೇ ನಾನು ಎಂದುಕೊಂಡೆನು, ಆದರೆ ಆ ದೇಹ ನಾನಲ್ಲ ಎಂಬ ಮಾತು ಎಂದು ಸ್ಪಷ್ಟವಾಗಿ, ಅನುಭವಪೂರ್ವಕವಾಗಿ ತಿಳಿದುಕೊಳ್ಳುತ್ತಾನೆ. ಹೀಗೆ ಯಾರಿಗಾದರೂ ಸತ್ತುಹೋದ ನಂತರ ನಾನು ದೇಹವಲ್ಲ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಅಷ್ಟೇ ಅಲ್ಲ ಅವನು ಆ ಕಡೆ, ಈ ಕಡೆ ತಿರುಗುತ್ತಾನೆ. ಹಾಗೆ ಹೆಂಡತಿಯ ಹತ್ತಿರ ಹೋಗುತ್ತಾನೆ, ಬಂಧುಗಳ ಹತ್ತಿರ ಹೋಗುತ್ತಾನೆ, ಅವರೊಂದಿಗೆ ಸಹ ಹೇಳುತ್ತಾನೆ. ಏಕೆ ಅಳುತ್ತಿದ್ದೀರಾ? ಅಳಬೇಡಿ ನಾನು ಇಲ್ಲಿಯೇ ಇದ್ದೇನೆ ಎನ್ನುತ್ತಾನೆ. ಅವನು ಎಷ್ಟು ಹೇಳಿದರೂ ಅವರು ಕೇಳಿಸಿಕೊಳ್ಳುವುದಿಲ್ಲ. ನಾನು ತಲೆ ಚಚ್ಚಿಕೊಳ್ಳುತ್ತಾನೆ, ನನ್ನ ಮಾತು ಕೇಳಿಸಿಕೊಳ್ಳಿ, ನಾನು ಸತ್ತಿಲ್ಲ, ನಾನು ಇದ್ದೇನೆ ಎಂದು ಹೇಳುತ್ತಿರುತ್ತಾನೆ. ಆದರೂ ಸಹ ಅವರು ಇವನನ್ನು ಹಿಡಿಸಿಕೊಳ್ಳುವುದಿಲ್ಲ. ಕಾರಣ ಅವರಿಗೆ ಇವನು ಕಾಣಿಸುವುದಿಲ್ಲ, ಅವನ ಮಾತುಗಳು ಇವರಿಗೆ ಕೇಳಿಸುವುದಿಲ್ಲ. ಆದ್ದರಿಂದ ಸತ್ತು ಹೋಗಿದ್ದಾನೆ ಎಂದುಕೊಳ್ಳುತ್ತಾರೆ, ಅಳುತ್ತಾರೆ.

ಆದರೆ ನಾನು ಇದ್ದೇನೆ ಎಂದರೆ ನಾನು ಸಾಯಲಿಲ್ಲ. ಅಂದರೆ ನನಗೆ ಸಾವು ಇಲ್ಲವೆಂಬ ವಿಷಯ ಆಗ ತಿಳಿಯುತ್ತದೆ.

ಹಾಗೆ ಮರಣಿಸುವುದಕ್ಕೆ ಮುಂಚೆಯೇ ಮರಣಿಸಿದ ನಂತರ ನಡೆಯುವ ವಿಷಯವನ್ನು ಯಾರು ಅರ್ಥ ಮಾಡಿಕೊಳ್ಳುತ್ತಾರೋ! ಅವರಿಗೆ ಬದುಕಿರುವಾಗಲೇ, ಈ ದೇಹ ನಾನಲ್ಲ, ನನಗೆ ಸಾವಿಲ್ಲ ಎಂಬುದು ತಿಳಿಯುತ್ತದೆ. ಏಕೆಂದರೆ? ಸಾಯುವುದು ದೇಹವೇ ಹೊರತು ತಾನಲ್ಲ ಎಂಬ ವಿಷಯ ಸ್ಪಷ್ಟವಾಗಿ ಅರ್ಥವಾಗುತ್ತದೆ.

ಆದ್ದರಿಂದ ಯಾರಾದರೇ! ಮರಣಿಸಿದ ನಂತರ ನಡೆಯುವುದರ ಬಗ್ಗೆ ತಿಳಿದುಕೊಂಡರೆ! ಮುಖ್ಯವಾಗಿ ತನಗೆ ಸಾವಿಲ್ಲ ಎಂಬ ವಿಷಯ ತಿಳಿಯುತ್ತದೆ. ಆದ್ದರಿಂದ ಯಾವುದೇ ಕರೋನಾದಂತಹ ರೋಗಗಳಾಗಲೀ, ಯಾರಾದರೂ ನನ್ನನ್ನು ಏನೂ ಮಾಡಲಾರರು ಎಂಬುದು ಸ್ಪಷ್ಟವಾಗಿ ಅವನಿಗೆ ಅರ್ಥವಾಗುತ್ತದೆ.

ಜಗತ್ತಿನಲ್ಲಿ ಬಹಳಷ್ಟು ಜನರಿಗೆ ಎಲ್ಲದಕ್ಕೂ ಭಯ, ಈ ಭಯ ಹೋಗಬೇಕೆಂದರೆ ಕಡ್ಡಾಯವಾಗಿ "ಮರಣಿಸುವುದಕ್ಕೆ ಮುಂಚೆಯೇ ಮರಣಿಸಬೇಕು". ಅಷ್ಟೇಅಲ್ಲ ಇನ್ನೂ ಕೆಲವು ಲಾಭಗಳಿವೆ. ಅವರು ಮಾಡುವ ಕೆಲಸಗಳು ಬಹಳಷ್ಟು ಬದಲಾವಣೆಯಾಗುತ್ತವೆ. ಏಕೆಂದರೆ? ಇಲ್ಲಿಯವರೆಗೂ ಅವರು ಮಾಡುವ ಕೆಲಸಗಳೆಲ್ಲವೂ ನಾನು ದೇಹ ವೆಂಬ ಭಾವನೆಯಿಂದ ಮಾಡಿದ್ದರು. ಆದರೆ ನಾನು ದೇಹವಲ್ಲ, ಆತ್ಮ ಎಂದು ತಿಳಿದುಕೊಂಡಾಗ ದೇಹಕ್ಕೆ ಪ್ರಾಮುಖ್ಯತೆಯನ್ನು ಕಡಿಮೆ ಮಾಡುತ್ತಾರೆ, ಆತ್ಮಕ್ಕೆ ಪ್ರಾಮುಖ್ಯತೆಯನ್ನು ಹೆಚ್ಚಿಸುತ್ತಾರೆ. ದೇಹಕ್ಕೆ ಸಂಬಂಧಿಸಿದ ಕೆಲಸಗಳನ್ನು ಕಡಿಮೆ ಮಾಡುತ್ತಾರೆ, ಆತ್ಮಕ್ಕೆ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಾರೆ. ಅಷ್ಟೇಅಲ್ಲ ದೇಹಕ್ಕೆ ಸಂಬಂಧಿಸಿದ ಸೇವೆಗಳನ್ನು ಬಿಟ್ಟುಬಿಡುತ್ತಾರೆ, ಆತ್ಮಕ್ಕೆ ಸಂಬಂಧಿಸಿದ ಸೇವೆಗಳನ್ನು ಮಾಡುತ್ತಾರೆ. ಹೀಗೆ ಅವರು ಮಾಡುವ ಕೆಲಸಗಳಲ್ಲಿ ಬಹಳಷ್ಟು ಬದಲಾವಣೆಯಾಗುತ್ತವೆ.

ಸಾಯುವುದಕ್ಕೆ ಮುಂಚೆ ನೀನು ದೇಹವಲ್ಲ ಆತ್ಮವೆಂದು ಎಷ್ಟು ಹೇಳಿದರೂ ಅರ್ಥವಾಗುವುದಿಲ್ಲ. ಆದರೆ ಸತ್ತುಹೋದ ನಂತರವೇ ಚೆನ್ನಾಗಿ ಅರ್ಥವಾಗುತ್ತದೆ.

ಅಷ್ಟೇ ಅಲ್ಲ ಅವರ ಜವಾಬ್ದಾರಿಗಳು ಸಹ ಬದಲಾಗುತ್ತವೆ. ನೋಡಿ ಯಾರೊಂದಿಗಾದರೂ ಧ್ಯಾನ ಮಾಡು. ಪುಸ್ತಕಗಳನ್ನು ಓದು ಎಂದು ಹೇಳಿದರೆ ನನಗೆಲ್ಲಿ ಸಮಯವಿದೆ! ನನಗೆ ಎಷ್ಟೋ ಜವಾಬ್ದಾರಿಗಳು ಇವೆ ಎನ್ನುತ್ತಾರೆ. ಅದೇ ಪುರುಷರಾದರೇ? ನನಗೆ ಎಷ್ಟು ಜವಾಬ್ದಾರಿಗಳು, ನಾನು ಸಂಪಾದಿಸಬೇಕು, ನನ್ನ ಕುಟುಂಬವನ್ನು ಪೋಷಣೆ ಮಾಡಬೇಕು ಎನ್ನುತ್ತಾರೆ. ನನಗೆಲ್ಲಿ ಸಮಯವಿದೆ? ಬೆಳಗ್ಗೆ ಎದ್ದ ತಕ್ಷಣ ಹೋಗಬೇಕು. ರಾತ್ರಿ ಯಾವಾಗಲೋ ಬರಬೇಕು. ಇವನ್ನೆಲ್ಲಾ ಯಾವಾಗ ಮಾಡಲಿ? ಎನ್ನುತ್ತಾರೆ.

ಸ್ತ್ರೀಯರಾದರೇ ನಾನು ಸಂಸಾರ ನೋಡಿಕೊಳ್ಳಬೇಕು, ಮನೆ ಕೆಲಸಗಳನ್ನು ನೋಡಿಕೊಳ್ಳಬೇಕು, ಇವೆಲ್ಲವೂ ನನ್ನ ಜವಾಬ್ದಾರಿಗಳಲ್ಲವೇ? ವಾಸ್ತವವಾಗಿ ನನಗೆ ಸಮಯವೆಲ್ಲಿದೆ? ಎನ್ನುತ್ತಾರೆ.

ಹಾಗೆ ಎಲ್ಲರೂ ಅವುಗಳನ್ನೇ ಜವಾಬ್ದಾರಿಗಳು ಎಂದುಕೊಳ್ಳುತ್ತಾ, ಅವುಗಳ ಮೇಲೆಯೇ ದೃಷ್ಟಿ ಇಡುತ್ತಾ, ಅವುಗಳನ್ನೇ ಮಾಡುತ್ತಿರುತ್ತಾರೆ. ಆದರೆ ಅವೆಲ್ಲವೂ ನಾನು ದೇಹವೆಂಬ ಭಾವನೆಯಲ್ಲಿದ್ದಾಗ, ಆದರೆ ನಾನು ದೇಹವಲ್ಲ ಆತ್ಮ ಎಂಬುದು ಅರಿವಿಗೆ ಬಂದಾಗ ಜವಾಬ್ದಾರಿಗಳೆಲ್ಲವೂ ಬದಲಾಗಿ ಬಿಡುತ್ತವೆ. ತನ್ನ ಅಂದರೆ ಆತ್ಮದ ಜವಾಬ್ದಾರಿಯೇನೆಂದರೆ? ಆತ್ಮಕ್ಕೆ ಲಾಭವನ್ನುಂಟು ಮಾಡುವುದು, ಆತ್ಮಕ್ಕೆ ಬೇಕಾದದ್ದನ್ನು ಮಾಡುವುದೇ ತನ್ನ ಜವಾಬ್ದಾರಿ, ಅಂದರೆ ಆತ್ಮಜ್ಞಾನವನ್ನು ಸಂಪಾದಿಸುವುದೇ ತನ್ನ ಜವಾಬ್ದಾರಿ ಎಂದು ಅರ್ಥವಾಗುತ್ತದೆ. ಆದ್ದರಿಂದ ಆತ್ಮಕ್ಕೆ ಸಂಬಂಧಿಸಿದ ಸಾಧನೆ ಅಂದರೆ ಧ್ಯಾನ ಮಾಡುತ್ತಾರೆ, ಪತ್ರೀಜಿಯವರ ಪುಸ್ತಕಗಳನ್ನು, ಜ್ಞಾನದಿಂದ ತುಂಬಿದ ಪುಸ್ತಕಗಳನ್ನು ಓದುತ್ತಾರೆ, ಆತ್ಮಜ್ಞಾನದ ಸಂದೇಶಗಳನ್ನು ಕೇಳುತ್ತಾರೆ.

ಇವೆಲ್ಲವೂ ಏತಕ್ಕಾಗಿ ಎಂದರೆ? ತಾನು ಆತ್ಮವಾಗಿರುವುದರಿಂದ, ತನಗೆ ಜ್ಞಾನ ಬೇಕಾಗಿರುವುದರಿಂದ, ಆ ಜ್ಞಾನವೇ ತನ್ನೊಂದಿಗೆ ಬರುವುದರಿಂದ, ತನಗೆ ಲಾಭವನ್ನು ಉಂಟು ಮಾಡುವುದರಿಂದ. ಅದಕ್ಕಿಂತ ಮುಂಚೆ ಹಣ ಸಂಪಾದಿಸುವುದು ಪುರುಷನ ಜವಾಬ್ದಾರಿ. ಸಂಸಾರವನ್ನು ನೋಡಿಕೊಳ್ಳುವುದು ಸ್ತ್ರೀಯ ಜವಾಬ್ದಾರಿ. ಆದರೆ ತಾನು ಆತ್ಮ ಎಂದು ಅರ್ಥ ಮಾಡಿಕೊಂಡ ನಂತರ ಜ್ಞಾನ ಸಂಪಾದಿಸುವುದೇ ತನ್ನ ಜವಾಬ್ದಾರಿ ಎಂದು ಅರ್ಥವಾಗುತ್ತದೆ. ಆದ್ದರಿಂದ ಜವಾಬ್ದಾರಿಗಳು ಬದಲಾಗುತ್ತವೆ ಎಂದು ಹೇಳಿಕೊಂಡಿದ್ದೇವೆ.

ಅದೇರೀತಿ ಪ್ರಾಮುಖ್ಯತೆಗಳು ಸಹ ಬದಲಾಗುತ್ತವೆ. ಇದುವರೆಗೂ ದೇಹಕ್ಕೆ ಸಂಬಂಧಿಸಿದವುಗಳಿಗೆ ಪ್ರಾಮುಖ್ಯತೆಯನ್ನು ನೀಡುತ್ತಿದ್ದರು. ಈಗ ಆತ್ಮಕ್ಕೆ ಸಂಬಂಧಿಸಿದವುಗಳಿಗೇ ಪ್ರಾಮುಖ್ಯತೆಯನ್ನು ನೀಡುತ್ತಾರೆ. ನನ್ನ ವಿಷಯವನ್ನು ತೆಗೆದುಕೊಂಡರೆ ಇದುವರೆಗೂ ಮದುವೆಗಳಿಗೆ ತಪ್ಪದೇ ಹೋಗುತ್ತಿದ್ದೇನು. ಆದರೆ ಈಗ ಮದುವೆಗಳಿಗೆ ಹೋಗುವುದನ್ನು ನಿಲ್ಲಿಸಿದ್ದೇನೆ. ಅದೇ ರೀತಿ ಚಿಕ್ಕ ಚಿಕ್ಕ ಫಂಕ್ಷನ್ಸ್ ಅಂದರೆ ಬರ್ತಡೇ ಫಂಕ್ಷನ್ಸ್, ಹೆಣ್ಣು ಮಕ್ಕಳು ವಯಸ್ಸಿಗೆ ಬರುವುದು, ನಿನ್ನ ಹಲವಾರು ವಿಧದ ಫಂಕ್ಷನ್ ಗಳಿಗೆ ಹೋಗುತ್ತಿದ್ದೆನು, ಆದರೆ ಈಗ ಎಲ್ಲವನ್ನೂ ನಿಲ್ಲಿಸಿದ್ದೇನೆ. ಕಾರಣ

ಸಮಯ ವ್ಯರ್ಥವೆಂದೇ. ಅದಕ್ಕೆ ಬದಲಾಗಿ ಎಲ್ಲಿಗಾದರೂ ಹೋಗಿ ಜ್ಞಾನದ ಬಗ್ಗೆ ಕ್ಲಾಸ್ ಹೇಳಿದರೆ? ನಮ್ಮ ಜ್ಞಾನ ಹೆಚ್ಚುತ್ತದೆ ಅಲ್ಲವೇ? ಅಗತ್ಯವಿಲ್ಲದ್ದಕ್ಕೆ ಹೋಗಿ ನಾಲ್ಕೈದು ಗಂಟೆಗಳು ವೇಸ್ಟ್ ಮಾಡಿಕೊಳ್ಳುವ ಬದಲು ಮನೆಯಲ್ಲಿ ಕುಳಿತುಕೊಂಡು ಎರಡು ಗಂಟೆಗಳು ಧ್ಯಾನ ಮಾಡಬಹುದಲ್ಲವೇ? ಎಂದು ಅವುಗಳಿಗೇ ಪ್ರಾಮುಖ್ಯತೆಯನ್ನು ನೀಡುತ್ತಿದ್ದೇನೆ.

ಆದ್ದರಿಂದ ನಾನು ಆತ್ಮವೆಂಬ ಅರಿವು ಇರುವವನು ದೇಹಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಪ್ರಾಮುಖ್ಯತೆಯನ್ನು ನೀಡುವುದಿಲ್ಲ, ಆತ್ಮಕ್ಕೆ ಸಂಬಂಧಿಸಿದವುಗಳಿಗೇ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಅಂದರೆ ಮೂರು ದಿನದ ಧ್ಯಾನದ ಕಾರ್ಯಕ್ರಮಗಳು ಇಂತಹವೇನಾದರೂ ನಡೆಯುತ್ತಿರುವಾಗ ಮದುವೆಗಳಿದ್ದರೂ ಸಹ ಅವುಗಳನ್ನು ಪಕ್ಕಕ್ಕಿಟ್ಟು, ಭೀಮವರಂನ ಮೂರು ದಿನದ ಕ್ಲಾಸಿಗೆ ಖಚಿತವಾಗಿ ಹೋಗುತ್ತಾರೆ.

ಏಕೆಂದರೆ? ಭೀಮವರಂಗೆ ಬಂದರೆ ಆತ್ಮಕ್ಕೆ ಪ್ರಾಮುಖ್ಯತೆ ನೀಡಿದಂತೆ ಆಗುತ್ತದೆ. ಬೇರೆ ಕಾರ್ಯಕ್ರಮಗಳಿಗೆ ಹೋದರೆ ದೇಹಕ್ಕೆ ಪ್ರಾಮುಖ್ಯತೆ ನೀಡಿದಂತೆ. ಮರಣಿಸುವುದಕ್ಕೆ ಮುಂಚೆ ಮರಣಿಸಿದವರಿಗೆ ಹಾಗೆ ಮಾಡುವ ಸೇವೆಗಳು ಬಹಳಷ್ಟು ಬದಲಾಗುತ್ತವೆ. ಆದ್ದರಿಂದ ದೇಹಕ್ಕೆ ಲಾಭವನ್ನುಂಟು ಮಾಡುವ ಸೇವೆಗಳಿಗೆ ಪ್ರಾಮುಖ್ಯತೆ ನೀಡುವುದಿಲ್ಲ, ಆತ್ಮಕ್ಕೆ ಲಾಭವನ್ನುಂಟು ಮಾಡುವ ಸೇವೆಗಳಿಗೇ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಹಾಗೆಯೇ ಸಮಯ ಹಣ ಮಾತುಗಳು ಎಲ್ಲವನ್ನೂ ಆತ್ಮಕ್ಕೆ ಪ್ರಾಮುಖ್ಯತೆ ನೀಡಿ ಮಾಡುತ್ತಾರೆ. ಅದಕ್ಕೆ ಸಾವಿನ ನಂತರ ಏನು ನಡೆಯುತ್ತದೆ ಎಂದು ಮರಣಿಸುವುದಕ್ಕೆ ಮುಂಚೆಯೇ ಅರ್ಥ ಮಾಡಿಕೊಳ್ಳಬೇಕು ಎಂದು ಹಿರಿಯರು ಹೇಳುತ್ತಾರೆ.

ನನ್ನ ಜೀವನದಲ್ಲಿಯೂ ಸಹ ಇದೇ ನಡೆಯಿತು. ನಾನು ದೇಹವಲ್ಲ ಆತ್ಮ ಎಂದು ತಿಳಿದುಕೊಂಡ ನಂತರ, ಪತ್ರೀಜಿಯವರ ಪರಿಚಯವಾಗುವುದಕ್ಕೆ ಮುಂಚೆ ನಾನು ಮಾಡುತ್ತಿದ್ದ ರೈಸ್ ಮಿಲ್ ವ್ಯಾಪಾರವನ್ನು ನಿಲ್ಲಿಸಿದೆ. ಹಾಗೆಯೇ ಉಚಿತ ಹೋಮಿಯೋಪತಿ ಆಸ್ಪತ್ರೆಯನ್ನು ಸಹ ಮುಚ್ಚಿದೆನು. ಹಾಗೆಯೇ ನಮ್ಮ ಮೇಡಂ ಪ್ರತಿದಿನವೂ 200, 300 ಜನ ಹೆಣ್ಣು ಮಕ್ಕಳಿಗೆ ಟ್ರೈನಿಂಗ್ ಸೆಂಟರ್ ಅನ್ನು ಸ್ಥಾಪಿಸಿ ಹಲವು ರೀತಿಯ ವಿದ್ಯೆಗಳನ್ನು ಉಚಿತವಾಗಿ ಕಲಿಸಿ ಅವರ ಕಾಲುಗಳ ಮೇಲೆ ಅವರು ನಿಲ್ಲುವಂತೆ ಮಾಡುತ್ತಿದ್ದರು. ಇಬ್ಬರೂ ಮೂವರು ಟೀಚರ್ ಗಳನ್ನು ನೇಮಿಸಿಕೊಂಡು ಸಂಬಳವನ್ನು

ನೀಡುತ್ತಾ ಉಚಿತವಾಗಿ ಎಲ್ಲವನ್ನು ಹೇಳಿಕೊಡುತ್ತಿದ್ದರು. ಆದರೆ ಈಗ ಎಲ್ಲವನ್ನು ನಿಲ್ಲಿಸಿದ್ದಾರೆ. ಕಾರಣ ಅವೆಲ್ಲವೂ ದೇಹಕ್ಕೆ ಸಂಬಂಧಿಸಿದ ಸೇವೆಗಳಾಗಿರುವುದರಿಂದ, ದೇಹಕ್ಕೆ ಲಾಭವನ್ನು ಉಂಟು ಮಾಡುವುದರಿಂದ.

ಈಗ ಅವರು ಆತ್ಮದ ಸೇವೆಗಳಿಗೆ ಪ್ರಾಮುಖ್ಯತೆಯನ್ನು ನೀಡುತ್ತಿದ್ದಾರೆ. ಅಂದರೆ ಆತ್ಮಕ್ಕೆ ಸಂಬಂಧಿಸಿದ ಧ್ಯಾನದ ತರಗತಿಗಳಿಗೆ ಹೋಗುತ್ತಿದ್ದಾರೆ, ಎಲ್ಲಾ ಕಡೆಗಳಲ್ಲಿಯೂ ಕ್ಲಾಸ್ ಗಳನ್ನು ಹೇಳುತ್ತಿದ್ದಾರೆ. ಇಲ್ಲಿಯವರೆಗೆ ಬೇರೆಯ ಪುಸ್ತಕಗಳನ್ನು ಓದುತ್ತಿದ್ದರು, ಈಗ ಆಧ್ಯಾತ್ಮಿಕ ಪುಸ್ತಕಗಳನ್ನು ಮಾತ್ರ ಓದುತ್ತಿದ್ದಾರೆ. ಇಲ್ಲಿಯವರೆಗೆ ಬೇರೆ ಯಾವ ಉಪನ್ಯಾಸಗಳನ್ನು ಕೇಳುತ್ತಿದ್ದರು, ಈಗ ಪತ್ರೀಜಿಯವರ ಜ್ಞಾನಕ್ಕೆ ಸಂಬಂಧಿಸಿದ ಸಂದೇಶಗಳನ್ನು ಕೇಳುತ್ತಿದ್ದಾರೆ. ಹೀಗೆ ಅವರ ಕೆಲಸಗಳು ಪ್ರಾಮುಖ್ಯತೆಗಳು ಸಂಪೂರ್ಣವಾಗಿ ಬದಲಾಗಿವೆ.

ಹಾಗೆಯೇ ನಾನು ಆತ್ಮ ಎಂಬ ಅರಿವು ನಿಮಗಿದ್ದರೇ! ಖಂಡಿತವಾಗಿ ನಿಮ್ಮ ಪ್ರಾಮುಖ್ಯತೆಗಳು ಸಹ ಬದಲಾಗುತ್ತವೆ. ನಿಮ್ಮ ಪ್ರಾಮುಖ್ಯತೆಗಳು ಬದಲಾಗಿಲ್ಲ ಎಂದರೆ ನೀವು ಇನ್ನೂ ಈ ದೇಹ ನಾನು ಎಂದು ಭಾವಿಸುತ್ತಿರುವಂತೆಯೇ ಲೆಕ್ಕ. ಈಗ ನಮ್ಮ ಸೊಸೈಟಿಯಲ್ಲಿಯೂ ಸಹ ಬಹಳಷ್ಟು ಜನ ದೇಹಕ್ಕೋಸ್ಕರ ಪ್ರಾಮುಖ್ಯತೆಯನ್ನು ನೀಡುವವರೇ ಇದ್ದಾರೆ. ಧ್ಯಾನ ಮಾಡುವವರಲ್ಲಿ ಹಲವರು ರೋಗಗಳನ್ನು ಕಡಿಮೆ ಮಾಡಿಕೊಂಡರೆ ಸಾಕು ಎಂದುಕೊಳ್ಳುತ್ತಾರೆ.

ಆದರೆ ಈ ಜ್ಞಾನಮಾರ್ಗಕ್ಕೆ ಬಂದವರು, ನನ್ನ ಆತ್ಮ ಎಂಬ ಅರಿವಿನಲ್ಲಿ ಇರುತ್ತಾರೆ, ಎಲ್ಲವನ್ನೂ ತಿಳಿದುಕೊಳ್ಳುತ್ತಾರೆ. ಆದ್ದರಿಂದ ಅವರ ಆಲೋಚನಾ ವಿಧಾನವು ಸಹ ಬದಲಾಗುತ್ತದೆ. ಅದಕ್ಕೆ ಮುನ್ನ ಆಲೋಚಿಸುತ್ತಿದ್ದ ಆಲೋಚನೆಗಳು ಒಂದು ರೀತಿಯಾಗಿ ಇರುತ್ತವೆ, ಈಗ ಆಲೋಚಿಸುವ ಆಲೋಚನೆಗಳು ಇನ್ನೊಂದು ರೀತಿಯಲ್ಲಿ ಇರುತ್ತವೆ. ಗಮನಿಸಿದರೆ ಸಂಪೂರ್ಣವಾಗಿ ಭಿನ್ನವಾಗಿರುತ್ತವೆ.

ಅಷ್ಟೇ ಅಲ್ಲ "ಮರಣಿಸುವುದಕ್ಕೆ ಮುಂಚೆಯೇ ಮರಣಿಸಿದವರು" ದೇಹ ಸಂಬಂಧವಾದ ನೆಂಟರು, ಬಂಧುಗಳು ಬಗ್ಗೆ ಅಲ್ಲದೇ ಆತ್ಮ ಬಂಧುಗಳೊಂದಿಗೆ ಸಾಂಗತ್ಯ ಮಾಡಲು ಪ್ರಾಮುಖ್ಯತೆ ನೀಡುತ್ತಾರೆ. ಹಾಗೆಯೇ ಜ್ಞಾನವನ್ನು ಹೇಗೆ ಹೆಚ್ಚಿಸಿಕೊಳ್ಳಬೇಕು? ವಾಸ್ತವವಾಗಿ ನನ್ನ ಕೆಲಸಗಳೇನು? ನಾನೇನು ಮಾಡಬೇಕು? ಎಂದು ಆಲೋಚಿಸುತ್ತಾರೆ. ಹಾಗೆ ದೇಹಕ್ಕೆ ಸಂಬಂಧಿಸಿದವುಗಳಿಗೆ ಪ್ರಾಮುಖ್ಯತೆಯನ್ನು ಕಡಿಮೆ ಮಾಡುತ್ತಾರೆ. ಆತ್ಮಕ್ಕೆ ಸಂಬಂಧಿಸಿದ ಕೆಲಸಗಳಿಗೆ ಪ್ರಾಮುಖ್ಯತೆಯನ್ನು ಹೆಚ್ಚಿಸುತ್ತಾರೆ.

ಅಷ್ಟೇ ಅಲ್ಲ ಮರಣಿಸಿದ ನಂತರ ಏನು ನಡೆಯುತ್ತದೆ ಎಂದು ತಿಳಿದುಕೊಂಡರೆ, ಏನು ಮಾಡಬಾರದು ಎಂದು ತಿಳಿಯುತ್ತದೆ. ಏನು ಮಾಡಬೇಕು ಎಂಬುದು ಸಹ ತಿಳಿಯುತ್ತದೆ. ನಾನು ಸಹ ಪತ್ರೀಜಿಯವರ ಮೂಲಕ ವಿಷಯಗಳನ್ನು ಬಹಳಷ್ಟು ತಿಳಿದುಕೊಂಡಿದ್ದೇನೆ. ಅದಕ್ಕೆ ಮುಂಚೆ ದೇಹಕ್ಕೆ ಸಂಬಂಧಿಸಿದ ಕೆಲಸಗಳನ್ನೇ ಮಾಡುತ್ತಿದ್ದೆನು, ಆದರೆ ಈಗ ಆತ್ಮಕ್ಕೆ ಸಂಬಂಧಿಸಿದ ಕೆಲಸಗಳನ್ನೇ ಮಾಡುತ್ತಿದ್ದೇನೆ.

ಹಾಗೆಯೇ ಇನ್ನು ಬಹಳಷ್ಟು ವಿಷಗಳನ್ನು ತಿಳಿದುಕೊಳ್ಳುತ್ತಾರೆ. ಯಾವುದೇ ಪ್ರಾಣಿಯನ್ನಾಗಲೀ, ಯಾರನ್ನಾಗಲೀ ಹಿಂಸಸಬಾರದು ಎಂದು ತಿಳಿದುಕೊಳ್ಳುತ್ತಾರೆ. ದೇಹ ನಾನು ಎಂದುಕೊಂಡಾಗ ಎಲ್ಲವೂ ಬೇರೆ, ಬೇರೆ ಎಂದುಕೊಳ್ಳುತ್ತಾರೆ. ಆ ಕೋಳಿ ಬೇರೆ, ಮೇಕೆಗಳು ಬೇರೆ ಎನ್ನುವಂತಹ ಭಾವನೆ ಇರುತ್ತದೆ. ಆದ್ದರಿಂದ ಅವುಗಳನ್ನು ತಿನ್ನುತ್ತಾ ಮಾಡಬಾರದ ಪಾಪಗಳನ್ನು ಮಾಡುತ್ತಾರೆ. ಆದರೆ ನಾನು ಆತ್ಮ ಎಂದು ತಿಳಿದುಕೊಂಡಾಗ ಆ ಪ್ರಾಣಿಗಳು ಸಹ ಆತ್ಮಗಳೇ ಎಂಬ ತಿಳುವಳಿಕೆ ಬರುತ್ತದೆ. ಆದ್ದರಿಂದ ಅವುಗಳ ತಂಟೆಗೆ ಹೋಗುವುದಿಲ್ಲ, ಅವುಗಳನ್ನು ಸಾಯಿಸುವುದಿಲ್ಲ, ಮಾಂಸವನ್ನು ತಿನ್ನುವುದಿಲ್ಲ. ಹಾಗೆಯೇ ಬೆಳ್ಳುಳ್ಳಿಯನ್ನು ಬಳಸಬಾರದು ಎಂದು ತಿಳಿಯುತ್ತದೆ, ಮಾಂಸಾಹಾರವನ್ನು ತಯಾರಿಸುವ ಸಮಾರಂಭಗಳಿಗೆ ಹೋಗಬಾರದೆಂದು, ವ್ಯರ್ಥವಾದ ಮಾತುಗಳನ್ನು ಮಾತನಾಡಬಾರದು ಎಂದು, ಇತರರ ವ್ಯವಹಾರಗಳಲ್ಲಿ ತಲೆ ಹಾಕಬಾರದು ಎಂದು, ಸಾಧ್ಯವಾದಷ್ಟು ಮೌನ ವಹಿಸಬೇಕೆಂದು ತಿಳಿಯುತ್ತಾರೆ. ಹಾಗೆ ಅವರಿಗೆ ಸಂಪೂರ್ಣವಾಗಿ ಜೀವನವೇ ಬದಲಾಗುತ್ತದೆ.

ಆದರೆ ದೇಹ ನಾನು ಎಂದುಕೊಂಡಾಗ ಹಲವಾರು ತಪ್ಪುಗಳನ್ನು, ಪಾಪಗಳನ್ನು ಮಾಡುತ್ತಾರೆ, ಇತರರನ್ನು ದೂಷಣೆ ಮಾಡುವುದು, ವಿಮರ್ಶಿಸುವುದು, ನಿಂದಿಸುವುದು, ಅವಮಾನಿಸುವುದು, ಅಸೂಯೆ ಪಡುವುದು ಇಂತಹವುಗಳನ್ನು ಮಾಡುತ್ತಾರೆ.

ಆದರೆ ನಾನು ಆತ್ಮ ಎಂಬುದನ್ನು ತಿಳಿದುಕೊಂಡಾಗ ಎಲ್ಲವೂ ನಾನೇ, ನಾನೇ ಎಲ್ಲಾ ಎಂದು ತಿಳಿದುಕೊಂಡಾಗ ಇನ್ನು ಯಾರನ್ನು ನಿಂದಿಸುತ್ತಾರೆ? ಯಾರನ್ನು ಅವಮಾನಿಸುತ್ತಾರೆ? ಯಾರನ್ನು ಮೋಸ ಮಾಡುತ್ತಾರೆ? ಯಾರನ್ನು ಹಿಂಸಿಸುತ್ತಾರೆ? ಎಲ್ಲಾ ನೀನೇ ಅಲ್ಲವೇ... ಏನೂ ಮಾಡುವುದಿಲ್ಲ. ಸಂಪೂರ್ಣವಾಗಿ ಬದಲಾಗುತ್ತಾರೆ.

ಆದ್ದರಿಂದ ಮಾಡಬೇಕಾದವುಗಳನ್ನು ಮಾಡುವುದರಿಂದ ಎಲ್ಲವೂ ಒಳ್ಳೆಯದೇ ಆಗುತ್ತದೆ, ಯಾವ ನಷ್ಟವೂ ಆಗುವುದಿಲ್ಲ. ಭವಿಷ್ಯತ್ತು ಸಂಪೂರ್ಣವಾಗಿ ಬದಲಾಗುತ್ತದೆ.

ಪ್ರಸ್ತುತ ನೀವು ಹೇಗಿದ್ದರೂ... ಭವಿಷ್ಯತ್ತು ಮಾತ್ರ ತುಂಬಾ ಅನುಕೂಲಕರವಾಗಿ ಮಾರ್ಪಾಡಾಗುತ್ತದೆ. ಆ ಸಮಯ ಬರುವುದಕ್ಕೆ ಸರಿಯಾಗಿ ನಿಮ್ಮಲ್ಲಿ ತಿಳಿಯದ ಬದಲಾವಣೆಗಳು ನಿಮಗೇ ವಿಚಿತ್ರವಾಗಿ ಕಾಣಿಸುತ್ತವೆ. ಏನಿದು ನನ್ನ ಜೀವನ ಇಷ್ಟು ಬದಲಾವಣೆಯಾಗಿದೆ ಅಂದುಕೊಳ್ಳುತ್ತಾರೆ.

ಅಷ್ಟೇ ಅಲ್ಲ "ಮರಣಿಸುವುದಕ್ಕೆ ಮುಂಚೆಯೇ ಮರಣಿಸಬೇಕು"ಎಂಬುದನ್ನು ಅರ್ಥ ಮಾಡಿಕೊಂಡರೆ ಇನ್ನೊಂದು ಲಾಭವೇನೆಂದರೆ? ಕೆಲವು ನೂರು ವರ್ಷಗಳಷ್ಟೇ ಅಲ್ಲ ಸಾವಿರ ವರ್ಷಗಳ ಸಮಯ ಸಹ ನಮಗೆ ವ್ಯರ್ಥವಾಗದಂತೆ ಇರುತ್ತದೆ. ಅಂದರೆ ಜನ್ಮಗಳು ಕಡಿಮೆಯಾಗುತ್ತವೆ. ಏಕೆಂದರೆ? ನೋಡಿ ನಾನು ದೇಹ ಎಂಬ ಭಾವನೆಯಿಂದ ಆ ಜನ್ಮ ಪೂರ್ತಿ ದೇಹವೆಂಬಂತೆ ಜೀವಿಸುತ್ತಾರೆ. ಆತ್ಮಕ್ಕೋಸ್ಕರ ಆತ್ಮದ ಲಾಭಕೋಸ್ಕರ ಸ್ವಲ್ಪವೂ ಸಹ ಏನನ್ನೂ ಮಾಡುವುದಿಲ್ಲ. ಆತ್ಮವನ್ನು ಸಂಪೂರ್ಣವಾಗಿ ನಿರ್ಲಕ್ಷ್ಯ ಮಾಡುತ್ತಾರೆ. ಹಾಗೆ ಆತ್ಮವನ್ನು ಹಿಡಿಸಿಕೊಳ್ಳದಂತೆ, ನಿರ್ಲಕ್ಷ್ಯ ಮಾಡಿದವರನ್ನು "ಆತ್ಮದ ಹಂತಕರು" (ಕೊಲೆಗಾರರು) ಎನ್ನುತ್ತಾರೆ.

ನೋಡಿ ಸಹಜವಾಗಿ ತನಗೆ ತಾನೇ ಶರೀರವನ್ನು ಛಿದ್ರ ಮಾಡಿಕೊಂಡರೆ? "ಆತ್ಮಹತ್ಯೆ" ಎನ್ನುತ್ತಾರೆ. ಬೆಂಕಿಯಲ್ಲಿ ಬೀಳುವುದು, ರೈಲಿನ ಕೆಳಗೆ ಬೀಳುವುದು, ನೇಣು ಹಾಕಿಕೊಳ್ಳುವುದು ಇಂತಹವು. ಆದರೆ ಶರೀರವನ್ನು ಇತರರು ಛಿದ್ರ ಮಾಡಿದರೆ "ಹತ್ಯೆ" ಎನ್ನುತ್ತಾರೆ. ಆದರೆ ಜೀವನಪರ್ಯಂತ ಜೀವಿಸಿದರೂ ವಾಸ್ತವವಾಗಿ ಆತ್ಮವನ್ನು ಹಿಡಿಸಿಕೊಳ್ಳದಿದ್ದರೇ "ಆತ್ಮದ ಹಂತಕ" ಎಂದು ಲೆಕ್ಕಿಸುತ್ತಾರೆ. ಹಿಡಿಸಿಕೊಳ್ಳದಿದ್ದರೆ – ನಿರ್ಲಕ್ಷಿಸಿದರೆ. "ಆತ್ಮದ ಹಂತಕ" ಎಂದು ಪರಿಗಣಿಸುತ್ತಾರೆ.

ವಾಸ್ತವವಾಗಿ ಆತ್ಮವಾದ ತಾನು ಭೂಮಿಯ ಮೇಲೆ ಏಕೆ ಬಂದಿದ್ದಾನೆ? ಅವನು ಮಾಡಬೇಕಾದರೆ ಏನು? ಅಂದರೆ ಆತ್ಮವಾದ ತಾನು ಆತ್ಮದ ಲಾಭಕ್ಕಾಗಿ ಬಂದಿದ್ದಾನೆ, ಆತ್ಮಕ್ಕೆ ಲಾಭವನ್ನುಂಟು ಮಾಡುವ ಕೆಲಸಗಳನ್ನು ಮಾಡಲು ಬಂದಿದ್ದಾನೆ. ಆದರೆ ಜನ್ಮ ಪೂರ್ತಿ ಆತ್ಮಕ್ಕಾಗಿ ಏನೂ ಮಾಡಲಿಲ್ಲ. ಆತ್ಮಕ್ಕೆ ಯಾವುದೇ ಲಾಭವನ್ನು ಉಂಟು ಮಾಡಲಿಲ್ಲ, ಎಲ್ಲಾ ದೇಹಕ್ಕೇ ಮಾಡಿದ್ದಾನೆ. ಅಂತಹವರನ್ನೇ ಆತ್ಮದ ಹಂತಕರು ಎನ್ನುತ್ತಾರೆ.

ಹಾಗಾದರೆ ಆ ಜನ್ಮವೆಲ್ಲಾ ವ್ಯರ್ಥವೇ ಅಲ್ಲವೇ? ಇಲ್ಲಿ ಇನ್ನೊಂದನ್ನು ಸಹ ನೆನಪಿಟ್ಟುಕೊಳ್ಳಬೇಕು.. ಹೀಗೆ ಜನ್ಮ ಮುಗಿದ ತಕ್ಷಣವೇ ಪುನಃ ಹಾಗೆ ಜನ್ಮ ಬಂದುಬಿಡುತ್ತದೆ ಎಂದು ಕೆಲವರು ಅಂದುಕೊಳ್ಳುತ್ತಾರೆ.

ಆದರೆ ಪುನಃ ಜನ್ಮ ಬರಬೇಕೆಂದರೇ? ಕೆಲವು ಸಾವಿರ ವರ್ಷಗಳು ಹಿಡಿಸಬಹುದು, ಇನ್ನು ಹೆಚ್ಚು ಸಮಯ ಹಿಡಿಸಬಹುದು. ಸಹಜವಾಗಿ ಕಡಿಮೆ ಸಮಯದಲ್ಲಿ ಒಂದು ಜನ್ಮದಿಂದ ಇನ್ನೊಂದು ಜನ್ಮ ಎಂಬುದು ಬಹಳ ಕಡಿಮೆ ಸಂದರ್ಭಗಳಲ್ಲಿ ಬರುತ್ತದೆ, ಆದರೆ ಬಹಳಷ್ಟು ಸಂದರ್ಭಗಳಲ್ಲಿ ಬಹಳ ಸಮಯ ಹಿಡಿಸುತ್ತದೆ.

ಏಕೆಂದರೆ ಭೂಮಿಯ ಮೇಲೆ ಅವರಿಗೆ ಅನುಕೂಲವಾದ ಜನ್ಮವನ್ನು ನೀಡಲು ಅರ್ಹತೆ ಹೊಂದಿದ ತಾಯಂದಿರು ಅಂದರೆ ಸ್ತ್ರೀಯರು ಬಹಳ ಕಡಿಮೆ ಜನ ಇರುತ್ತಾರೆ. ಆದರೆ ಮೇಲಿನ ಲೋಕಗಳಲ್ಲಿ ಜನ್ಮ ತೆಗೆದುಕೊಳ್ಳಬೇಕೆಂದು ನೋಡುತ್ತಿರುವಂತಹ ಕೋಟ್ಯಾನುಕೋಟಿ ಆತ್ಮಗಳಿವೆ. ಆದ್ದರಿಂದ ಜನ್ಮ ಎಂಬುದು ಅಷ್ಟು ಸುಲಭವಾಗಿ ಬರುವುದಿಲ್ಲ ಎಂದು ತಿಳಿದುಕೊಳ್ಳಬೇಕು.

ಪತ್ರೀಜಿಯವರು ಏನು ಹೇಳುತ್ತಿದ್ದರೆಂದರೆ? ನಾನು 2500 ವರ್ಷಗಳ ಹಿಂದೆ ಬುದ್ಧನ ಹತ್ತಿರ ಆನಂದ ಎಂಬ ಶಿಷ್ಯನಾಗಿದ್ದೆನು. ನಂತರದ ಜನ್ಮದಲ್ಲಿ ಬೆಂಜಮಿನ್ ಫ್ರಾಂಕ್ಲಿನ್ ಆಗಿ ಅಮೆರಿಕಾದಲ್ಲಿ, ಇನ್ನೊಂದು ಜನ್ಮದಲ್ಲಿ ಒರಿಸ್ಸಾದಲ್ಲಿ, ಇನ್ನೊಂದು ಜನ್ಮದಲ್ಲಿ ಹಜರತ್ ಇನಾಯಕ್ ಖಾನ್ ಆಗಿ ಹೈದರಾಬಾದಲ್ಲಿ ಇದ್ದೆನು. ಈಗ ಪತ್ರೀಜಿಯಾಗಿ ಬೋಧನ್ ಅಲ್ಲಿ ಜನ್ಮ ತೆಗೆದುಕೊಂಡಿದ್ದೇನೆ ಎಂದು ಹೇಳಿದರು.

ಆಗ ಪತ್ರೀಜಿಯವರನ್ನು ನಾನು ಕೇಳಿದೆನು, ನೀವು ಬುದ್ಧನ ಹತ್ತಿರ ಆನಂದನಾಗಿ ಇದ್ದದ್ದು 2500 ವರ್ಷಗಳ ಹಿಂದೆ ಅಲ್ಲವೇ? ಅಲ್ಲಿಂದ ನೋಡಿದರೆ ಈಗ ನೀವು ಜನ್ಮ ತೆಗೆದುಕೊಂಡು 2500 ವರ್ಷಗಳಾಯಿತು. ಇಷ್ಟು ಸಮಯ ಏಕೆ ಹಿಡಿಸಿತು? ಎಂದು ಕೇಳಿದೆ. ಆಗ ಅವರು ಏನು ಹೇಳಿದರೆಂದರೆ? ನೀನೇನು ಬಹಳಷ್ಟು ಸಮಯ ಹಿಡಿದಿದೆ ಎಂದು ತಿಳಿದುಕೊಂಡಿದ್ದೀಯಾ! ನೀನೇ ಮೇಲೆ ಹೋಗಿ ನೋಡಿದರೆ ಇದೆಲ್ಲವೂ ಸಮುದ್ರದಲ್ಲಿ ಕಾಗೆಯ ವ್ಯರ್ಥಕ್ಕೆ (ಕಾಗೆಯ ಮಲ) ಸಮಾನ ಎಂದರು.

ಅದರ ಅರ್ಥ ನಿನಗೆ ಭೂಮಿಯ ಮೇಲೆ ನೂರಾರು ವರ್ಷಗಳು ಹಿಡಿಸಿದಂತೆ ಅನಿಸಬಹುದು, ಆದರೆ ಮೇಲಿನ ಲೋಕಗಳಿಂದ ನೋಡಿದರೆ ಇದು ದಿನಗಳಿಗೆ ಸಮಾನ. ದೊಡ್ಡ ಲೆಕ್ಕವೇನೂ ಅಲ್ಲ ಎಂದು ಹೇಳಿದರು.

ಆಗ ನನಗೆ ಜನ್ಮಗಳು ಎನ್ನುವಂತಹವು ಸುಲಭವಾಗಿ ಬರುವುದಿಲ್ಲ ಎಂಬ ವಿಷಯ ಅರ್ಥವಾಯಿತು. ಹಾಗಾದರೆ ಬಂದ ಜನ್ಮವನ್ನು ವ್ಯರ್ಥ ಮಾಡಿದರೆ ಎಷ್ಟು ಜೀವನವನ್ನು ನಾವು ವ್ಯರ್ಥ ಮಾಡಿಕೊಳ್ಳುತ್ತಿರುವಂತೆ? ಆಲೋಚಿಸಿ. ಅಷ್ಟೇ ಅಲ್ಲ ಮರಣಿಸಿದ ನಂತರ ಅವರನ್ನು ಕರೆದುಕೊಂಡು ಹೋಗಲು ಸಹಾಯಕನು ಬರುತ್ತಾರೆ ಎಂದು ತಿಳಿದುಕೊಂಡೆವು. ಅದೇರೀತಿ ಎಲ್ಲದರ ಮೇಲೆ ಮಮಕಾರ ಇರುವವನು, ಅವನನ್ನು ಕರೆದುಕೊಂಡು ಹೋಗಲು ಬಂದ ಸಹಾಯಕರೊಂದಿಗೆ ಹೋಗುವುದಿಲ್ಲ, ಅಲ್ಲಿಯೇ ಇದ್ದುಬಿಡುತ್ತಾರೆ, ಪ್ರೇತಾತ್ಮ ಆಗಿಬಿಡುತ್ತಾರೆ ಎಂದು ತಿಳಿದುಕೊಂಡೆವು.

ಅಷ್ಟೇ ಅಲ್ಲ, ಸಹಾಯಕರು ಹೊರಟುಹೋದ ನಂತರ, ಅವರನ್ನು ಕರೆದುಕೊಂಡು ಹೋಗಲು ತೆರೆದ ಆತ್ಮದ್ವಾರಗಳು ಮುಚ್ಚಿಕೊಳ್ಳುತ್ತವೆ, ಅವರು ಮೇಲೆ ಹೋಗಲಾರದೇ, ಇಲ್ಲಿ ಅಂದರೆ ಭೂಮಿಯ ಮೇಲೆ ಏನು ಮಾಡಬೇಕೆಂದು ತಿಳಿಯದೇ, ಕೆಲವು ನೂರು, ಸಾವಿರ ವರ್ಷಗಳವರೆಗೆ ಇದ್ದುಬಿಡುತ್ತಾರೆ. ಏಕೆಂದರೆ? ಅವರ ಕುಟುಂಬದ ಸದಸ್ಯರು ಅವರ ಬಗ್ಗೆ ಹಿಡಿಸಿಕೊಳ್ಳುವುದಿಲ್ಲ. ಹಾಗೆ ಭೂಮಿಯ ಮೇಲೆ ಏನೂ ಮಾಡಲಾರದೇ, ಮರಗಳ ಮೇಲೆ, ಗೋಡೆಗಳ ಮೇಲೆ, ಸೇತುವೆಗಳ ಮೇಲೆ ಕುಳಿತುಕೊಂಡು ದಿಕ್ಕುಗಳನ್ನು ನೋಡುತ್ತಾರೆ. ಮೇಲಿನ ಲೋಕಗಳಿಗೆ ಹೋಗುವ ದಾರಿ ತಿಳಿಯುವುದಿಲ್ಲ, ಹಾಗೆ ಪ್ರೇತಾತ್ಮ ಅಂದರೆ ದೆವ್ವವಾಗಿಯೇ ಇದ್ದುಬಿಡುತ್ತಾರೆ.

ಆದರೆ ಯಾವಾಗಲೋ ಅವನಿಗೆ ಅನಿಸುತ್ತದೆ. ಇನ್ನು ನಾನು ಇಲ್ಲಿ ಇರಲಾರೆನು, ಮೇಲಿನ ಲೋಕಗಳಿಗೆ ಹೊರಟು ಹೋಗುತ್ತೇನೆ ಎಂಬ ಬಲವಾದ ಆಕಾಂಕ್ಷೆ ಉಂಟಾದಾಗ, ಮೇಲಿನ ಲೋಕಗಳಿಂದ ಯಾರೋ ಒಬ್ಬರು ಬಂದು ಅವನಿಗೆ ದಾರಿ ತೋರಿಸಿ ಕರೆದುಕೊಂಡು ಹೋಗುತ್ತಾರೆ. ಅದಕ್ಕಿಂತಲೂ ಅವನಿಗೆ ಬೇರೇ ಅವಕಾಶವಿಲ್ಲ.

ಅವರಿಗೆ ಕೆಲವು ದಿನಗಳು ಚೆನ್ನಾಗಿಯೇ ಇರುತ್ತದೆ. ಅಲ್ಲಿಯೇ ತಿರುಗುತ್ತಾ, ಎಲ್ಲರನ್ನು ನೋಡುತ್ತಾ ತನ್ನ ಮನೆಯನ್ನು, ತನ್ನ ಆಸ್ತಿಗಳನ್ನು ನೋಡುತ್ತಾ ಕಾಲ ಕಳೆಯುತ್ತಾರೆ. ಆದರೆ ಎಷ್ಟು ದಿನಗಳು ಇರುತ್ತಾರೆ? ಎಷ್ಟು ದಿನಗಳು ನೋಡುತ್ತಾರೆ? ತಮ್ಮವರೆಲ್ಲರೂ ಅವರ ಕೆಲಸಗಳಲ್ಲಿ ಅವರು ಇರುತ್ತಾರೆ, ನಿಧಾನವಾಗಿ ಇವರನ್ನು ಸಹ ಮರೆತುಬಿಡುತ್ತಾರೆ! ಒಂದು ವೇಳೆ ಅವರು ಇವರನ್ನು ನೆನಪಿಟ್ಟುಕೊಂಡರೂ ಇವರು ಏನು ಮಾಡಬಲ್ಲರು? ಸಮಯವನ್ನು ವ್ಯರ್ಥ ಮಾಡಿಕೊಳ್ಳುವುದನ್ನು ಬಿಟ್ಟರೆ. ಆದರೆ "ಮರಣಿಸುವುದಕ್ಕೆ ಮುಂಚೆಯೇ ಮರಣಿಸಿದರೇ"! ಅಂದರೆ ಸತ್ತುಹೋದ ನಂತರ ಮೇಲಿನ ಲೋಕಗಳಿಗೆ

ಹೋಗಬೇಕೆಂದು ತಿಳಿದುಕೊಂಡರೇ? ಸಹಾಯಕರೊಂದಿಗೆ ಮೇಲಿನ ಲೋಕಗಳಿಗೆ ಹೊರಟು ಹೋದರೇ! ಕೆಲವು ನೂರು ಗಳೇ ಅಲ್ಲ, ಸಾವಿರ ವರ್ಷಗಳಷ್ಟು ಸಮಯವನ್ನು ವ್ಯರ್ಥವಾಗದಂತೆ ನೋಡಿಕೊಳ್ಳಬಲ್ಲರು.

ಆದರೆ ಮರಣದ ನಂತರದ ಬಗ್ಗೆ ತಿಳಿದುಕೊಳ್ಳುವುದರಿಂದ, ಕುಟುಂಬದ ಮೇಲೆ ಅಂದರೆ ಹೆಂಡತಿಯ ಮೇಲೆ, ಗಂಡನ ಮೇಲೆ, ಮಕ್ಕಳ ಮೇಲೆ, ಬಂಧುಗಳ ಮೇಲೆ, ಕೊನೆಗೆ ಹಣದ ಮೇಲೆ, ಸಂಪತ್ತಿನ ಮೇಲಿನ  ಮಮಕಾರ ಹೋಗುತ್ತದೆ. ಸತ್ತುಹೋದ ನಂತರ ಸಹಾಯಕರೊಂದಿಗೆ ಮೇಲಿನ ಲೋಕಗಳಿಗೆ ಹೊರಟುಹೋಗುತ್ತಾರೆ.

ಸಾವಿನ ನಂತರದ ನಡೆಯುವುದರ ಬಗ್ಗೆ ತಿಳುವಳಿಕೆ ಇಲ್ಲದಿದ್ದರೆ? ಬದುಕಿರುವವರು ಮರಣಿಸಿದವರ ಬಗ್ಗೆ ದುಃಖಿಸುತ್ತಾ, ಎಲ್ಲಾ ಕೆಲಸಗಳನ್ನು ಬಿಟ್ಟು ಆತ್ಮವಾದ ತನಗೆ ಮಾಡಿಕೊಳ್ಳಬೇಕಾದ ಕೆಲಸಗಳನ್ನು, ಆತ್ಮಕ್ಕೆ ಲಾಭವನ್ನುಂಟು ಮಾಡುವ ಸಾಧನೆಗಳನ್ನೆಲ್ಲಾ ಬಿಟ್ಟು ಅಳುತ್ತಾ ಕುಳಿತುಕೊಳ್ಳುತ್ತಾರೆ. ಜೀವನಪರ್ಯಂತ ಏಕೆ ಹೀಗಾಯಿತು? ದೇವರು ನನ್ನನ್ನು ಹೀಗೆ ಮಾಡಿದನು? ನಾನು ಬಹಳಷ್ಟು ಪೂಜೆಗಳನ್ನು ಮಾಡಿದೆ, ಆದರೆ ಆತ ನನಗೆ ಇಷ್ಟು ಅನ್ಯಾಯ ಮಾಡಿದನೆಂದು ಯೋಚಿಸುತ್ತಾ ದುಃಖಿಸುತ್ತಾರೆ.

ಅಷ್ಟೇ ಅಲ್ಲ ನನ್ನ ಜೀವನದಲ್ಲಿ ನಾನು ಯಾರಿಗೂ ಅನ್ಯಾಯ ಮಾಡಲಿಲ್ಲ, ನಾನು ಯಾವ ಪಾಪ ಮಾಡಲಿಲ್ಲ. ನನಗೇ ಏಕೆ ಹೀಗಾಯಿತು? ಎಂದು ಆಶ್ಚರ್ಯ ಪಡುತ್ತಾರೆ. ಅದೇ ಸ್ವಲ್ಪ ವಯಸ್ಸಿನಲ್ಲಿರುವವರು ಮರಣಿಸಿದರೇ! ಈ ವಯಸ್ಸಿನಲ್ಲಿ ಹೊರಟು ಹೋದನೆಂದು ಅಳುವುದನ್ನು ಬಿಟ್ಟರೆ ಇನ್ನೇನೂ ಇರುವುದಿಲ್ಲ., ಅವರ ಜೀವನವೆಲ್ಲ ಗೋಳೇ. ಹಣವಿರುತ್ತದೆ, ಎಷ್ಟೋ ಸೌಕರ್ಯಗಳು ಇರುತ್ತವೆ, ಎಲ್ಲವೂ ಇರುತ್ತವೆ, ಆದರೆ ಎಷ್ಟೇ ಇದ್ದರೂ ಗೋಳೇ! ಹೀಗೆ ಇರುವುದಕ್ಕಿಂತ ಸಾಯುವುದೇ ಒಳ್ಳೆಯದು ಎಂದುಕೊಳ್ಳುತ್ತಾರೆ.

ಆದರೆ ನಾನು ಆತ್ಮ ಎಂಬುದನ್ನು ತಿಳಿದುಕೊಂಡರೆ! ಯಾರು ನನಗೆ ಮರಣವಿಲ್ಲ ಎಂಬುದನ್ನು ತಿಳಿದುಕೊಂಡರೆ! ಈ ಕುಟುಂಬದ ಮೇಲೆ, ಹಣದ ಮೇಲೆ, ಸಂಸಾರದ ಮೇಲೆ ಇರುವ ಮಮಕಾರ ಹೋಗುತ್ತದೆ. ಅವರಿಗಾಗಿ ತಪ್ಪುಗಳನ್ನು, ಪಾಪಗಳನ್ನು ಮಾಡುವುದಿಲ್ಲ. ಅವರ ಭವಿಷ್ಯತ್ತನ್ನು ಹಾಳುಮಾಡಿಕೊಳ್ಳುವುದಿಲ್ಲ.

ಆದರೆ ನಾನು ಆತ್ಮ ಎಂಬುದನ್ನು ತಿಳಿದುಕೊಂಡರೆ! ಯಾರನ್ನಾದರೆ ನನ್ನವರು, ನನ್ನವರು ಎಂದುಕೊಳ್ಳುವರೋ ಅವರು ತನ್ನವರಲ್ಲ ಎಂಬುದು ಸಹ ತಿಳಿಯುತ್ತದೆ. ವಾಸ್ತವವಾಗಿ ಅವರಿಗೆ, ತನಗೆ ಸಂಬಂಧವಿಲ್ಲ ಎಂಬ ವಿಷಯ ಸಹ ತಿಳಿಯುತ್ತದೆ.

ಅರ್ಜುನನು ತಿಳಿದುಕೊಂಡನಲ್ಲವೇ? ಅಭಿಮನ್ಯುವಿಗೆ, ತನಗೆ ಸಂಬಂಧ ಇಲ್ಲವೆಂದು. ಶ್ರೀ ಕೃಷ್ಣನಿಂದ ಅರ್ಜುನನ ಅಭಿಮನ್ಯು ಇರುವ ಲೋಕಗಳಿಗೆ ಹೋಗಿ ಅಭಿಮನ್ಯುವನ್ನು ಮಾತನಾಡಿಸಿದರೆ ನೀನು ಯಾರು? ಎಂದು ಕೇಳಿದನು. ಆಗ ಅರ್ಜುನನಿಗೆ ಅರ್ಥವಾಯಿತು ಬದುಕಿರುವವರಿಗೆ ಮರಣಿಸಿದವರೊಂದಿಗೆ ಸಂಬಂಧ ಇರುವುದಿಲ್ಲವೆಂದು.

ಹೀಗೆ ಬಹಳಷ್ಟು ಜನ ಅಲ್ಲಿಯವರೆಗೂ ಅವರೇ ನನ್ನವರು ಎಂದುಕೊಳ್ಳುತ್ತಾರೆ. ಆದರೆ ಮರಣದ ನಂತರ ಇವರು ನನ್ನವರಲ್ಲ ಎಂಬುದು ತಿಳಿಯುತ್ತದೆ. ಅದಕ್ಕೇ ಶಂಕರಾಚಾರ್ಯರು ಏನು ಹೇಳಿದ್ದಾರೆಂದರೆ?

**"ಕಾಂತೇ ಕಾಂತಾ ಕಸ್ತೇ ಪುತ್ರಹ**
**ಸಂಸಾರೋ ಯಮತೀವ ವಿಚಿತ್ರಹ**
**ಕಸ್ಯ ತ್ವಂ ಕಹ ಆಯಾತಹ**
**ತತ್ವ ಚಿಂತಯ ತಧಿಹ ಭ್ರಾತಹ**

ಎಂದು ಬಹಳಷ್ಟು ಸ್ಪಷ್ಟವಾಗಿ ಹೇಳಿದ್ದಾರೆ.

ತಾತ್ಪರ್ಯ : ನಿನ್ನ ಹೆಂಡತಿ ಯಾರು? ನಿನ್ನ ಮಗ ಯಾರು? ಬಹಳ ವಿಚಿತ್ರವಾದದ್ದು ಈ ಸಂಸಾರ. ವಾಸ್ತವವಾಗಿ ನೀನು ಯಾರಿಗೆ ಸೇರಿದವನು? ಎಲ್ಲಿಂದ ಬಂದಿರುವೆ? ಸಹೋದರ ಈ ಜಗತ್ತಿನಲ್ಲಿ ಯಾವಾಗಲಾದರೂ ಸರಿ ಈ ತತ್ವ ವಿಚಾರಣೆಯನ್ನು ಮಾಡು ಎಂದು ಅವರು ಹೇಳಿದ್ದಾರೆ.

ಅವರು ಏನು ಹೇಳಿದ್ದಾರೆಂದರೆ ವಾಸ್ತವವಾಗಿ ನಿನಗೆ, ಅವರಿಗೆ ಯಾವುದೇ ಸಂಬಂಧವಿಲ್ಲ. ಈ ವಿಚಾರಣೆಯನ್ನು ಮಾಡಿದರೆ ಆಗ ನಿನಗೆ ಅರ್ಥವಾಗುತ್ತದೆ ಎಂದಿದ್ದಾರೆ.

ಸಂಬಂಧ ಇಲ್ಲದವರಿಗೋಸ್ಕರ ತಪ್ಪುಗಳನ್ನು ಮಾಡುತ್ತಿರುವೆ; ವಾಸ್ತವವಾಗಿ ನೀನು ಯಾರೆಂದು ತಿಳಿದುಕೊಳ್ಳುತ್ತಿಲ್ಲ, ನೀನು ಏನು ಮಾಡಬೇಕೆಂದು ತಿಳಿದುಕೊಳ್ಳುತ್ತಿಲ್ಲ, ಆದ್ದರಿಂದ ಈ ಆತ್ಮ ತತ್ವ ವಿಚಾರಣೆಯನ್ನು ಮಾಡು ಎಂದು ಹೇಳಿದ್ದಾರೆ. ಅವರು ಇನ್ನೂ ಏನು ಹೇಳಿದ್ದಾರೆಂದರೆ!

**ಕಸ್ತ್ವಂ ಕೋಹಂ ಕುತಹ ಆಯಾತಹ**
**ಕಾಮೇ ಜನನೀ ಕಾಮೇ ತಾತಹ**
**ಇತಿ ಪರಿ ಭಾವಯ ಸರ್ವಮ ಸಾರಂ**
**ವಿಶ್ವಮ್ ತತ್ವ ಸ್ವಪ್ನ ವಿಚಾರಂ ಎಂದು ಹೇಳಿದ್ದಾರೆ.**

ತಾ:–ನಾನು ಯಾರು? ನಾನು ಎಲ್ಲಿಂದ ಬಂದಿದ್ದೇನೆ? ನನ್ನ ತಾಯಿ ಯಾರು? ನನ್ನ ತಂದೆ ಯಾರು? ನಿಸ್ಸಾರವಾದ, ಕನಸಿನ ಸಮಾನವಾದ ಈ ವಿಶ್ವವನ್ನು, ಈ ರೀತಿಯಾದ ವಿಚಾರಣೆಯ ಮೂಲಕ ಬಿಟ್ಟುಬಿಡಬೇಕು ಎಂದು ಶಂಕರಾಚಾರ್ಯರು ಹೇಳಿದ್ದಾರೆ. ಅಷ್ಟೇ ಅಲ್ಲ "ಮರಣಿಸುವುದಕ್ಕೆ ಮುಂಚೆಯೇ ಮರಣಿಸಿದರೆ"ಇನ್ನೂ ಎಷ್ಟು ವಿಷಯಗಳನ್ನು ತಿಳಿದುಕೊಳ್ಳುತ್ತೇವೆಯೋ ನೋಡಿ. ಅಂದರೆ ಮರಣಿಸಿದ ನಂತರ ನಡೆಯುವುದರ ಬಗ್ಗೆ ನಾವು ತಿಳಿದುಕೊಂಡರೆ! ವಾಸ್ತವವಾಗಿ ನಡೆಯುವುದೆಲ್ಲವೂ ಸಿನಿಮಾದಂತಹದ್ದು. ಕನಸಿನಂತಹದ್ದೇ ಎಂದು ತಿಳಿಯುತ್ತದೆ. ಆಗ ಏನು ಯೋಚಿಸುತ್ತಾರೆಂದರೆ? ಇಲ್ಲಿಯವರೆಗೂ ನಡೆಯುವುದೆಲ್ಲವೂ ನಿಜವೇ ಎಂದುಕೊಂಡೆನು. ಆದರೆ ಇದೆಲ್ಲವೂ ಕನಸಿನಂತಹದ್ದು ಎಂಬುದನ್ನು ತಿಳಿದುಕೊಳ್ಳುತ್ತಾರೆ.

ಮರಣಿಸಿದ ನಂತರ ಶರೀರವನ್ನು ಬಿಡುತ್ತಾರೆ. ಶರೀರದೊಂದಿಗೆ ಎಲ್ಲವನ್ನೂ ಬಿಟ್ಟು ಹೊರಟು ಹೋಗುತ್ತಾರೆ. ಅಂದರೆ ಏನೂ ಇರುವುದಿಲ್ಲ, ಯಾರೂ ಇರುವುದಿಲ್ಲ ಎಂಬ ಮಾತು. ಆದರೆ ಬದುಕಿರುವವರೆಗೂ ಇದೆಲ್ಲವೂ ನಿಜ ಎಂದುಕೊಂಡನು, ಯಾವುದೂ ನಿಜವಲ್ಲ ಎಂಬುದು ತಿಳಿಯುತ್ತದೆ. ಆದ್ದರಿಂದ ಸಂಪಾದಿಸಿದವುಗಳೆಲ್ಲವೂ, ಕೂಡಿಟ್ಟವುಗಳೆಲ್ಲವೂ, ನನ್ನದು, ನನ್ನವು ಅಂದುಕೊಂಡಂತಹವೆಲ್ಲಾ ತನ್ನವಲ್ಲ, ತನ್ನೊಂದಿಗೆ ಬರುವುದಿಲ್ಲವೆಂದು ತಿಳಿದುಕೊಳ್ಳುತ್ತಾರೆ. ಸಂಪತ್ತಿನೊಂದಿಗೆ ಪದವಿಗಳು, ಘನತೆ, ಉನ್ನತವಾದ ಉದ್ಯೋಗಗಳು, ಬಿರುದುಗಳು ಅವಾರ್ಡು ಗಳು ಎಷ್ಟು ಶ್ರೇಷ್ಠವಾದವುಗಳಾದರೂ ಸರಿಯೇ ನಮ್ಮೊಂದಿಗೆ ಬರುವುದಿಲ್ಲವೆಂದು, ಆತ್ಮವಾದ ತನಗೆ ಉಪಯೋಗವಾಗುವುದಿಲ್ಲವೆಂದು ತಿಳಿದುಕೊಳ್ಳುತ್ತಾರೆ.

ಆದ್ದರಿಂದ ಪ್ರತಿಯೊಬ್ಬರೂ ಯಾವುದಕ್ಕೆ ಸಮಯವನ್ನೆಲ್ಲಾ ವೆಚ್ಚ ಮಾಡುತ್ತಿದ್ದಾರೋ! ಅವೆಲ್ಲವೂ ನಿಮ್ಮೊಂದಿಗೆ ಬರುವುದಿಲ್ಲ, ನಿಮಗೆ ಉಪಯೋಗವಾಗುವುದಿಲ್ಲ ಎಂದು ತಿಳಿದುಕೊಳ್ಳಿ, ಅವುಗಳ ಹಿಂದೆ ಬೀಳಬೇಡಿ, ಅವುಗಳಿಗಾಗಿ ಪ್ರಯತ್ನಿಸಬೇಡಿ, ಅವುಗಳಿಗಾಗಿ ಪಾಪಗಳನ್ನು ಮಾಡಬೇಡಿ.

ಸಿನಿಮಾ ಹೀರೋ! ಚಿರಂಜೀವಿ ನೂರು ಸಿನಿಮಾಗಳನ್ನು ಮಾಡಿ ಬಹಳಷ್ಟು ಶ್ರೇಷ್ಠನು ಎಂದುಕೊಳ್ಳುತ್ತಾನೆ. ನೂರಲ್ಲ ಐದು ನೂರು ಸಿನಿಮಾಗಳನ್ನು ಮಾಡಿದರು ಯಾವುದೇ ಪ್ರಯೋಜನವಿರುವುದಿಲ್ಲ. ಯಾರೋ ಒಬ್ಬರು ಗಿನ್ನಿಸ್ ಬುಕ್ಕಲ್ಲಿ ಏರಿ ಇನ್ನು ನನಗಿಂತಲೂ ಶ್ರೇಷ್ಠವಾದವನು ಯಾರೂ ಇಲ್ಲವೆಂದು ಕೊಳ್ಳುತ್ತಾನೆ, ಅವನು ಗಿನಿಸ್ ಬುಕ್ಕಿಗೆ ಏರಿದರೂ, ಯಾವ ಬುಕ್ಕಿಗೆ ಹೋದರೂ ಏನು ಪ್ರಯೋಜನ? ಆ ಶರೀರ ಇರುವುದಿಲ್ಲ, ಆ ಹೆಸರು ಇರುವುದಿಲ್ಲ. ಕೊನೆಗೆ ಅವನೇ ಇರುವುದಿಲ್ಲ, ಮತ್ತೆ ಇನ್ನೊಂದು ಶರೀರದೊಂದಿಗೆ, ಇನ್ನೊಂದು ಹೆಸರಿನೊಂದಿಗೆ ಬರುತ್ತಾನೆ.

ಆದ್ದರಿಂದ ಇದು ಅರ್ಥವಾಗದವರು ಅವುಗಳಿಗೋಸ್ಕರ ಒಂದು ಜೀವನವನ್ನು ಏಕೆ ವ್ಯರ್ಥ ಮಾಡುತ್ತಾರೆ? ಆದ್ದರಿಂದ ಪದವಿಗಳಾಗಲೀ, ಘನತೆಯಾಗಲೀ ಯಾವುದಾದರೂ ಸರಿ ಯಾವುದು ಇರುತ್ತದೆ? ಹೇಳಿ? ನಾನು ಚೀಫ್ ಮಿನಿಸ್ಟರ್ ಆಗಿದ್ದೇನೆ ಎನ್ನುತ್ತಾನೆ? ಯಾವ ಚೀಫ್ ಮಿನಿಸ್ಟರ್ ಇದ್ದಾನೆ? ಪ್ರೈಮ್ ಮಿನಿಸ್ಟರ್ ಆಗಿದ್ದೇನೆ ಎನ್ನುತ್ತಾನೆ ಯಾವ ಪ್ರೈಮ್ ಮಿನಿಸ್ಟರ್ ಇದ್ದಾನೆ? ಆ ಪದವಿಗಳನ್ನೇನಾದರೂ ತೆಗೆದುಕೊಂಡು ಹೋಗುತ್ತಾರೆಯೇ? ಯಾರೂ ತೆಗೆದುಕೊಂಡು ಹೋಗುಲು ಸಾಧ್ಯವಿಲ್ಲ? ನಾನು ಕಲೆಕ್ಟರ್ ಎನ್ನುತ್ತಾನೆ, ಎಸ್.ಪಿ? ಯಾವುದು ಇರುತ್ತದೆ? ಯಾವುದೂ ಇರುವುದಿಲ್ಲ.

ಕೊನೆಗೆ ಸತ್ತು ಹೋದ ನಂತರ ಇವೆಲ್ಲವೂ ಕನಸಿನಂತೆ ಮಾಯವಾಗುತ್ತವೆ. ಯಾವುದೂ ಇರುವುದಿಲ್ಲ. ಅಂದರೆ ಜೀವನವೆಂಬುದು ಹಗಲುಗನಸು ಎಂದು ಅರ್ಥವಾಗುತ್ತದೆ. ಎಲ್ಲದರ ಮೇಲಿನ ವ್ಯಾಮೋಹಗಳು, ಆಸೆಗಳು, ಬ್ರಾಂತಿಗಳು ಹೊರಟು ಹೋಗುತ್ತವೆ.

ಅಷ್ಟೇಅಲ್ಲ, "ಮರಣಿಸುವುದಕ್ಕೆ ಮುಂಚೆಯೇ ಮರಣಿಸಿದವರು"ಈ ಜೀವನ ಒಂದು ಕನಸಿನಂತಹದ್ದು ಎಂದು ಅರ್ಥ ಮಾಡಿಕೊಳ್ಳುತ್ತಾರೆ. ನೋಡಿ ಕನಸು ಕಾಣುತ್ತಿರುವಷ್ಟು ಸಮಯ ನಿಜವೇ ಅನಿಸುತ್ತದೆ. ಕನಸಿನಲ್ಲಿ ನಡೆಯುವಂತಹ ಸಂಘಟನೆಗಳು, ಕಷ್ಟಗಳು ನೋವುಗಳು ಎಲ್ಲವೂ ನಡೆಯುತ್ತಿರುವಂತೆಯೇ ಇರುತ್ತದೆ. ಆದರೆ ಕನಸು ಮುಗಿದ ತಕ್ಷಣ ಯಾವುದೂ ಇರುವುದಿಲ್ಲ. ಎಲ್ಲವೂ ಮಾಯವಾಗಿ ಬಿಡುತ್ತವೆ.

ನೋಡಿ ಕನಸಿನಲ್ಲಿ ರಾಜ, ಕನಸು ಮುಗಿದ ನಂತರ ರಾಜ ಇರುವುದಿಲ್ಲ. ಅವನ ರಾಜ್ಯವೂ ಇರುವುದಿಲ್ಲ. ಅದೇರೀತಿ ಕನಸಿನಲ್ಲಿ ಚೀಫ್ ಮಿನಿಸ್ಟರ್, ಕನಸನ್ನು

ಕಾಣುತ್ತಿರುವಷ್ಟು ಸಮಯ ಆ ರಾಜ್ಯದ ಅಧಿಕಾರವೆಲ್ಲವೂ ಅವನದೇ. ಅಧಿಕಾರಿಗಳೆಲ್ಲರೂ ಅವನಿಗೆ ಬಗ್ಗಿ ಬಗ್ಗಿ ನಮಸ್ಕಾರಗಳನ್ನು ಮಾಡುತ್ತಾರೆ, ಬಹಳಷ್ಟು ಘನತೆಯನ್ನು ಪ್ರದರ್ಶಿಸುತ್ತಾನೆ. ಆದರೆ ಕನಸು ಮುಗಿದ ನಂತರ ಯಾವುದೂ ಇರುವುದಿಲ್ಲ. ಎಲ್ಲವೂ ಕ್ಷಣಿಕವೇ. ಅದೇ ರೀತಿ ಈ ಜೀವನದಲ್ಲಿ ಇರುವಂತಹ ವೆಲ್ಲವೂ ಸಹ ಕನಸಿನಂತಹವೇ.

ಅದು ರಾತ್ರಿಯ ಕನಸು, ಇದು ಹಗಲಿನ ಕನಸು. ರಾತ್ರಿಯ ಕನಸು ಒಂದು ರಾತ್ರಿಯಲ್ಲಿ ಮುಗಿದು ಹೋಗುತ್ತದೆ. ಹಗಲುಗನಸು ಒಂದು ಜೀವನದೊಂದಿಗೆ ಮುಗಿದು ಹೋಗುತ್ತದೆ. ಒಟ್ಟಿನಲ್ಲಿ ಇದು ಸಹ ಒಂದು ಕನಸೇ. ಪ್ರಜ್ಞೆ ಬಂದ ತಕ್ಷಣ ರಾತ್ರಿಯ ಕನಸಿನಲ್ಲಿರುವಂತಹವು ಇರುವುದಿಲ್ಲ, ಮರಳಿಸಿದ ತಕ್ಷಣವೇ ಜೀವನದಲ್ಲಿರುವ ಯಾವುವೂ ಇರುವುದಿಲ್ಲ. ಆದ್ದರಿಂದ ಇವನ್ನೆಲ್ಲಾ ದೃಷ್ಟಿಯಲ್ಲಿ ಇಟ್ಟುಕೊಂಡು ಬದುಕುವುದನ್ನು ಕಲಿಯಿರಿ, ನೀವು ಬಹಳಷ್ಟು ಲಾಭವನ್ನು ಹೊಂದುವಿರಿ.

ಅವೆಲ್ಲವೂ ಆತ್ಮವಾದ ತನಗೆ ಉಪಯೋಗವಾಗುವುದಿಲ್ಲ. ಕೊನೆಗೆ ತಾನು ಮಾಡುವ ಕರ್ಮಗಳ ಫಲಿತಾಂಶವೇ ತನ್ನೊಂದಿಗೆ ಬರುತ್ತದೆ ಎಂದು ತಿಳಿದುಕೊಳ್ಳುತ್ತಾನೆ. ಪಾಪವನ್ನು ಮಾಡಿದರೆ? ಆ ಪಾಪದ ಫಲಿತ ಬರುತ್ತದೆ, ಪುಣ್ಯ ಮಾಡಿದರೆ ಪುಣ್ಯದ ಫಲಿತ ಬರುತ್ತದೆ. ಜ್ಞಾನವನ್ನು ಸಂಪಾದಿಸಿದರೆ ಆ ಜ್ಞಾನವೇ ನಮಗೆ ಲಭಿಸುತ್ತದೆ ಎಂಬುದನ್ನು ತಿಳಿದುಕೊಳ್ಳುತ್ತಾನೆ.

ಆದ್ದರಿಂದ ನಮಗೆ ಯಾವುದು ಲಾಭದಾಯಕವೋ ನೋಡಿಕೊಳ್ಳಬೇಕು. ಅವುಗಳನ್ನು ಮಾಡಿ ಅವುಗಳ ಫಲಿತಾಂಶವನ್ನು ಹೊಂದುವ ಪ್ರಯತ್ನ ಮಾಡಬೇಕು. ಆದ್ದರಿಂದ ಎಲ್ಲದಕ್ಕಿಂತಲೂ ತನಗೆ ಲಾಭವನ್ನು ಉಂಟು ಮಾಡುವುದು ಜ್ಞಾನವಾಗಿರುವುದರಿಂದ, ಆ ಜ್ಞಾನವನ್ನು ಸಂಪಾದಿಸಿಕೊಳ್ಳಲು ಪ್ರಯತ್ನ ಮಾಡಬೇಕು. ಅಂದರೆ ಪತ್ರೀಜಿಯವರು ಹೇಳಿರುವಂತಹವುಗಳನ್ನೆಲ್ಲಾ ಪಾಲಿಸುವುದೇ! ಅದಕ್ಕಿಂತ ಬೇರೇನೂ ಇಲ್ಲ.

ಅಷ್ಟೇ ಅಲ್ಲ "ಮರಣಿಸುವುದಕ್ಕೆ ಮುಂಚೆಯೇ ಮರಣಿಸಿದರೆ"ಇನ್ನೊಂದು ವಿಷಯ ಸಹ ಅರಿವಿಗೆ ಬರುತ್ತದೆ. ಅದೇನೆಂದರೆ? ಸ್ವಲ್ಪ ಸಮಯ ಇರುವ ಈ ಜೀವನ ಒಂದು ನಾಟಕವೆಂದು ಅರ್ಥವಾಗುತ್ತದೆ. ಪ್ರತಿಯೊಬ್ಬರು ಸ್ವಲ್ಪ ಸಮಯವಷ್ಟೇ ಅಲ್ಲವೇ ಇರುವುದು. ಈಗ ನೋಡಿ. ಕರೋನಾ ಬಂದ ನಂತರ ನಮಗೆ ತಿಳಿದಿರುವಂತೆ ಎಷ್ಟು ಜನ ಹೊರಟುಹೋದರು? ಅವರೆಲ್ಲಾ ಸ್ವಲ್ಪ ಸಮಯವೇ ಇದ್ದರು. ಕೊನೆಗೆ ನಿರ್ಗಮಿಸಿದರು.

ನೋಡಿ ನಾಟಕದಲ್ಲಿ ಪಾತ್ರಧಾರಿ ಬರುತ್ತಾನೆ, ಸ್ವಲ್ಪಹೊತ್ತು ಗಡಿಬಿಡಿ ಮಾಡುತ್ತಾನೆ. ಮತ್ತೇ ಕಾಣಿಸುವುದಿಲ್ಲ. ಅದೇರೀತಿ ಈ ಜೀವನದಲ್ಲಿ ಎಷ್ಟೇ ಗಡಿಬಿಡಿ ಮಾಡಿದರೂ, ಎಷ್ಟು ಶ್ರೇಷ್ಠವಾದ ಹುದ್ದೆಗಳನ್ನು ಹೊಂದಿದರೂ ಕೊನೆಗೆ ಮತ್ತೇ  ಕಾಣಿಸುವುದಿಲ್ಲ. ಮರಣಿಸಿದ ನಂತರ ಈ ಜೀವನವು ಸಹ ಒಂದು ನಾಟಕ ಎಂಬ ವಿಷಯ ಅರ್ಥವಾಗುತ್ತದೆ.

ಇದೇ ಶೇಕ್ಸ್ ಪಿಯರ್ ಹೇಳಿರುವಂತಹ ಸಂದೇಶ"ಆಲ್ ದ ವರ್ಲ್ಡ್ ಈಸ್ ಏ ಸ್ಟೇಜ್, ವಿ ಆರ್ ಆಲ್ ಯಾಕ್ಟರ್ಸ್, ಡಿಸ್ಟ್ರಕ್ಟ್ ಅಂಡ್ ಫ್ಯೂಮ್, ಡು ಅವರ್ ಪಾರ್ಕ್ ಅಂಡ್ ದೆನ್ ಡಿಪಾರ್ಟ್". ಇದೇ ವಿಷಯವನ್ನೇ ಪತ್ರೀಜಿಯವರು ಯಾವಾಗಲೂ ಹೇಳುತ್ತಿರುತ್ತಾರೆ. ಅವರು ಏನು ಹೇಳುತ್ತಾರೆಂದರೆ? ಮಗು ನೀನು ನಾಟಕದಲ್ಲಿ ಒಬ್ಬ ಪಾತ್ರಧಾರಿ, ವಾಸ್ತವವಾಗಿ ಈ ಪ್ರಪಂಚವೇ ಒಂದು ನಾಟಕ ರಂಗ, ನಾವೆಲ್ಲರೂ ಅದರಲ್ಲಿನ ಪಾತ್ರಧಾರಿಗಳು, ಸ್ವಲ್ಪ ಸಮಯವಿದ್ದು ನಮ್ಮ ಪಾತ್ರವನ್ನು ಪೋಷಿಸಿ ನಿರ್ಗಮಿಸುತ್ತೇವೆ"ಎಂದು ಹಲವಾರು ಬಾರಿ ಪತ್ರೀಜಿ ಹೇಳಿದ್ದಾರೆ.

ಅದೇ ರೀತಿ ಸಿನಿಮಾದಲ್ಲಿ ಯಾಕ್ಟ್ ಮಾಡುವವರು ಪತಿಯಾಗಿ, ಪತ್ನಿಯಾಗಿ ಯಾಕ್ಟ್ ಮಾಡುತ್ತಾರೆ. ಸಿನಿಮಾ ಮುಗಿದ ನಂತರ ಯಾರ ದಾರಿಯನ್ನು ಹಿಡಿದುಕೊಂಡು ಅವರು ಹೊರಟು ಹೋಗುತ್ತಾರೆ. ನೋಡಿ ಸಿನಿಮಾದಲ್ಲಿ ಹೀರೋಯಿನ್ ಗೆ ಮುತ್ತು ಕೊಟ್ಟರೆ ಏನೂ ಮಾತನಾಡುವುದಿಲ್ಲ. ಆದರೆ ಹೊರಗಡೆ ಎಲ್ಲಾದರೂ ಮುತ್ತು ಕೊಡುತ್ತೇನೆ ಎಂದರೆ ಸುಮ್ಮನೆ ಇರುತ್ತಾಳೆಯೇ? ಸುಮ್ಮನಿರುವುದಿಲ್ಲ.

ಇದೂ ಅಷ್ಟೇ! ಗಂಡ... ಗಂಡನ ಪೋರ್ಷನ್ ಮಾಡುತ್ತಾನೆ. ಹೆಂಡತಿ... ಹೆಂಡತಿಯ ಪೋರ್ಷನ್ ಮಾಡುತ್ತಾಳೆ. ನಾಟಕ ಮುಗಿದ ನಂತರ ಅಂದರೆ ಜೀವನ ಮುಗಿದ ನಂತರ ಯಾರ ದಾರಿಯನ್ನು ಹಿಡಿದುಕೊಂಡು ಅವರು ಹೋಗುತ್ತಾರೆ. ಅದೇರೀತಿ ಕೆಲವರು ಗೆಸ್ಟ್ ಆರ್ಟಿಸ್ಟ್ ಗಳು ಇರುತ್ತಾರೆ, ಬಹಳ ಬೇಗ ಹೊರಟು ಹೋಗುತ್ತಾರೆ. ಅದೇ ರೀತಿ ಕೆಲವರು ಬಹಳ ಬೇಗ ಶರೀರವನ್ನು ಬಿಡುತ್ತಾರೆ. ನಾಟಕದಂತಹ ಜೀವನದಲ್ಲಿ ಹೋಗದಂತೆ ಹೇಗೆ ಇರುತ್ತಾರೆ? ಆದ್ದರಿಂದ ಜೀವನ ಒಂದು ನಾಟಕ ಎಂದು ತಿಳಿಯುತ್ತದೆ. ಆದ್ದರಿಂದ ಮರಣಾನಂತರದ ಬಗ್ಗೆ ತಿಳಿದುಕೊಂಡರೆ ಬಹಳಷ್ಟು ಲಾಭಗಳನ್ನು ಹೊಂದಬಹುದು.

# ಮರಣದ ನಂತರದ ಜೀವನವನ್ನು ತಿಳಿದುಕೊಂಡರೆ ಮತ್ತಷ್ಟು ಲಾಭಗಳು.

ಮರಣದ ನಂತರದ ಜೀವನದ ಮೇಲೆ ತಿಳುವಳಿಕೆ ಇದ್ದರೆ ಜೀವನದಲ್ಲಿ ಇನ್ನೂ ಹಲವಾರು ಲಾಭಗಳು ಉಂಟಾಗುತ್ತವೆ. ಮುಖ್ಯವಾಗಿ ಹುಟ್ಟು ಎಷ್ಟು ಸಂಭ್ರಮವೋ, ಸಾವನ್ನು ಸಹ ಅಷ್ಟೇ ಸಂಭ್ರಮವೆಂದು ಪರಿಗಣಿಸಬಹುದು.

ಅಷ್ಟೇ ಅಲ್ಲ ಮರಣದ ಬಗ್ಗೆ ವಶಿಷ್ಠರು ಯೋಗವಾಶಿಷ್ಠದಲ್ಲಿ ಏನು ಹೇಳಿದ್ದಾರೆಂದರೆ? ಆತ್ಮಜ್ಞಾನಿ ಎಂದರೆ ಆತ್ಮಜ್ಞಾನವನ್ನು ಹೊಂದಿದವನು "ಹಳೆಯ ದೇಹವನ್ನು ಬಿಟ್ಟು ಹೊಸ ದೇಹವನ್ನು ಧರಿಸುವುದು ಎಂಬುದನ್ನು ನೂತನ ಮಹೋತ್ಸವವೆಂದು ಭಾವಿಸುತ್ತಾನೆ" ಎಂದಿದ್ದಾರೆ.

ಆತ್ಮಜ್ಞಾನ ಸಾವನ್ನು ಅಂದರೆ ಅಂತಹ ಹೊಸ ದೇಹವನ್ನು ಲಭಿಸುವಂತೆ ಮಾಡುವ ಮರಣ ಸಂಭವಿಸಿದರೆ ದುಃಖಿಸುವುದಿಲ್ಲ, ಸಂತೋಷಿಸುತ್ತಾನೆ ಎಂದು ಹೇಳಿದ್ದಾರೆ.

ಈ ಸಂದರ್ಭದಲ್ಲಿ ಪತ್ರೀಜಿ ತಿರುಪತಿಯಲ್ಲಿ ನಡೆದ ಒಂದು ಸಂಘಟನೆಯನ್ನು ಹೇಳಿದರು. ಅವರು ಒಂದು ಹುಟ್ಟುಹಬ್ಬದ ಫಂಕ್ಷನ್ ಗೆ ಚಾಕ್ಲೆಟ್ ಗಳನ್ನು ತೆಗೆದುಕೊಂಡು ಹೋಗಿ ಅರ್ಧ ಕೊಟ್ಟು ಉಳಿದ ಅರ್ಧವನ್ನು ಇಟ್ಟುಕೊಂಡರಂತೆ. ಏಕೆ ಇಟ್ಟುಕೊಂಡಿರುವಿರಿ ಎಂದು ಕೇಳಿದರೆ! ಪತ್ರೀಜಿ ಆಕೆಗೆ ಈಗ ಹುಟ್ಟು ಹಬ್ಬದ ಫಂಕ್ಷನ್ ಮಾಡುತ್ತಿದ್ದಾರೆ ಅದಕ್ಕಾಗಿ ಅರ್ಧ ಕೊಟ್ಟಿದ್ದೇನೆ, ಸ್ವಲ್ಪ ಹೊತ್ತಿನ ನಂತರ ಸತ್ತು ಹೋಗಬಹುದು ಉಳಿದವುಗಳನ್ನು ಆಗ ಕೊಡುತ್ತೇನೆ ಎಂದು ಹೇಳಿದರಂತೆ. ಆಗ ಅವರು ಗಾಬರಿಯಾದರಂತೆ.

ಆಗ ಅವರು ಹುಟ್ಟೂ ಹಬ್ಬವೇ, ಮರಣವೂ ಹಬ್ಬವೇ, ಅದು ಉತ್ಸವವೇ, ಇದು ಉತ್ಸವವೇ ಹಾಗೆ ತೆಗೆದುಕೊಳ್ಳುವುದೇ ಜ್ಞಾನ ಎಂದು ಹೇಳಿದರಂತೆ.

ಅದಕ್ಕೆ ವಶಿಷ್ಠರು ಹಳೆಯ ದೇಹವನ್ನು ಬಿಟ್ಟು ಹೊಸ ದೇಹವನ್ನು ಧರಿಸುವುದನ್ನು ನೂತನ ಮಹೋತ್ಸವವನ್ನಾಗಿ ಭಾವಿಸಬೇಕು ಎಂದಿದ್ದಾರೆ. ಏಕೆಂದರೆ ಹರಿದುಹೋದ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸುವುದು ನೂತನ ಮಹೋತ್ಸವವಲ್ಲದೇ ಇನ್ನೇನಾಗುತ್ತದೆ ಹೇಳಿ. ಹೊಸ ಬಟ್ಟೆಯನ್ನು ಹಾಕಿಕೊಂಡಾಗ ಎಷ್ಟು ಸಂಭ್ರಮ ಪಡುತ್ತಾನೆ.

ನೋಡಿ ಹಬ್ಬದ ದಿನಗಳಲ್ಲಿ ಎಲ್ಲರೂ ಹೊಸ ಬಟ್ಟೆಗಳನ್ನು ಹಾಕಿಕೊಂಡು ಎಷ್ಟು ಉಲ್ಲಾಸದಿಂದ, ಆನಂದದಿಂದ ಇರುತ್ತಾರೋ! ಆ ಹೊಸ ಬಟ್ಟೆಗಳನ್ನು ಧರಿಸಿ ಎಲ್ಲರಿಗೂ ತೋರಿಸುತ್ತಾರೆ. ನನ್ನ ಡ್ರೆಸ್ ಹೇಗಿದೆ? ನನ್ನ ಬಟ್ಟೆಗಳು ಹೇಗಿವೆ? ಎಂದು ಕೇಳುತ್ತಿರುತ್ತಾರೆ. ಅವರು ಆ ಹಬ್ಬದ ದಿನ ಅವರ ಬಟ್ಟೆಗಳನ್ನು ಎಲ್ಲರೂ ನೋಡಬೇಕೆಂದು ಸಿನಿಮಾಗಳಿಗೆ ಹೋಗುತ್ತಾರೆ, ಚಿಕ್ಕ ಚಿಕ್ಕ ಪಾರ್ಟಿಗಳಿಗೆ ಹೋಗುತ್ತಾರೆ, ನಾಲ್ಕು ಜನರೊಂದಿಗೆ ತಿರುಗಾಡಲು ಪ್ರಯತ್ನ ಮಾಡುತ್ತಾರೆ.

ಅಂದರೆ ಹೊಸ ಬಟ್ಟೆಗಳನ್ನು ಧರಿಸುವುದು ಎಂಬುದು ಎಷ್ಟು ಸಂತೋಷವನ್ನುಂಟು ಮಾಡುವ ವಿಷಯವೆಂದು ಭಾವಿಸುತ್ತಾರೆ. ಅದೇರೀತಿ ಹೊಸ ದೇಹವನ್ನು ತೆಗೆದುಕೊಳ್ಳುವುದು ಸಹ ಒಂದು ಮಹೋತ್ಸವವನ್ನಾಗಿ ಭಾವಿಸಬೇಕು ಎಂಬುದು ವಶಿಷ್ಠರ ಸಂದೇಶ. ನೋಡಿ ಹಳೆಯ ವಸ್ತ್ರಗಳನ್ನು ಬಿಟ್ಟುಬಿಡಲು ಯಾರೂ ನೋವು ಪಡುವುದಿಲ್ಲ, ಅದೇ ರೀತಿ ಆತ್ಮಜ್ಞಾನಿ ಹಳೆಯ ದೇಹವನ್ನು ಬಿಡಲು ನೋವು ಪಡುವುದಿಲ್ಲ.

ಅದಕ್ಕೆ ಸದಾನಂದ ಯೋಗಿ ಮೂರು ದಿನಗಳ ಮುಂಚೆ ಪತ್ರೀಜಿಯವರನ್ನು ಕರೆದು... ಮಗು ಸುಭಾಷ್ ನಾನು ಮೂರು ದಿನಗಳಲ್ಲಿ ದೇಹವನ್ನು ತ್ಯಜಿಸುತ್ತಿದ್ದೇನೆ, ನನ್ನ ದೇಹವನ್ನು ಮಣ್ಣು ಮಾಡಲು ಯಾವುದಾದರೂ ಪ್ರದೇಶವನ್ನು ನೋಡು ಎಂದರಂತೆ. ಆಗ ಪತ್ರೀಜಿ ಎಲ್ಲಾ ಕಡೆ ತಿರುಗಿ ನಂದವರಂ ನಲ್ಲಿ ಸೆಲೆಕ್ಟ್ ಮಾಡಿದರು.

ಅವರು ಹೇಳಿದ ಸಮಯಕ್ಕೆ ಶರೀರವನ್ನು ಬಿಟ್ಟರಂತೆ. ಅವರು ಸಂತೋಷದಿಂದಲೇ ಶರೀರವನ್ನು ಬಿಟ್ಟರು. ಅದಕ್ಕೆ 'ಯೋಗಿಗಳು ಹೇಳಿ ಸಾಯುತ್ತಾರೆ, ಭೋಗಿಗಳು ಹೇಳಿದರೇ ಸಾಯುತ್ತಾರೆ'ಎನ್ನುತ್ತಾರೆ.

ಏಕೆಂದರೆ? ಭೋಗಿಗಳು ಒಳ್ಳೆಯ ಆಸ್ತಿಗಳು, ಸಂಪತ್ತುಗಳನ್ನು ಸಂಪಾದಿಸಿಕೊಂಡಿರುವುದರಿಂದ. ಎಲ್ಲದರ ಮೇಲೆ ಮಮಕಾರ ಇರುತ್ತದೆ. ಅವರಿಗೆ ಕಾಯಿಲೆ ಬಂದಾಗ ಡಾಕ್ಟರ್ ಚೆಕ್ ಮಾಡಿ ಸೀರಿಯಸ್ ಆಗಿದೆ ಅವರು ಹೊರಟುಹೋಗುತ್ತಾರೆ ಎಂದು ಅವರ ಹತ್ತಿರದವರಿಗೆ ಹೇಳುತ್ತಾರೆ. ಈ ವಿಷಯ ಅವರಿಗೂ ಸಹ ತಿಳಿಯುತ್ತದೆ. ಯಾವಾಗ ಆ ವಿಷಯ ತಿಳಿಯುತ್ತದೆಯೋ ಅವರಿಗೆ ಭಯ ಶುರುವಾಗುತ್ತದೆ. ಅವರಿಗೆ ಇರುವವುಗಳೆಲ್ಲಾ ನೆನಪಿಗೆ ಬರುತ್ತವೆ ನಾನು ಬಹಳಷ್ಟು ಸಂಪಾದಿಸಿದ್ದೇನೆ, ಅವೆಲ್ಲಾ ಏನಾಗುತ್ತವೆ! ಇನ್ನು ನನ್ನವರಿಗೆ ಯಾವುದೇ ವ್ಯವಸ್ಥೆಗಳನ್ನು

ಮಾಡಿಲ್ಲ, ಈಗ ನನ್ನ ಪರಿಸ್ಥಿತಿ ಏನು? ಎಂಬ ಆಲೋಚನೆ ಬಂದಾಗ ಇದ್ದಕ್ಕಿದ್ದಂತೆ ಭಯ ಉಂಟಾಗಿ ಒಂದು ವಾರದ ನಂತರ ನಿಲ್ಲಬೇಕಾದ ಹೃದಯ ಆಗಲೇ ನಿಂತು ಹೋಗುತ್ತದೆ. ಅದಕ್ಕಾಗಿಯೇ 'ಭೋಗಿ ಹೇಳಿದರೇ ಸಾಯುತ್ತಾನೆ' ಎನ್ನುತ್ತಾರೆ.

ಅಷ್ಟೇಅಲ್ಲ ವಶಿಷ್ಠರು ಏನು ಹೇಳುತ್ತಾರೆಂದರೆ! "ಹೊಸ ದೇಹ ಧರಿಸುವುದನ್ನು ನೂತನ ಮಹೋತ್ಸವವನ್ನಾಗಿ ಭಾವಿಸುತ್ತಾರೆ" ಎಂದು ಹೇಳಿದ್ದಾರೆ. ನೀವು ನೋಡಿ ಹಳೆಯ ದೇಹ ಮುಪ್ಪಾದಾಗ, ತನ್ನ ಕೆಲಸವನ್ನು ತಾನು ಮಾಡಿಕೊಳ್ಳಲಾರದೇ ಹೋಗುತ್ತದೆ, ಪ್ರತಿಯೊಂದಕ್ಕೆ ಯಾರೋ ಒಬ್ಬರ ಮೇಲೆ ಆಧಾರ ಪಡಬೇಕಾಗಿ ಬರುತ್ತದೆ. ಅಷ್ಟೇ ಅಲ್ಲ ಆ ಸ್ಥಿತಿಯಲ್ಲಿ ಎಲ್ಲಾ ರೋಗಗಳು ಮೇಲೆ ಬೀಳುತ್ತವೆ, ಅವರು ಸಂಪಾದನೆ ಮಾಡುವ ಶಕ್ತಿಯನ್ನು ಸಹ ಕಳೆದುಕೊಳ್ಳುತ್ತಾರೆ, ಏನು ಬೇಕೆಂದರೂ ಮಕ್ಕಳ ಮೇಲೆ ಆಧಾರ ಪಡಬೇಕು. ಮಕ್ಕಳು ಕೆಲವು ದಿನಗಳು ಚೆನ್ನಾಗಿ ನೋಡಿಕೊಳ್ಳುತ್ತಾರೆ, ಆದರೆ ನಂತರ, ನಂತರ ನಿರ್ಲಕ್ಷ್ಯ ಮಾಡುತ್ತಾರೆ. ಅವರು ಏನಾದರೂ ಕೇಳಿದರೆ ಬೇಜಾರು ಮಾಡಿಕೊಳ್ಳುತ್ತಾರೆ, ಇನ್ನು ಕೆಲವರು ಅದನ್ನು ಸಹಿಸಲಾರದೇ ವೃದ್ಧಾಶ್ರಮಗಳಿಗೆ ಸೇರಿಸುತ್ತಾರೆ. ಬಹಳಷ್ಟು ಹಣವಿರುವವರು ಸಹ ತಂದೆ ತಾಯಿಯರನ್ನು ವೃದ್ಧಾಶ್ರಮಗಳಲ್ಲಿ ಬಿಡುವುದನ್ನು ನೋಡುತ್ತಿದ್ದೇವೆ.

ಚೆನ್ನಾಗಿ ಬದುಕಿದವರು ಅಂತಹ ಪರಿಸ್ಥಿತಿ ಬಂದರೆ ಬಹಳಷ್ಟು ದುಃಖ ಪಡುತ್ತಾರೆ, ಯಾವಾಗ ಸಾಯೋಣವೆಂದು ಎದುರು ನೋಡುತ್ತಿರುತ್ತಾರೆ, ಕರೆದುಕೊಂಡು ಹೋಗು ಎಂದು ದೇವರನ್ನು ಪ್ರಾರ್ಥಿಸುತ್ತಾರೆ. ನೋಡಿ ಅಂತಹ ಪರಿಸ್ಥಿತಿ ಬಂದವರಿಗೆ ಸಾವು ಹಬ್ಬದಂತೆಯೇ ಅಲ್ಲವೇ?

ಆದರೆ ಆತ್ಮಜ್ಞಾನಿಗೆ ಎಲ್ಲವೂ ತಿಳಿದಿದೆ, ಸಾವಿನ ನಂತರ ಏನು ನಡೆಯುತ್ತದೆ ಎಂಬುದು ಸಹ ತಿಳಿದಿದೆ, ತಾನು ಆತ್ಮ, ತನಗೆ ಸಾವಿಲ್ಲವೆಂಬುದು ಸಹ ತಿಳಿದಿದೆ, ಸಾವು ಎಂದರೆ ಶರೀರವನ್ನು, ಪ್ರದೇಶವನ್ನು ಬದಲಾಯಿಸುವುದು ಎಂದು ತಿಳಿದಿದೆ.

ಅಷ್ಟೇಅಲ್ಲ ತಾನು ಮಾಡಿದ ಧ್ಯಾನ ಸಾಧನೆಯಿಂದ, ತಾನು ಹೊಂದಿದ ಜ್ಞಾನದಿಂದ ತನಗೆ ಉನ್ನತ ಲೋಕ ಪ್ರಾಪ್ತಿಯಾಗುತ್ತದೆ ಎಂದು ತಿಳಿದಿದೆ. ತಾನು ಇನ್ನಷ್ಟು ಉನ್ನತ ಸ್ಥಿತಿಯನ್ನು ಹೊಂದುತ್ತೇನೆ ಎಂದು ತಿಳಿದಿದೆ. ಆದ್ದರಿಂದ ಸಾವಿಗೆ ಹೆದರುವುದಿಲ್ಲ, ಸಾವು ತನಗೆ ಲಾಭವನ್ನುಂಟುಮಾಡುವುದೆಂದು ತಿಳಿದುಕೊಂಡವನು ಜ್ಞಾನಿ.

ಆದ್ದರಿಂದ ಆತ್ಮಜ್ಞಾನಿ ಸಾವನ್ನು ಲೆಕ್ಕಿಸುವುದಿಲ್ಲ, ಶರೀರ ಬಿಟ್ಟುಬಿಡುವುದನ್ನು ಒಂದು ನೂತನ ಮಹೋತ್ಸವವನ್ನಾಗಿ ಭಾವಿಸುತ್ತಾನೆ. ಇದನ್ನೇ ವಶಿಷ್ಠರು ಹೇಳಿದ್ದಾರೆ.

ಆತ್ಮ ಶರೀರವನ್ನು ಬಿಟ್ಟರೇ ಮತ್ತೇ ಹೊಸ ಶರೀರ ಬರುತ್ತದೆ ನೋಡಿ ಕೆಲಸ ಮಾಡದ ಮುಪ್ಪಾದ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸಿರುವುದು ಹಬ್ಬವಲ್ಲದೇ ಮತ್ತಿನ್ನೇನು? ಅದಕ್ಕೆ ಪತ್ರೀಜಿಯವರು ನಿನಗೆ ಸಾವು ಎಲ್ಲಿದೆ? ಈ ಶರೀರವನ್ನು ಬಿಟ್ಟರೇ ಮತ್ತೇ ಹೊಸದು ಬರುತ್ತದೆ, ಅದಕ್ಕೆ ಏಕೆ ದುಃಖಿಸುವೆ? ಎನ್ನುತ್ತಾರೆ. ಹೊಸ ಶರೀರದೊಂದಿಗೆ ಆ ಕುಟುಂಬದಲ್ಲಾದರೂ ಜನಿಸಬಹುದು, ಇಲ್ಲದಿದ್ದರೆ ಇನ್ನೊಂದು ಕುಟುಂಬದಲ್ಲಾದರೂ ಜನಿಸಬಹುದು. ಹಾಗೆ ಹೊಸ ಶರೀರದೊಳಗೆ ಪ್ರವೇಶಿಸಿ 9 ತಿಂಗಳು ಪೂರ್ತಿಯಾದ ನಂತರ ಜನ್ಮ ತೆಗೆದುಕೊಂಡನು ಎಂದುಕೊಳ್ಳಿ ಆಗ ನೋಡಿ ಅವನ ವೈಭವ ಹೇಗಿರುತ್ತದೆಯೋ! ಹುಟ್ಟಿದಾಗಿನಿಂದ ಅವನು ಕೇಳದೆಯೇ ಹಾಲನ್ನು ಕುಡಿಸುತ್ತಾರೆ, ಅದಕ್ಕಿಂತ ಮುಂಚೆ ಮುಪ್ಪಾದ ಶರೀರದಲ್ಲಿ ಇದ್ದಾಗ, ಕೇಳಿದರೂ ಸಹ ಬೇಜಾರು ಮಾಡಿಕೊಳ್ಳುತ್ತಿದ್ದರು. ಅಷ್ಟೇ ಅಲ್ಲ ನಿಧಾನವಾಗಿ ಬೆಳೆಯುತ್ತಾ ಇದ್ದರೆ! ಹಾಲು ಬಿಸ್ಕೆಟ್ ಗಳನ್ನು ಯಾವುದನ್ನಾದರೂ ಸರಿ ಕೇಳದೆಯೇ, ಎಲ್ಲವನ್ನು ಕೊಡುತ್ತಾರೆ.

ಪೂರ್ವದಲ್ಲಿ ನಿದ್ದೆ ಬಾರದೆ ವಯಸ್ಸಾದ ಕಾಲದಲ್ಲಿ ಯಾವುದಾದರೂ ಸಣ್ಣ ಕಾಯಿಲೆ ಬಂದು ಕೆಮ್ಮುತ್ತಾ ಅವಸ್ಥೆ ಪಡುತ್ತಿದ್ದರೆ ಬೈಯುತ್ತಿದ್ದರು. ಅದೇ ಚಿಕ್ಕ ಮನೆಯಾದರೆ ಉಳಿದವರಿಗೆ ನಿದ್ರೆ ಬರುವುದಿಲ್ಲ. ಆದರೆ ಹೊಸ ಶರೀರವನ್ನು ತೆಗೆದುಕೊಂಡಾಗ ಅಳುತ್ತಿದ್ದರೆ ತೊಟ್ಟಿಲಲ್ಲಿ ಹಾಕಿ ತೂಗುತ್ತಾರೆ, ಇಲ್ಲದಿದ್ದರೆ ಇವರು ನಿದ್ರೆ ಮಾಡದೇ ಮಡಿಲಲ್ಲಿ ಮಲಗಿಸಿಕೊಂಡು ಸುಮ್ಮನಿರಿಸಿ ನಿದ್ರೆ ಮಾಡಿಸಲು ಬಹಳಷ್ಟು ಅವಸ್ತೆ ಪಡುತ್ತಾರೆ.

ಹಾಗಾದರೆ ನೋಡಿ ಹೊಸ ಶರೀರ ತೆಗೆದುಕೊಂಡವರಿಗೆ ಎಷ್ಟು ವೈಭವವಿರುತ್ತದೆಯೋ! ಆಲೋಚಿಸಿ! ಇದು ಆತ್ಮ ಜ್ಞಾನಿಗೆ ತಿಳಿದಿದೆ, ಆದ್ದರಿಂದ ಹಳೆಯ ಶರೀರವನ್ನು ಬಿಟ್ಟುಬಿಡಲು ಅವರೇನೂ ದುಃಖಿಸುವುದಿಲ್ಲ. ಅದು ಅವರಿಗೆ ಮಹೋತ್ಸವವೇ, ಕಾರಣ ಹೊಸ ಶರೀರ ಬರುವುದರಿಂದ. ಆಗ ಇರುವುದು ಬ್ರಹ್ಮಾಂಡವಾದ ಜೀವನ.

ಹಾಗಾದರೆ ಯಾರು ಧ್ಯಾನ ಮಾಡುತ್ತಾರೋ! ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೋ ಅವರು ದುಃಖಿಸುವ ಕೆಲಸವೇನೂ ಇಲ್ಲ. ಕಾರಣ ಇನ್ನೂ ಉನ್ನತವಾದ ಜನ್ಮವನ್ನು

ಅವರು ಹೊಂದುತ್ತಾರೆ. ಆದ್ದರಿಂದ ಅದನ್ನು ಮಹೋತ್ಸವವನ್ನಾಗಿಯೇ ಭಾವಿಸುತ್ತಾರೆ. ಅದಕ್ಕೇ ವಸಿಷ್ಠರು ಹಾಗೆ ಹೇಳಿದ್ದಾರೆ. ಆದ್ದರಿಂದ ಅಂತಹ ಹೊಸ ದೇಹವನ್ನು ಲಭಿಸುವಂತೆ ಮಾಡುವ ಮರಣ ಸಂಭವಿಸಿದರೆ ಆತ್ಮಜ್ಞಾನಿ ಸಂತೋಷ ಪಡುತ್ತಾನೆ. ಹುಟ್ಟು ಎಷ್ಟು ಸಂಭ್ರಮವೋ! ಮರಣವನ್ನು ಸಹ ಅಷ್ಟೇ ಸಂಭ್ರಮದಂತೆ ಭಾವಿಸುತ್ತಾನೆ. ಹಾಗೆಯೇ ವಶಿಷ್ಠರು ಇನ್ನೂ ಏನು ಹೇಳಿದ್ದಾರೆಂದರೆ? ನಾನು ಮರಣಿಸುವೆ... ನಾನು ಮರಣಿಸುವೆ... ನಾನು ಮರಣಿಸುವೆ ಎಂದು ಏಕೆ ಭಾವಿಸುವೆ? ಮರಣದ ನಂತರವೂ ಸಹ ನಾನು ಇರುತ್ತೇನೆ... ಇರುತ್ತೇನೆ... ಇರುತ್ತೇನೆ ಎಂದು ಏಕೆ ಭಾವಿಸುವುದಿಲ್ಲ?"ಎನ್ನುತ್ತಾರೆ. ಆದ್ದರಿಂದ ನೀವು ಮರಣಿಸುತ್ತೇನೆ ಎಂದು ಹೇಳಿದರೆ ಅಜ್ಞಾನವೇ ಆಗುತ್ತದೆ. ಮರಣಿಸಿದ ನಂತರವೂ ಸಹ ನಾನು ಇರುತ್ತೇನೆ ಇರುತ್ತೇನೆ... ಇರುತ್ತೇನೆ... ಇರುತ್ತೇನೆ ಎಂಬ ಸತ್ಯವನ್ನು ಯಾರಾದರೆ ತಿಳಿದುಕೊಳ್ಳುತ್ತಾರೋ ಅವರು ಆತ್ಮಜ್ಞಾನಿಗಳಾಗುತ್ತಾರೆ.

ನೆನಪಿನಲ್ಲಿಡಿ ವಶಿಷ್ಠರು ಇನ್ನೊಂದು ವಿಷಯವನ್ನು ಹೇಳಿದ್ದಾರೆ. "ಆತ್ಮವನ್ನು ತಿಳಿದುಕೊಂಡ ಆತ್ಮಜ್ಞಾನಿ ಮರಣವನ್ನು, ಜೀವನವನ್ನು, ಜನ್ಮವನ್ನು ಅವಶೇಷಗಳ ತುಣುಕುಗಳನ್ನಾಗಿ ಅಂದರೆ ಪ್ರಾಮುಖ್ಯತೆ ಇಲ್ಲದವುಗಳೆಂದು ಭಾವಿಸುತ್ತಾನೆ."

ಮರಣವನ್ನು ದೊಡ್ಡ ಪ್ರಾಮುಖ್ಯವಾದ್ದನ್ನಾಗಿ ನೋಡುವುದಿಲ್ಲ. ಹಾಗೆಯೇ ಜನ್ಮವನ್ನು, ಜೀವನವನ್ನು ಪ್ರಾಮುಖ್ಯತೆ ಇಲ್ಲದವುಗಳೆಂದು ಭಾವಿಸುತ್ತಾರೆ. ಅಂತಹ ಆತ್ಮಜ್ಞಾನಿ ಇಚ್ಛಾರಹಿತನಾಗಿ ಅಂದರೆ ಕೋರಿಕೆಗಳು ಇಲ್ಲದವನಾಗಿ, ವಾಸನಾ ಶೂನ್ಯನಾಗಿ ಅಂದರೆ ಇಂದಿನ ಅಭ್ಯಾಸಗಳು, ಗುಣಗಳು ಯಾವುವೂ ಇರುವುದಿಲ್ಲ. ಆತ್ಮಜ್ಞನಾಗಿ ಅಂದರೆ ಆತ್ಮ ಸ್ಥಿತಿಯಲ್ಲಿ ಇರುತ್ತಾ? ಮೇಲ್ನೋಟಕ್ಕೆ ಮಾತ್ರ ಏನೂ ತಿಳಿಯದವನಂತೆ ಕಾಣಿಸುತ್ತಾನೆ. ಪರ್ವತದಂತೆ ನಿಶ್ಚಲವಾಗಿ ಇರುತ್ತಾನೆ. ಏನು ನಡೆಯುತ್ತಿದ್ದರೂ, ಏನು ಆಗುತ್ತಿದ್ದರೂ ಜನ್ಮಕ್ಕಾಗಲೀ, ಜೀವನಕ್ಕಾಗಲೀ ಇಲ್ಲದಿದ್ದರೆ ಸಾವಿಗಾಗಲೀ ಪ್ರಾಮುಖ್ಯತೆಯನ್ನು ನೀಡುವುದಿಲ್ಲ. ಕಾರಣ ಇವೆಲ್ಲವೂ ಸಹಜವಾಗಿ ನಡೆಯುವಂತಹವೇ ಎಂದು ಎಂದು ತಿಳಿದುಕೊಂಡಿರುವುದರಿಂದ. ಜ್ಞಾನಿಗೆ ಇನ್ನೂ ಏನು ತಿಳಿದಿದೆ ಎಂದರೆ ಹುಟ್ಟಿದವನು ಮರಣಿಸಲೇಬೇಕು, ಮರಣಿಸಿದವನು ಹುಟ್ಟಲೇಬೇಕು ಎಂದು ತಿಳಿದುಕೊಂಡವನು. ಇನ್ನೂ ಏಕೆ ಅವುಗಳ ಬಗ್ಗೆ ದೊಡ್ಡ ಆಲೋಚನೆ. ಆದ್ದರಿಂದ ವಶಿಷ್ಠರು ಈ ಮರಣದ ಬಗ್ಗೆ ಇವೆಲ್ಲವನ್ನೂ ಹೇಳಿದ್ದಾರೆ.

ಅಜ್ಞಾನದಲ್ಲಿ ಇರುವವರು ಭೂಮಿಯ ಮೇಲೆಯೇ ಇದ್ದು ಪ್ರಯತ್ನಗಳಾಗಿ ನೂರಾರು ವರ್ಷಗಳ ಸಮಯವನ್ನು ವ್ಯರ್ಥ ಮಾಡಿಕೊಳ್ಳುತ್ತಾರೆ. ಆದರೆ ಜ್ಞಾನವುಳ್ಳವರು ಮೇಲಿನ ಲೋಕಗಳಿಗೆ ಹೋಗಿ ಬಹಳಷ್ಟು ತಿಳಿದುಕೊಳ್ಳುತ್ತಾರೆ. ಮುಖ್ಯವಾಗಿ ಈ ಸೃಷ್ಟಿಯಲ್ಲಿ ಭೂಲೋಕವಲ್ಲದೇ ಇರುವ ಲೋಕಗಳ ಬಗ್ಗೆ ಸ್ವಲ್ಪ ಅರಿವನ್ನು ಹೊಂದುತ್ತಾರೆ. ಅಲ್ಲಿ ಇರುವವರಿಗೆ ಜನಾಲೋಕವನನ್ನು ದಾಟಿ ಇರುವ ಉನ್ನತ ಲೋಕಗಳಾದ ಮಹಾಲೋಕ, ತಪೋಲೋಕ, ಸತ್ಯಲೋಕವನ್ನು ಸೇರಬೇಕು ಎಂಬ ಅರಿವು ಉಂಟಾಗುತ್ತದೆ.

ಆ ಅರಿವು ಯಾರಿಗೆ ಇರುತ್ತದೆಯೋ ಅವರು ಭೂಮಿಯ ಮೇಲೆ ಬಂದಾಗ ಅಂತಹ ಲೋಕಗಳನ್ನು ಹೊಂದುವುದಕ್ಕಾಗಿ ಪ್ರಯತ್ನ ಮಾಡುತ್ತಾರೆ. ಅಂತಹ ಪ್ರಯತ್ನವನ್ನು ಮಾಡುತ್ತಿರುವವರೇ ನಾವೆಲ್ಲಾ.

ಇಲ್ಲಿ ಮತ್ತೊಂದು ವಿಷಯವನ್ನು ತಿಳಿದುಕೊಳ್ಳೋಣ. ಮರಳಿಸಿದ ನಂತರ ಪಾಪಗಳನ್ನು ಮಾಡುವವರನ್ನು ಕರೆದುಕೊಂಡು ಹೋಗಲು ಪಿತೃ ದೇವತೆಗಳು ಬರುತ್ತಾರೆಂದು ಹೇಳಿಕೊಂಡಿದ್ದೇವೆ. ಹಾಗೆಯೇ ಧ್ಯಾನ ಮಾಡುತ್ತಾ ಜ್ಞಾನ ಸಂಪಾದಿಸಿಕೊಂಡವರನ್ನು, ಅವರು ಮರಣಿಸಿದ ನಂತರ ಕರೆದುಕೊಂಡು ಹೋಗಲು ಯೋಗಿಗಳು ಬರುತ್ತಾರೆಂದು ಹೇಳಿಕೊಂಡಿದ್ದೇವೆ.

ಅಂದರೆ ಜನಾಲೋಕದ ಕೆಳಗಿನ ಲೋಕಗಳಲ್ಲಿರುವವರನ್ನು ಕರೆದುಕೊಂಡು ಹೋಗಲು ಪಿತೃ ದೇವತೆಗಳು ಹಾಗೆಯೇ ಜನಾಲೋಕವನ್ನು ದಾಟಿ ಇರುವವರನ್ನು ಕರೆದುಕೊಂಡು ಹೋಗಲು ಯೋಗಿಗಳು ಬರುತ್ತಾರೆಂದು ನಾವು ತಿಳಿದುಕೊಂಡಿದ್ದೇವೆ. ಈ ವಿಷಯವನ್ನು ಪತ್ರೀಜಿಯವರು ನಮಗೆ ಹೇಳಿದ್ದಾರೆ. ಇಲ್ಲಿ ಪಿತೃ ದೇವತೆಗಳು ಅಂದರೆ ನಮಗಿಂತಲೂ ಮುಂಚೆ ಮರಣಿಸಿ ಆ ಲೋಕಗಳಲ್ಲಿ ಇರುವವರನ್ನೇ ಪಿತೃದೇವತೆಗಳು ಎನ್ನುತ್ತಾರೆ.

ನಮ್ಮ ತಾತಂದಿರು, ಮುತ್ತಾ ತಂದಿರುವ ಇನ್ನೂ ಮೇಲಿನ ತಲೆಮಾರಿನವರು, ಅವರ ಜನ್ಮಗಳಿಗಾಗಿ ಎದುರು ನೋಡುತ್ತಾ ಅಲ್ಲಿಯೇ ಇರುತ್ತಾರೆ. ಅವರಿಗೆ ಇಂತಹ ಕೆಲಸಗಳನ್ನು ನಿಗಧಿಪಡಿಸಲಾಗಿರುತ್ತದೆ. ಸೃಷ್ಟಿಯಲ್ಲಿ ಇರುವ ವ್ಯವಸ್ತೆ ಇದು. ಹಾಗೆಯೇ ಯಾರಾದರೆ ಧ್ಯಾನ ಮಾಡಿ, ಉನ್ನತ ಸ್ಥಿತಿಗೆ ಸೇರಿ ಮೇಲಿನ ಲೋಕಗಳಲ್ಲಿ ಇರುತ್ತಾರೋ! ಅವರನ್ನು ಯೋಗಿಗಳು ಎನ್ನುತ್ತಾರೆ.

ನಾನು ಒಮ್ಮೆ ಪತ್ರೀಜಿ ಅವರನ್ನು ಕೇಳಿದೆನು. ಗುರುಗಳೇ, ಮರಣಿಸಿದ ನಂತರ ಯಮ ಭಟರು ಬರುತ್ತಾರೆ ಎಂದು ಸಿನಿಮಾಗಳಲ್ಲಿ ತೋರಿಸುತ್ತಾರೆ, ಆದರೆ ನಾವು ಸಹಾಯಕರು ಎಂದು ಹೇಳಿಕೊಳ್ಳುತ್ತಿದ್ದೇವೆ, ಹಾಗಾದರೆ ಈ ಸಹಾಯಕರು ಯಾರು? ಎಂದು ಕೇಳಿದೆನು. ಆಗ ಪತ್ರೀಜಿಯವರು ಸಹಾಯಕರು ಎಂದರೆ ಯಾರೋ ಅಲ್ಲ, ಪಿತೃ ದೇವತೆಗಳು ಎಂದು ಹೇಳುತ್ತಾರೆ. ಆದ್ದರಿಂದ ಯಾರಾದರೆ ಪಾಪಗಳು, ಪುಣ್ಯಗಳನ್ನು ಮಾಡುತ್ತಾ ಇರುತ್ತಾರೋ! ಅವರನ್ನು ಕರೆದುಕೊಂಡು ಹೋಗಲು ಮಾತ್ರವೇ ಪಿತೃ ದೇವತೆಗಳು ಬರುತ್ತಾರೆ. ಇವರೆಲ್ಲಾ ಜನಾಲೋಕದ ಕೆಳಗೆ ಇರುವ ಲೋಕಗಳಿಗೆ ಕರೆದುಕೊಂಡು ಹೋಗುವವರು. ಯಾರಾದರೆ ಜನಾಲೋಕವನ್ನು ದಾಟಿ ಇರುವ ಉನ್ನತ ಲೋಕಗಳಿಗೆ ಹೋಗುವ ಅರ್ಹತೆಯನ್ನು ಸಂಪಾದಿಸುತ್ತಾರೋ! ಅವರನ್ನು ಕರೆದುಕೊಂಡು ಹೋಗಲು ಪಿತೃ ದೇವತೆಗಳು ಬರುವುದಿಲ್ಲ ಯೋಗಿಗಳೇ ಬರುತ್ತಾರೆ. ಏಕೆಂದರೆ? ಮೇಲಿನ ಲೋಕಗಳಿಗೆ ಕರೆದುಕೊಂಡು ಹೋಗಬೇಕು ಎಂದರೆ? ಆ ಲೋಕಗಳಿಂದ ಬಂದವರೇ ಕರೆದುಕೊಂಡು ಹೋಗಬೇಕು. ಹಾಗೆಯೇ ಮೇಲಿನ ಲೋಕಗಳಿಗೆ ನಾವು ಸೇರಿಕೊಂಡರೆ ಅಲ್ಲಿ ಶ್ರೇಷ್ಠರ ಸಾಂಗತ್ಯವನ್ನು ನಾವು ಹೊಂದುತ್ತೇವೆ. ಶ್ರೇಷ್ಠರ ಸಾಂಗತ್ಯವನ್ನು ಹೊಂದುವುದಷ್ಟೇ ಅಲ್ಲ, ನಮಗೆ ಇನ್ನೊಂದು ಆಯ್ಕೆಯೂ ಸಹ ಇರುತ್ತದೆ. ಎಂತಹ ಜನ್ಮ ಬೇಕೆಂದರೆ ಅಂತಹ ಜನ್ಮವನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವಿರುತ್ತದೆ. ಅಂತಹ ಜನ್ಮವನ್ನು ತೆಗೆದುಕೊಂಡು ಭವಿಷ್ಯತ್ತನ್ನು ಇನ್ನಷ್ಟು ಉತ್ತಮವಾಗಿ ರೂಪಿಸಿಕೊಳ್ಳಬಲ್ಲೆವು.

ಏಕೆಂದರೆ? ಅಂತಹವರ ಸಾಂಗತ್ಯ ಲಭಿಸುವುದರಿಂದ, ಅಲ್ಲಿಯೂ ಸಹ ಬಹಳಷ್ಟು ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾ, ಆಧ್ಯಾತ್ಮಿಕವಾಗಿ, ಆತ್ಮ ಪರವಾಗಿ ಬಹಳಷ್ಟು ಅಭಿವೃದ್ಧಿಯಾಗಲು ಅವಕಾಶವಿರುತ್ತದೆ.

ಪತ್ರೀಜಿಯವರು ಭೂಮಿಯ ಮೇಲೆ ಸಹ ಅಂತಹ ಸಜ್ಜನ ಸಾಂಗತ್ಯವನ್ನು ಮಾಡಬೇಕು ಎನ್ನುತ್ತಾರೆ. ಕಾರಣ ಶ್ರೇಷ್ಠ ವ್ಯಕ್ತಿಗಳ ಸಾಂಗತ್ಯವನ್ನು ಮಾಡಿದರೆ ಆ ವಿಷಯಗಳೆಲ್ಲವೂ ತಿಳಿಯುತ್ತವೆ.

ಅದಕ್ಕೆ ಶಂಕರಾಚಾರ್ಯರು "ತ್ರಿಜಗತಿ ಸಜ್ಜನ ಸಂಗತಿ ರೇಕಾ, ಭವತಿ ಭವಾರ್ಣವ ತರಣೇ ನೌಕಾ"ಎಂದಿದ್ದಾರೆ. ಅಂದರೆ ಮೂರು ಲೋಕಗಳಲ್ಲಿಯೂ ಸಹ ಇಂತಹ ದುಃಖಗಳಿಂದ ಹೊರಬರಬೇಕೆಂದರೆ ಸಜ್ಜನ ಸಾಂಗತ್ಯವನ್ನು ಮೀರಿದ್ದು ಯಾವುದೂ ಇಲ್ಲ ಎಂದಿದ್ದಾರೆ.

ನಾವು ಅಂತಹ ಸಂಗತಿಯನ್ನು ಭೂಮಿಯ ಮೇಲೆ ಮಾಡಬೇಕು, ಮೇಲಿನ ಲೋಕಗಳಿಗೆ ಹೋದರೂ ಅಲ್ಲಿಯೂ ಮಾಡಬೇಕು. ಏಕೆಂದರೆ? ಯಾರಾದರೂ ಸರಿ ಆ ಮೇಲಿನ ಲೋಕಗಳನ್ನು ಹೊಂದುವ ಅರ್ಹತೆಯನ್ನು ಸಂಪಾದಿಸಬೇಕು. ಅದಕ್ಕೆ ಸ್ವಲ್ಪ ತೀವ್ರವಾಗಿ ಶ್ರಮಪಡಬೇಕು, ಅಂದರೆ ಅತಿಯಾದ ಸಾಧನೆ ಮಾಡಬೇಕು, ಆತ್ಮದ ಸೇವೆಗಳನ್ನು ಮಾಡಬೇಕು. ಹಾಗೆ ಮಾಡಿದರೆ ಕಡ್ಡಾಯವಾಗಿ ಊರ್ದ್ವಲೋಕಗಳನ್ನು ಸೇರುವ ಅರ್ಹತೆಯನ್ನು ಸಂಪಾದಿಸುತ್ತೇವೆ.

ಆದ್ದರಿಂದ ನೆನಪಿಟ್ಟುಕೊಳ್ಳಿ ಈಗ ನಾವೆಲ್ಲರೂ ಅದೇ ಕೆಲಸವನ್ನೇ ಮಾಡುತಿದ್ದೇವೆ. ಪ್ರತಿದಿನವೂ ೨೦೦೭ ನಲ್ಲಿ ಎರಡೂವರೆ ಗಂಟೆಗಳ ಕಾಲ ನಿಶಬ್ದದಲ್ಲಿ "ಶ್ವಾಸದ ಮೇಲೆ ಗಮನ"ವನ್ನು ಇರಿಸಿ ಧ್ಯಾನ ಮಾಡುತ್ತಿದ್ದೇವೆ. ಅಷ್ಟೇ ಅಲ್ಲ ಅವಕಾಶ ಇರುವಾಗೆಲ್ಲಾ ಧ್ಯಾನ ಮಾಡುತಿದ್ದೇವೆ. ಇದು ನಮಗೆ ಒಂದು ಕಾಲಕ್ಷೇಪವಾಗಿದೆ. ಇನ್ನೊಂದು ವಿಷಯವಿಲ್ಲ. ನಿಜವಾಗಿಯೂ ಒಳ್ಳೆಯ ಅದೃಷ್ಟವೇ ಅಲ್ಲವೇ? ಆದ್ದರಿಂದ ಕಡ್ಡಾಯವಾಗಿ ಜ್ಞಾನವನ್ನು ಹೆಚ್ಚಿಸಿಕೊಳ್ಳೋಣ. ಆ ಉನ್ನತ ಲೋಕಗಳಿಗೆ ಸೇರೋಣ, ಈ ಜನ್ಮದಲ್ಲಿಯೇ ಆ ಸ್ಥಿತಿಯನ್ನು ಸಂಪಾದಿಸೋಣ. ಜನಾ ಲೋಕವನ್ನು ದಾಟಿದರೆ ಸಾಕು, ಸಾತ್ವಿಕ ಸ್ಥಿತಿಯನ್ನು ದಾಟಿದರೇ ಸಾಕು ಊರ್ದ್ವಲೋಕಗಳನ್ನು ತಲುಪುತ್ತೇವೆ.

ಆದ್ದರಿಂದ ತೀವ್ರವಾದ ಧ್ಯಾನ ಸಾಧನೆ ಮಾಡೋಣ, ಆಹಾರದ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸೋಣ.



## ಪಿರಮಿಡ್ ಜ್ಞಾನ ನವರತ್ನಗಳು

೧. ಆತ್ಮವೇ ಪರಮಾತ್ಮ
೨. ಜೀವವೇ ದೇವರು
೩. ದೇಹವೇ ದೇವಾಲಯ
೪. ಶ್ವಾಸವೇ ಗುರುವು
೫. ಸಮಯವೇ ಸಾಧನೆ
೬. ಸಹನೆಯೇ ಪ್ರಗತಿ
೭. ಅನುಭವವೇ ಜ್ಞಾನ
೮. ದಾನವೇ ಧರ್ಮ
೯. ಧರ್ಮವೇ ಪುಣ್ಯ

ಬ್ರಹ್ಮರ್ಷಿ ಪತ್ರೀಜಿ

**ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್, ಇಂಡಿಯಾ**
ಧ್ಯಾನದ ಬಗ್ಗೆ ಮತ್ತಷ್ಟು ಸಮಾಚಾರಕ್ಕಾಗಿ ಈ ಕೆಳಗಿನ ವೆಬ್‌ಸೈಟ್ ಸಂದರ್ಶಿಸಿ
https: //www.youtube.com/pmckannada • www.meditationeverywhere.org • www.pssmovement.org

**ಶ್ರೀರಾಮ ಪಬ್ಲಿಕೇಶನ್ಸ್**
ಶ್ರೀರಾಮಧಾಮ ಧ್ಯಾನಕೇಂದ್ರ, ನಾರಾಯಣಪ್ಪ ಗಾರ್ಡನ್,
ವೈಟ್ ಫೀಲ್ಡ್, ಬೆಂಗಳೂರು - ೫೬೦ ೦೬೬
ಸಂಪರ್ಕಿಸಿ : ಹೆಚ್.ಎನ್. ಶ್ರೀನಿವಾಸ, ೯೪೪೯೮೮೫೫೦೩
ವಿಜಯಲಕ್ಷ್ಮಿ ಎನ್.ಎನ್. + ೯೧ ೮೦೫೦೦ ೮೨೮೮೮